# ಒಡನಾಡಿ

ಸಾಹಿತ್ಯ ಸಂಚಿಕೆ

## ಭಾರತೀಯ ಭಾಷಾ ಸಾಹಿತ್ಯ : ವರ್ಗ ನೆಲೆ

೭—೮
ಮೇ–ಜೂನ್
ಜುಲೈ-ಆಗಸ್ಟ್
೧೯೭೭

ಹೊಸ ಕನ್ನಡ ಸಾಹಿತ್ಯದ ವರ್ಗಸ್ವಭಾವ * ತೆಲುಗು ಸಾಹಿತ್ಯದಲ್ಲಿ ವರ್ಗದೃಷ್ಟಿ * ತಮಿಳು ಸಾಹಿತ್ಯದ ವರ್ಗತಳಪಾಯ * ಮಲಯಾಳಂ ಪ್ರಗತಿಪರ ಸಾಹಿತ್ಯದ ಪುನರುಜ್ಜೀವನ * ಮರಾಠಿ ಸಾಹಿತ್ಯ: ಸಾಮಾಜಿಕ ಸ್ತರಗಳು ಮತ್ತು ತನ್ನತನದ ಪ್ರಶ್ನೆ * ಗುಜರಾತಿ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ * ಹಿಂದೀ ಸಾಹಿತ್ಯದ ಆಯಾಮಗಳು*ಪಂಜಾಬಿ ಸಾಹಿತ್ಯದ ವರ್ಗ ಸಮಸ್ಯೆಗಳು * ಉರ್ದು ಸಾಹಿತ್ಯದ ವರ್ಗನೆಲೆ * ಕಾಶ್ಮೀರ ಸಾಹಿತ್ಯದ ಜನತಾ ಸಾಮೀಪ್ಯ * ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆಯ ಸಮಸ್ಯೆಗಳು * ನೆರೂದಾಕಾವ್ಯ.




ವಿಕಾಸ ಪ್ರಕಾಶನ ಯಾದವಗಿರಿ, ಮೈಸೂರು, 570002

# ಒಡನಾಡಿ


ಸಂಪಾದಕ

ಜಿ. ಹೆಚ್. ರಾಮರಾವ್

ಸಹ-ಸಂಪಾದಕ

ಹೆಚ್. ಜಿ. ಸಣ್ಣಗುಡ್ಡಯ್ಯ, ಎಂ.ಎ.



ವ್ಯವಹಾರ

ವಿಕಾಸ ಪ್ರಕಾಶನ

೫, ವಿದ್ಯಾಶಾಲಾ ಬಡಾವಣೆ, ಯಾದವಗಿರಿ

ಮೈಸೂರು ೫೭೦೦೦೨

ಚಂದಾ

ವಾರ್ಷಿಕ : ಹತ್ತು ರೂಪಾಯಿ

ಬಿಡಿಪ್ರತಿ : ಎರಡು ರೂಪಾಯಿ

# ಒಡನಾಡಿ

(ವಿಕಾಸ ಪ್ರಕಾಶನದಿಂದ ಎರಡು ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ)

ಸಂಪಾದಕ : ಜಿ. ಹೆಚ್. ರಾಮರಾವ್

ಸಂಪುಟ 2] ಮೇ-ಜೂನ್-ಜುಲೈ-ಆಗಸ್ಟ್ 1976 [ಸಂಚಿಕೆ 7-8

## ಪರಿವಿಡಿ


ಬರಗೂರು ರಾಮಚಂದ್ರಪ್ಪ 1 ಹೊಸ ಕನ್ನಡ ಸಾಹಿತ್ಯದ ವರ್ಗ ಸ್ವಭಾವ

ಕೆ. ಕುಟುಂಬರಾವ್ 27 ತೆಲುಗು ಸಾಹಿತ್ಯದಲ್ಲಿ ವರ್ಗ ದೃಷ್ಟಿ

ಡಾ॥ ಕೈಲಾಸಪತಿ ಮತ್ತು ಶ್ರೀಮತಿ ಚಿತ್ರಲೇಖ ಮೌನಗುರು 37 ಆಧುನಿಕ ತಮಿಳು ಸಾಹಿತ್ಯ : ವರ್ಗ ತಳಪಾಯ

ಪಿ. ಗೋವಿಂದಪಿಳ್ಳೆ 55 ಮಲೆಯಾಳಂ ಪಗತಿಪರ ಸಾಹಿತ್ಯದ ಪುನರುಜ್ಜೀವನ : ಒಂದು ಕಿರುನೋಟ

ಸುಧೀರ್ ಬೇಡೇಕರ್ 62 ಮರಾಠೀ ಸಾಹಿತ್ಯದ ಸಾಮಾಜಿಕ ಸ್ತರಗಳು

ಸುಧೀಷ್ ಪಚೌರಿ 74 ಸಮಕಾಲೀನ ಹಿಂದೀ ಸಾಹಿತ್ಯದ ಆಯಾಮಗಳು

ಅವಂತಿ ಕುಮಾರ್ ದಾವೆ 89 ಗುಜರಾತಿ ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ

ಸುಧಾಕರ ಜೋಷಿ ಮತ್ತು ಅನಿಲ್ ಬಾಂಡೇಕರ್ 95 ಸಮಕಾಲೀನ ಮರಾಠೀ ಸಾಹಿತ್ಯ : ತನ್ನತನದ ಪ್ರಶ್ನೆ

ಸುತೀಂದರ್ ಸಿಂಗ್‌ನೂರ್ 111 ಆಧುನಿಕ ಪಂಜಾಬಿ ಸಾಹಿತ್ಯ : ವರ್ಗನೆಲೆ ಹಾಗೂ ವರ್ಗ ಸಮಸ್ಯೆಗಳು

ಡಾ॥ ಮುಹಮ್ಮದ್ ಹಸನ್ 118 ಉರ್ದು ಸಾಹಿತ್ಯ : ವರ್ಗನೆಲೆ

ಮೋತಿಲಾಲ್ ಸಾಕಿ 127 ಕಾಶ್ಮೀರಿ ಸಾಹಿತ್ಯ : ಜನತಾ ಸಾಮೀಪ್ಯ

ಕೆ.ಪಿ. ವಾಸುದೇವನ್ ಮತ್ತು ಗಂಗಾಧರಮೂರ್ತಿ 135 ಮಾರ್ಕ್ಸ್‌ವಾದಿ ವಿಮರ್ಶೆ : ಕೆಲವು ಸಮಸ್ಯೆಗಳು

ಪುಸ್ತಕ ವಿಮರ್ಶೆ

ಗಂಗಾಧರಮೂರ್ತಿ 146 ಮರಳಿ ಬರುವೆ


---

## ಈ ಸಂಚಿಕೆಯ ಲೇಖಕರು

**ಬರಗೂರು ರಾಮಚಂದ್ರಪ್ಪ,** ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

**ಕೊಡವಟಿಗಂಟಿ ಕುಟುಂಬರಾವ್,** ತೆಲುಗು ಸಾಹಿತ್ಯದ ಪ್ರಮುಖ ವಿಮರ್ಶಕರು ಹಾಗೂ 'ಚಂದಮಾಮ' ಪತ್ರಿಕೆ ತೆಲುಗು ವಿಭಾಗದ ಸಂಪಾದಕ ಮಂಡಲಿಯಲ್ಲಿದ್ದಾರೆ.

**ಪ್ರೊ. ಕೆ. ಕೈಲಾಸಪತಿ,** ಶ್ರೀಲಂಕಾದ ಕೊಲಂಬೊ ವಿಶ್ವವಿದ್ಯಾನಿಲಯದ ಉಪಕುಲಪತಿಗಳು.

**ಶ್ರೀಮತಿ ಚಿತ್ರಲೇಖ ಮೌನಗುರು,** ಸಿಲೋನ್ ವಿಶ್ವವಿದ್ಯಾನಿಲಯದಲ್ಲಿದ್ದಾರೆ.

**ಪಿ. ಗೋವಿಂದಪಿಳ್ಳೈ,** ಕೇರಳದ "ದೇಶಾಭಿಮಾನಿ" ಗುಂಪಿನ ಪತ್ರಿಕೆಗಳ ಮುಖ್ಯ ಸಂಪಾದಕರು.

**ಎಸ್. ಎಮ್. ಜೋಷಿ,** ನಾಗಪುರ ಕೃಷಿ ಕಾಲೇಜಿನ ಇಂಗ್ಲಿಷ್ ಅಧ್ಯಾಪಕರು.

**ಅನಿಲ್ ಬಾಂದೇಕರ್,** ನಾಗಪುರದ ತಾಂತ್ರಿಕ ಶಾಲೆಯ ಇಂಗ್ಲಿಷ್ ಅಧ್ಯಾಪಕರು.

**ಸುಧೀರ್ ಬೇಡೇಕರ್,** ಪುಣೆಯ 'ಮಗೋವಾ' ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿದ್ದಾರೆ.

**ಸುದೀಷ್ ಪಚೌರಿ,** ದೆಹಲಿ ವಿಶ್ವವಿದ್ಯಾನಿಲಯದ ಹಿಂದೀ ಅಧ್ಯಾಪಕರು.

**ಅವಂತಿಕುಮಾರ್ ದಾವೆ,** ಬೊಂಬಾಯಿನಲ್ಲಿ ಪತ್ರಿಕಾಕರ್ತರು ಮತ್ತು "ಸೋವಿಯತ್ ದೇಶದ" ಗುಜರಾತಿ ಅವತರಣಿಕೆಯ ಸಂಪಾದಕ ಮಂಡಲಿಯ ಸದಸ್ಯರು.

**ಸುತೀಂದರ್ ಸಿಂಗ್ ನೂರ್,** ದೆಹಲಿಯ ಜವಹರ್‌ಲಾಲ್‌ನೆಹರೂ ವಿಶ್ವವಿದ್ಯಾನಿಲಯದಲ್ಲಿ ಪಂಜಾಬಿ ಸಾಹಿತ್ಯದ ಅಧ್ಯಾಪಕರು.

**ಡಾ॥ ಮುಹಮ್ಮದ್ ಹಸನ್,** ದೆಹಲಿಯ ಜವಹರ್‌ಲಾಲ್ ವಿಶ್ವವಿದ್ಯಾನಿಲಯದಲ್ಲಿ ಭಾಷಾ ಸಂಸ್ಥೆಯ ನಿರ್ದೇಶಕರು.

**ಮೋತಿಲಾಲ್ ಸಾಕಿ,** ಶ್ರೀನಗರದಲ್ಲಿರುವ ಸಾಹಿತ್ಯ ಅಕಾಡಮಿ ಸದಸ್ಯರು.

**ಕೆ. ಪಿ. ವಾಸುದೇವನ್,** ಹಾಸನದಲ್ಲಿರುವ ಕೇಂದ್ರ ಸರ್ಕಾರದ ಭೂಗರ್ಭ ಶಾಸ್ತ್ರದ ಇಲಾಖೆಯಲ್ಲಿ ಸಂಶೋಧಕ ಸಹಾಯಕರಾಗಿದ್ದಾರೆ.

**ಬಿ. ಗಂಗಾಧರಮೂರ್ತಿ,** ಕೇರಾಫ್ 'ಒಡನಾಡಿ' ಪತ್ರಿಕಾಲಯ.

### ಕನ್ನಡಿಸಿದವರು

**ಕೆ. ವೀರಭದ್ರ,** ಮೈಸೂರಿನ ಜೆ. ಎಸ್. ಎಸ್. ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರು. (ತೆಲುಗು)

**ಡಾ|| ಕೆ. ವಿ. ರಮೇಶ್,** ಕೇಂದ್ರ ಸರ್ಕಾರದ ಪ್ರಾಚ್ಯ ವಸ್ತು ಸಂಶೋಧನಾಲಯದ ಉಪನಿರ್ದೇಶಕರು. (ತಮಿಳು)

**ಕೆ. ಸುಬ್ರಹ್ಮಣ್ಯ,** ಬೆಸಗರಹಳ್ಳಿ ಜೂನಿಯರ್ ಕಾಲೇಜಿನ ಅಧ್ಯಾಪಕರು. (ತಮಿಳು)

**ಎಸ್. ನಾರಾಯಣ,** ಕೇರಾಫ್ "ಒಡನಾಡಿ" ಪತ್ರಿಕಾಲಯ. (ಮಲೆಯಾಳಂ)

**ಓ. ಎಲ್. ನಾಗಭೂಷಣಸ್ವಾಮಿ,** ಶಿವಮೊಗ್ಗ ಸಹ್ಯಾದ್ರಿ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರು. (ಮರಾಠಿ)

**ವಿ. ಎನ್. ಲಕ್ಷ್ಮೀನಾರಾಯಣ,** ಶಿವಮೊಗ್ಗ ಕಮಲಾ ನೆಹರೂ ಮಹಿಳಾ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರು. (ಮರಾಠಿ)

**ತಿಪ್ಪೇಸ್ವಾಮಿ,** ಮೈಸೂರಿನ ಮಾನಸಗಂಗೋತ್ರಿಯಲ್ಲಿ ಹಿಂದಿ ಅಧ್ಯಾಪಕರು. (ಹಿಂದಿ)

**ಎಂ. ಎ. ಪಾಷಾ,** ಮೈಸೂರಿನ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೇಜಸ್‌ನಲ್ಲಿ ಸಂಶೋಧಕರು. (ಗುಜರಾತಿ)

**ಪಿ. ಮಲ್ಲಾರಿರಾವ್,** ಮೈಸೂರಿನ ಇಂಗ್ಲಿಷ್ ಲಾಂಗ್ವೇಜ್ ಸೆಕೆಂಡರಿ ಸೆಂಟರ್‌ನಲ್ಲಿ ಅಧ್ಯಾಪಕರು. (ಪಂಜಾಬಿ)

**ಎಂ. ಎ. ಪಾಷಾ,** ಮೈಸೂರಿನ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೇಜಸ್‌ನಲ್ಲಿ ಸಂಶೋಧಕರು. (ಉರ್ದು)

## ಕನ್ನಡಿಸುವುದಕ್ಕೆ ಸಹಾಯ ಮಾಡಿದವರು

ಮೈಸೂರಿನ ಸಿ.ಐ.ಐ.ಎಲ್.ನ **ರಣಜಿತ್‌ಸಿಂಗ್ ರಂಘೀಲ**

ಮೈಸೂರು ಮಾನಸಗಂಗೋತ್ರಿ ಉರ್ದುವಿನ **ಡಾ|| ಮುಹಮ್ಮದ್ ಹಾಶೀಮ್ ಆಲಿ**

ಮೈಸೂರಿನ **ಶ್ರೀಮತಿ ಅಜಮುತುನ್ನೀಸ ಪಾಷ**

# ಸಂಪಾದಕರಿಂದ .

ಮಾನ್ಯ ಓದುಗರೆ,

ವಿಶೇಷ ಸಂಚಿಕೆಯನ್ನು ಹೊರತರುವುದು ಕಷ್ಟದ ಕೆಲಸ. ಅದರಲ್ಲೂ ವಿಶಿಷ್ಟ ದೃಷ್ಟಿ ಕೋನದಿಂದ ಬರೆದ ಲೇಖನಗಳು ಬೇಕೆನಿಸಿದಾಗ ಕಷ್ಟ ಇನ್ನೂ ಹೆಚ್ಚುತ್ತದೆ. ದೇಶದ ಬದಲಾದ ಸನ್ನಿವೇಶದಲ್ಲಿ ಸ್ಪಷ್ಟನಿಲುವಿನ ಲೇಖಕರು ದುಸ್ತರವೆನಿಸುತ್ತದೆ. ನಮ್ಮ ಈ ಪ್ರಯತ್ನದಲ್ಲಿ ನಮಗೆ ಅನ್ನಿಸಿದ ಭಾವನೆಗಳು ನಮಗಷ್ಟೇ ವಿಶೇಷವಲ್ಲ. ಇತರ ಭಾಷೆಗಳಲ್ಲಿ ಈ ರೀತಿಯ ಕೆಲಸವನ್ನು ಕೈಕೊಂಡ ಬಳಗದಿಂದ ನಮಗೆ ಬಂದಿರುವ ಪತ್ರಗಳು ಹೆಚ್ಚು ಕಡಿಮೆ ಈ ಅನುಭವವನ್ನೇ ದೃಢೀಕರಿಸುತ್ತವೆ. ಅನೇಕರು ನಮ್ಮ ಈ ಪ್ರಯತ್ನವನ್ನು ಪ್ರಶಂಸಿಸಿ ಬರೆದಿರುವುದೂ ಇಂಥ ಅನುಭವಗಳ ತೀವ್ರತೆಯಿಂದಲೇ ಎನ್ನುವುದು ಗೊತ್ತಾಗುತ್ತದೆ.

'ಒಡನಾಡಿ'ಯ ಈ ಪ್ರಯತ್ನವನ್ನು ಇತರ ಭಾಷೆಯಲ್ಲಿನ ಅನೇಕ ಖ್ಯಾತ ವಿಮರ್ಶಕರು 'ದಿಟ್ಟಹೆಜ್ಜೆ' ಸ್ಪಷ್ಟಯೋಚನೆಯನ್ನು ತೋರಿಸಿಕೊಡುವ ಪ್ರಯತ್ನ' ಮುಂತಾಗಿ ಹೊಗಳಿ ಬರೆದಿರುವುದನ್ನು ಸಂಕೋಚದ ಆದರೆ ಹೆಮ್ಮೆಯ ವಿಷಯವಾಗಿ ತೆಗೆದುಕೊಳ್ಳುತ್ತೇವೆ.

ನಮ್ಮ ಈ ಪ್ರಯತ್ನದಲ್ಲಿ ನಾವು ಅಂದುಕೊಂಡಿದ್ದಂತೆ ಎಲ್ಲವೂ ನಡೆದಿಲ್ಲವಾದರೂ ಬಹುಪಾಲು ಕೆಲಸವನ್ನು ಪ್ರಾಮಾಣಿಕತೆಯಿಂದ ಮಾಡಿದ್ದೇವೆ ಅನ್ನುವ ತೃಪ್ತಿ ನಮಗಿದೆ. ಮತ್ತು ಹೀಗೆ ಗಳಿಸಿದ ಅನುಭವ ಮುಂದೆ ಇನ್ನೂ ಹೆಚ್ಚು ಪಕ್ವವಾಗಿ 'ಒಡನಾಡಿ' ಓದುಗರಿಗೆ ಒದಗುವ ಆಶಯ ನಮಗಿದೆ. ಹಾಗಾಗಿಯೆ ಓದುಗರೂ ಹಿತೈಷಿಗಳೂ ನಮ್ಮ ಈ ಪ್ರಯತ್ನದ ಬೆಂಬಲಿಗರೂ ಮತ್ತು ಮಾರ್ಗದರ್ಶಿಗಳೂ ಆಗಿ ಮುಂದುವರೆಯುತ್ತಾರೆನ್ನುವುದು ನಮ್ಮ ನಂಬಿಕೆ.

ನಮಗೆ ಬಂದ ಎಲ್ಲ ಭಾಷೆಗಳ ಲೇಖನಗಳನ್ನೂ ಅಚ್ಚು ಮಾಡುವುದು ಈ ಸಂಚಿಕೆಯ ಸಂಪನ್ಮೂಲದ ಮಿತಿಗೆ ಹೊರತಾದ್ದರಿಂದ (ಮುನ್ನೂರು ಪುಟಗಳಿಗೂ ಹೆಚ್ಚಾಗಬಹುದಾದ್ದರಿಂದ) ಇಲ್ಲಿನ ಕೆಲವು ಲೇಖನಗಳನ್ನು ಒಂದು ಕ್ರಮದಲ್ಲಿ ಜೋಡಿಸಿದ್ದು, ಉಳಿದ ಲೇಖನಗಳನ್ನು ಮುಂದಿನ ಸಂಚಿಕೆಗಳಲ್ಲಿ ಒಂದೊಂದಾಗಿ ಪ್ರಕಟಿಸಬೇಕೆಂದಿದ್ದೇವೆ.

ಈ ಸಂಚಿಕೆಯನ್ನು ಹೊರತರುವಲ್ಲಿ ಬಹಳ ಜನ ಸಹಾಯ ಮಾಡಿದ್ದಾರೆ. ಅವರಲ್ಲಿ ಲೇಖಕರು ಮತ್ತು ಆಯಾ ಭಾಷೆಗಳಿಂದ ಕನ್ನಡಕ್ಕೆ ಅನುವಾದಿಸಿದವರು ನಮ್ಮ ಶ್ರಮವನ್ನು ಸಮವಾಗಿಯೇ ಹಂಚಿಕೊಂಡವರು ಎನ್ನಬೇಕು. ಅವರಿಗೆ ನಮ್ಮ ಕೃತಜ್ಞತೆಗಳು. ನಮ್ಮ ಈ ಪ್ರಯತ್ನವು ಯಶಸ್ವಿಯಾಗುವುದಕ್ಕೆ ಕಾರಣರಾದವರು ಹಲವರಿದ್ದಾರೆ. ಸಿ. ಐ. ಐ. ಎಲ್‌.ನ ಡಾ॥ ಇ. ಅಣ್ಣಾಮಲೈ, ರಣಜಿತ್‌ಸಿಂಗ್ ರಂಘೀಲಾ, ಮೈಸೂರು ವಿಶ್ವವಿದ್ಯಾನಿಲಯದ ಉರ್ದುವಿನ ಡಾ॥ ಮಹಮ್ಮದ್ ಹಾಷೀಮ್ ಅಲಿ, ಪುಣೆಯ ಗೋಖಲೆ ಇನ್‌ಸ್ಟಿಟ್ಯೂಟಿನ ಶ್ರೀಪಾದಜೋಷಿ, ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದ ಡಾ॥ ಮೋಹನ್‌ತಂಪಿ ಇವರ ಸಹಾಯವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

ಬರಗೂರು
ರಾಮಚಂದ್ರಪ್ಪ

# ಹೊಸ ಕನ್ನಡ ಸಾಹಿತ್ಯದ ವರ್ಗ ಸ್ವಭಾವ

[ಮುಖ್ಯ ಘಟ್ಟಗಳನ್ನು ಗಮನಿಸಿ]

ಕೆಲವು ಅಪರೂಪದ ಸಂದರ್ಭಗಳನ್ನು ಬಿಟ್ಟರೆ, ಉಳಿದಂತೆ ಹಳಗನ್ನಡ ಸಾಹಿತ್ಯವು ಆಳದಲ್ಲಾದರೂ ಆಳುವವರ್ಗದ ಆಶಯಕ್ಕೆ ಒತ್ತುಕೊಟ್ಟಿದೆ ಎನ್ನಬಹುದು. ಇದು ಚರಿತ್ರೆಯ ಅನಿವಾರ್ಯತೆಯೂ ಹೌದು. ಈ ಅನಿವಾರ್ಯತೆಯನ್ನು ಮೀರಿ ಚರಿತ್ರೆ ಸೃಷ್ಟಿಸುವ ಪ್ರಯತ್ನಗಳು (ಉದಾ: ವಚನ ಚಳುವಳಿ) ನಡೆದಿದ್ದರೂ ಸಾಂಸ್ಕೃತಿಕವಾಗಿ ಧೋರಣೆಗೆ ಒದಗಿದ ಅನಿವಾರ್ಯ ಮಿತಿ ಮತ್ತು ವ್ಯವಸ್ಥೆಯ ಹಿಡಿತ ಕನ್ನಡ ಸಾಹಿತ್ಯದ ಮೇಲೆ ದಟ್ಟ ಪರಿಣಾಮ ಬೀರಿರುವುದು ಸುವೇದ್ಯ. ಆದರೂ ಆಳುವ ವರ್ಗದ ಆಶ್ರಯ ದಲ್ಲಿದ್ದು ಆ ದೃಷ್ಟಿಕೋನಕ್ಕೆ ಹೊಂದಿಕೊಳ್ಳಬೇಕಾಗಿ ಬಂದ ಕವಿಗಳೂ ಸ್ವತಂತ್ರ ಮನೋ ಧರ್ಮವನ್ನು ತೋರಿಸುವ ಪ್ರಯತ್ನ ಮಾಡಿ ಚರಿತ್ರೆಯ ಚಲನ ಶೀಲತೆಗೆ ಕ್ರಿಯಾಶಕ್ತಿ ಯಾದದ್ದು ಸುಳ್ಳಲ್ಲ. ಈ ಕಾರಣದಿಂದಲೇ ಪಂಪನಂಥ ಕವಿಯಲ್ಲಿ ಕಂಡುಬರುವ ಮಿತಿಗಳು ಆ ಕಾಲದ ವ್ಯಾಖ್ಯಾನವೂ ಆಗಬಹುದು. ಆವತ್ತಿನ ವ್ಯವಸ್ಥೆಯ ಭಾಷೆಯಾಗಿದ್ದ ಅಂದರೆ ಕೆಲವೇ ಜನರ ಸ್ವತ್ತಾಗಿ ರಾಜಮನ್ನಣೆಗೆ ಅರ್ಹವಾಗಿ ಪ್ರತಿಷ್ಠಿತವಾಗಿದ್ದ ಸಂಸ್ಕೃತ ಭಾಷೆಯ ಬಳಕೆಯೊಂದಿಗೆ ಪಂಪನು ಕನ್ನಡ ದೇಸಿಯನ್ನು ಉಪಯೋಗಿಸಿದ್ದು ಕೇವಲ ವೈವಿಧ್ಯಕ್ಕೆಂದು ಹೇಳಲಾಗದು; ಅಥವಾ ಮಾರ್ಗ-ದೇಸಿಗಳ ಸಮನ್ವಯ ಶೈಲಿಯೆಂದು ಹೇಳಿ ಇತರ ಕಾರಣ ಹುಡುಕದಿರುವುದು ಸಾಧುವಾಗದು. ವ್ಯವಸ್ಥೆಯ ಭಾಷೆಯೊಂದಿಗೆ ಕನ್ನಡ ದೇಸಿಯನ್ನು ಬಳಸುವ ಧೋರಣೆ ಕನ್ನಡ ಸಾಹಿತ್ಯದ ಪ್ರಾರಂಭದ ದಿನಗಳಲ್ಲಿ ಆದದ್ದು ಅರ್ಥಪೂರ್ಣವಾಗಿದೆ. ಮುಂದೆ ಸಂಭವಿಸಿದ ಆಡುನುಡಿಯ ಬಳಕೆಯ ಹಿಂದೆ ಚಾರಿತ್ರಿಕ ಚಾಲನೆಯಾಗಿ ಇದೂ ಸೇರುತ್ತದೆಯೆಂಬುದು ಮುಖ್ಯ ; ಅಲ್ಲದೆ ಪಂಪ ವೈರುಧ್ಯ ಗಳುಳ್ಳ ಕವಿ ; ಜೈನ ಮತವನ್ನು ಒಪ್ಪಿದ್ದಾಗಲೂ 'ಮಾನವ ಕುಲ ತಾನೊಂದೆ ವಲಂ' ಎಂದು ಹೇಳಿಸಿರುವುದು, ಆಸ್ಥಾನ ಪಂಡಿತನಾಗಿದ್ದರೂ 'ಪೆರರೀವುದೇಂ....ಪೆರರಿಂದ ಮಪ್ಪುದೇಂ' ಮುಂತಾಗಿ ಹೇಳುವುದು, ಅರಿಕೇಸರಿಯನ್ನು ಅರ್ಜುನನ ಮುಖಾಂತರ ವೈಭವಿಸಿದರೂ ಭಾರತದಲ್ಲಿ ಕರ್ಣನನ್ನು ಮಾತ್ರ ನೆನೆಯಬೇಕೆನ್ನುವುದು........ಇತ್ಯಾದಿ. ಈ ವೈರುಧ್ಯಗಳು ವ್ಯಕ್ತಿಯ ಆಂತರಿಕ ಸಂಘರ್ಷ ಮತ್ತು ಕಾಲದ ಕ್ರಿಯೆಯನ್ನು ಸೂಚಿಸುತ್ತವೆ. ಆಳುವವರ್ಗದ ಹಿಡಿತದ ಮಿತಿಯಲ್ಲಿ ಸಂಭವಿಸಿದ ಈ ಕ್ರಿಯೆ ಗಮನಿಸ ಬೇಕಾದ್ದು.

ಕರ್ನಾಟಕದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯ ಚರಿತ್ರೆಯಲ್ಲಿ ಪ್ರಥಮ

ಮಹತ್ವದ ಚಳುವಳಿ ಸಂಭವಿಸಿದ್ದು ವಚನಕಾರರಿಂದ; ಆಸ್ಥಾನವನ್ನು ತ್ಯಜಿಸಿ ಸಾಮಾಜಿಕ ಸಂಬಂಧ ಏರ್ಪಡಿಸಿಕೊಂಡ ಸಾಹಿತ್ಯ, ದೊಡ್ಡ ಪ್ರಮಾಣದ ಆಡುನುಡಿಯ ಪ್ರಯೋಗ,—ಇವು ಮಹತ್ವದ ಅಂಶಗಳು. ವೈದಿಕ ಧರ್ಮದ ಅಸಹನೀಯ ಕಟ್ಟುಕಟ್ಟಳೆಗಳ ವಿರುದ್ಧ ನಡೆದ ವಚನ ಚಳುವಳಿ ತನ್ನದೇ ವರ್ಗವೊಂದನ್ನು ಸೃಷ್ಟಿಸಿತು. ಅಲ್ಲಿಯವರೆಗೆ ಸಾಮಾಜಿಕ ಅನ್ಯಾಯಕ್ಕೊಳಗಾಗಿದ್ದ ದುಡಿಮೆಗಾರರನ್ನು ಆಕರ್ಷಿಸುವುದರ ಮೂಲಕ ವಿಶಿಷ್ಟ ಶಕ್ತಿ ತಂದುಕೊಂಡಿತು.

ಯಾವುದೇ ಚಳುವಳಿ ತಾನು ಹುಟ್ಟಿದ ಸಂದರ್ಭದಲ್ಲಿ ಪ್ರಗತಿಪರವಾಗಿರುತ್ತದೆ; ಅಂದರೆ ಹೊಸ ಚಳುವಳಿಯ ಜನ್ಮವೇ ಹಳೆಯದರ ಬಗೆಗಿನ ಅತೃಪ್ತಿಯ ಸಾಕ್ಷಿ. ಆದ್ದರಿಂದ ಹಿಂದಿನ ಪ್ರತಿಷ್ಠಿತ ಶಕ್ತಿಗಳಿಂದ ಭಿನ್ನವಾದ—ತತ್‌ಕ್ಷಣದಲ್ಲಂತೂ ನಿಜಕ್ಕೂ ಭಿನ್ನವಾದ—ಧೋರಣೆಯನ್ನು ತಾಳಿದ ಸಂಘಟನೆ ಸ್ವಾಭಾವಿಕ. ವಚನಕಾರರು ಸಾಹಿತ್ಯ ರೂಪದ ದೃಷ್ಟಿಯಿಂದ ಹಳೆಯದನ್ನು ತೊರೆದು ನಿಂತದ್ದು ಹೋರಾಟದ ಅವಿಭಾಜ್ಯ ಅಂಗವಾಗಿದೆ; ವಚನಗಳ ಗದ್ಯಗಂಧಿತನ, ಆಡುಮಾತು, ಆಕಾರಗಳು ಹೋರಾಟದ ಧೋರಣೆಯಿಂದಲೇ ಸಮರ್ಥ ಆಗುತ್ತವೆ. ಒಟ್ಟಾರೆ ಹೋರಾಟ ಕೇವಲ ಸಾಮಾಜಿಕ ಅಥವಾ ಸಾಹಿತ್ಯಿಕ ವಾಗದೆ ಪರಸ್ಪರ ಸಂಬಂಧಿಯಾದ ಅನಿವಾರ್ಯತೆ ಇಲ್ಲಿದೆ. ಆದ್ದರಿಂದಲೇ ಎರಡು ವಿಭಾಗದಲ್ಲೂ ಬದಲಾವಣೆಯ ತೀವ್ರತೆ ಕಾಣಿಸಿದ್ದು. ಆದರೆ ಈ ಹೋರಾಟದ ಮಿತಿ ಗಳು ಅದರ ಧೋರಣೆಯಲ್ಲೇ ಇವೆ. ಧಾರ್ಮಿಕ ಸ್ವರೂಪದ ಚಳುವಳಿ ಸ್ವಾಭಾವಿಕವಾಗಿ ಅದನ್ನು ತಳಹದಿಯಾಗಿಟ್ಟುಕೊಂಡಿತು. ಬಲಿಷ್ಠ ವರ್ಗ ಬಡವರನ್ನು ಕಡೆಗಣಿಸಿದ ಸತ್ಯ ಕೆಲವು ವಚನಕಾರರಿಗೆ ಗೊತ್ತಿತ್ತಾದರೂ ಹೋರಾಟದ ಮೂಲೋದ್ದೇಶದ ಮುಖಾಂತರ ಅದನ್ನು ವ್ಯಾಖ್ಯಾನ ಮಾಡಿರುವುದರಿಂದ, ಶೋಷಣೆಯ ಸಮಗ್ರತೆಯ ಪತ್ತೆಗಿಂತ ವ್ಯವಸ್ಥೆಯ ಸುಧಾರಿತ ಮಾದರಿಯೊಂದು ಗುರಿಯಾಗಿರುವುದು ವಚನ ಸಾಹಿತ್ಯದಲ್ಲಿ ವ್ಯಕ್ತವಾಗಿದೆ; ಆವತ್ತಿಗೆ ಇದು ತೀರ ಸ್ವಾಭಾವಿಕ ಆದ್ದರಿಂದ ಈ ಚಳುವಳಿಯ ಸ್ವರೂಪ ನಮ್ಮ ಸಾಂಸ್ಕೃತಿಕ ಪರಂಪರೆ ಒಡ್ಡುವ ಮಿತಿಗಳನ್ನು ಚೆನ್ನಾಗಿ ಪರಿಚಯಿಸುತ್ತದೆ.

ನಾನು ಈ ಎರಡು ಘಟ್ಟಗಳನ್ನು ಪ್ರಾಸಂಗಿಕವಾಗಿ, ಆದರೆ ಪ್ರಾತಿನಿಧಿಕವಾಗಿ ಪ್ರಸ್ತಾಪಿ ಸಿದ್ದೇನೆ; ಈ ಪ್ರಸ್ತಾಪ ಯಾರನ್ನೇ ಆಗಲಿ ಸಾರಾಸಗಟು ನಿರಾಕರಿಸುವುದು ಕಷ್ಟ ಎಂಬುದನ್ನು ಸೂಚಿಸುವುದು. ತನ್ನ ವೈರುಧ್ಯಗಳ ನಡುವೆಯೂ ಒಬ್ಬ ಕವಿ ಅಥವಾ ಸಾಹಿತ್ಯಿಕ ಸಂಪ್ರದಾಯ ಕಡೆಗೆ ತಲಪುವ ಧೋರಣೆ ನಮಗೆ ಈಗ ರೆಲಿವೆಂಟಾಗದಿದ್ದಾಗಲೂ ಆಯಾ ಕಾಲದ ಸ್ಥಿತಿಯನ್ನು ಗಣನೆಗೆ ತೆಗೆದುಕೊಂಡು ಮಿತಿಗಳನ್ನು ಚಾರಿತ್ರಿಕ ನೆಲೆಯಲ್ಲಿ ನೋಡುವುದು ಅಗತ್ಯ. ಆದರೆ ಮಹತ್ವಗಳ ಜೊತೆಗೆ ಮಿತಿಗಳನ್ನು ಗುರುತಿಸುವುದೂ ಅಗತ್ಯ.

ಹತ್ತು-ಹನ್ನೊಂದನೇ ಶತಮಾನಗಳವರೆಗಿನ ಮಿತಿಗಳನ್ನು ತಮ್ಮದೇ ರೀತಿಯಲ್ಲಿ ದಾಟುವ ಪ್ರಯತ್ನವನ್ನು ಹನ್ನೆರಡನೇ ಶತಮಾನದ ವಚನಕಾರರು ಮಾಡಿರುವುದರಿಂದ, ಇಪ್ಪತ್ತನೇ ಶತಮಾನದ ಆಧುನಿಕರು ಇವರಿಗಿಂತ ಚರಿತ್ರೆಯನ್ನು ಮುಂದುವರೆಸಿದರೆ

ಎಂಬುದು ಮುಖ್ಯ. ಹಿಂದಿನ ಈ ಘಟ್ಟಗಳು ಆಧುನಿಕ ಸಾಹಿತಿಗಳಿಗೆ ಪಾಠವಾಗಿ ಪರಿಣಮಿಸಬೇಕು; ಹಾಗಾಯಿತೆ ಎಂಬುದು ಕುತೂಹಲಕರ, ಉಪಯುಕ್ತ ಪ್ರಶ್ನೆ.

ಆಧುನಿಕ ಸಾಹಿತ್ಯದ ಆವಿರ್ಭಾವಕ್ಕೆ ಬಹಳ ಹಿಂದೆ ನಮ್ಮ ದೇಶದ ಆರ್ಥಿಕ, ಸಾಮಾಜಿಕ, ರಾಜ್ಯಪದ್ಧತಿಗಳ ಮೂಲಸೆಲೆ ಬೇರೆಯಾಗಿತ್ತು. ಅದು ಬುದ್ಧಿಬಲವುಳ್ಳವರ ಸಹಕಾರದಿಂದ ತೋಳಬಲವುಳ್ಳವರು ಆಳುತ್ತಿದ್ದ ಕಾಲ. 'ಬುದ್ಧಿಜೀವಿವರ್ಗ' ಆಳುವವರ್ಗದ ಭದ್ರತೆಗೆ ಧಕ್ಕೆಯಾಗದ ರೀತಿಯಲ್ಲಿ ಸಾಮಾಜಿಕ ಸಂವಿಧಾನವನ್ನು ರೂಪಿಸಿದ್ದರಿಂದ ಸಮುದಾಯಕ್ಕೆ ಆಳುವವರ ಆಶ್ರಯದ ಅನುಷ್ಠಾನವೇ ಉನ್ನತ ಜೀವನ ಮೌಲ್ಯವಾಗಿ ಕಂಡದ್ದು ಆಶ್ಚರ್ಯವಲ್ಲ. ಊಳಿಗಮಾನ್ಯ ಪದ್ಧತಿಯಲ್ಲಿ ದುಡಿಮೆಗಾರರನ್ನು ವಿಧೇಯರನ್ನಾಗಿ ಮಾಡಿದ್ದು ಏಕಮುಖ ಧೋರಣೆಯೆನ್ನಬಹುದು. ಈ ಕಾರಣದಿಂದ ಇರುವ ಸ್ಥಿತಿಯನ್ನು ಬಹುಪಾಲು ಒಪ್ಪಿದ ಸಮಾಜದಲ್ಲಿ ಸಾಹಿತ್ಯವೂ ಮೂಲಭೂತವಾಗಿ ಅದಕ್ಕನುಗುಣವಾಗಿತ್ತು.

ಭಾರತಕ್ಕೆ ಬ್ರಿಟಿಷರ ಆಗಮನ ಅನೇಕ ಬದಲಾವಣೆಗಳಿಗೆ ಕಾರಣವಾಯಿತು. ಈ ಬದಲಾವಣೆ ಎಷ್ಟರಮಟ್ಟಿಗೆ ರಾಜಕೀಯದ್ದೊ ಅಷ್ಟರಮಟ್ಟಿಗೆ ಆರ್ಥಿಕ ಹಾಗೂ ಸಾಂಸ್ಕೃತಿಕವಾದದ್ದೂ ಆಗಿದೆ. ಆದ್ದರಿಂದ ಸಾಹಿತ್ಯದ್ದೂ ಆಗಬಹುದು.

ಬ್ರಿಟಿಷರು ಭಾರತದಲ್ಲಿ ಮಾಡಿದ ಸುಧಾರಣೆಗಳನ್ನು ಗಮನಿಸಬೇಕು. ರೈಲ್ವೆಯ ಪ್ರಾರಂಭ ಇಲ್ಲಿನ ಆರ್ಥಿಕ ಪದ್ಧತಿಯ ಮೇಲೆ ಸಾಕಷ್ಟು ಪರಿಣಾಮವುಂಟುಮಾಡಿತು. ಅಂಚೆ, ದೂರವಾಣಿಗಳಾದರೂ ಅಷ್ಟೆ. ಇವೆಲ್ಲ ಒಟ್ಟಾರೆ ಹಳ್ಳಿ-ಹಳ್ಳಿಯ ಅಂತರವನ್ನು ಕುಗ್ಗಿಸುವ ಸಾಧನಗಳಾಗಿ ಸಂಬಂಧದ ಹೊಸ ಅಧ್ಯಾಯವನ್ನು ಆರಂಭಿಸಿದವು. ರೈಲ್ವೆ ಮತ್ತು ಹಡಗುಗಳು ಸರಕು ಸಾಗಾಣಿಕೆಯಲ್ಲಿ ಗಮನೀಯವಾದವು. ರೈಲ್ವೆ ಪದ್ಧತಿಯು ಭಾರತದ ಆಧುನಿಕ ಕೈಗಾರಿಕೆಯ ಬೆಳವಣಿಗೆಗೆ ಪೂರಕ ಸಾಧನವಾಯಿತು. ಕೈಗಾರಿಕೆಯ ಬೆಳವಣಿಗೆಯೊಂದಿಗೆ ನಮ್ಮವರು ತಮ್ಮ ಸಲುವಾಗಿಯೇ ಸಂಪೂರ್ಣ ಹೊಸದಾದ ದುಡಿಮೆಗೆ ಹೊಂದಿಕೊಂಡರು; ಬ್ರಿಟಿಷರು ಇದಕ್ಕೆ ಅವಕಾಶಮಾಡಿಕೊಟ್ಟರು; ವಿದ್ಯುಚ್ಛಕ್ತಿಯನ್ನು ಪರಿಚಯಿಸುವುದರ ಮೂಲಕ ಇಂಡಿಯಾದಲ್ಲಿ ಬ್ರಿಟಿಷರಿಂದ ಉಂಟಾಗಿದ್ದ ಏಕಚಕ್ರಾಧಿಪತ್ಯದ ಒಗ್ಗಟ್ಟು ಮುಂದುವರಿಯಲು ಸಹಕಾರಿಯಾಯಿತು. ಏಕಭಾವನೆ ಮೂಡಿಸುವಲ್ಲಿ ಇಂಥ ಸುಧಾರಣೆಗಳ ಪಾತ್ರ ಅಪಾರ; ಸ್ಟೀಮರ್ ತಂದದ್ದು ಯೂರೋಪಿನ ಬಂದರುಗಳನ್ನು ಭಾರತದ ಹತ್ತಿರಕ್ಕೆ ತಂದು, ಭಾರತದ ಸ್ಥಿರಸ್ಥಿತಿಗೆ (Stagnant condition) ಮೂಲ ಕಾಯಿದೆಯೆಂಬಂತಿದ್ದ ಪ್ರತ್ಯೇಕತೆಯನ್ನು ದೂರ ಮಾಡುವಲ್ಲಿ ಪರಿಣಮಿಸಿತು. ಇವೆಲ್ಲದರ ಜೊತೆಗೆ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪ್ರಚಲಿತಗೊಳಿಸಲಾಯಿತು. ಒಟ್ಟಿನಲ್ಲಿ ಹೇಳುವುದಾದರೆ ಬ್ರಿಟನ್ನಿನ ಆಳುವವರ್ಗ ಇಂಡಿಯಾದ ಪ್ರಗತಿಯಲ್ಲಿ ಆಸಕ್ತಿ ತಾಳಿತ್ತು. ಇದಕ್ಕೆ ಕಾರಣವಿಲ್ಲದೆ ಇಲ್ಲ. 'The aristocracy wanted to conquer it, the moneyocracy to plunder

it and the millocracy to undersell it'[1] ಎಂಬ ಮಾತುಗಳು ಭಾರತದ ಬಗ್ಗೆ ಬ್ರಿಟಿಷರು ತಾಳಿದ್ದ ಮನೋಭಾವವನ್ನು ಹೇಳುತ್ತವೆ. ಆದರೆ ಸ್ವಲ್ಪಕಾಲಾನಂತರ ಭಾರತವನ್ನು ಪುನರುತ್ಪಾದನಾದೇಶವನ್ನಾಗಿ (Reproductive Country) ಮಾಡುವುದು ತಮ್ಮ ದೃಷ್ಟಿಯಿಂದ ತೀರಾ ಅಗತ್ಯವೆಂಬ ಅರಿವಾಯಿತು. ಇದಕ್ಕಾಗಿ ಸೀರಾವರಿ ಮತ್ತು ಆಂತರಿಕ ಸಂಪರ್ಕವನ್ನು ಬಲಗೊಳಿಸುವ ಮನಸ್ಸು ಬಂತು; ಇದರ ಫಲ ಇಂಡಿಯಾಕ್ಕೆ ರೈಲ್ವೆಯ ಆಗಮನ.

ಯಂತ್ರಶಕ್ತಿ ಮತ್ತು ಇಂಗ್ಲೀಷ್ ಜ್ಞಾನಗಳು ಭಾರತದಲ್ಲಿ ಸಾಂಸ್ಕೃತಿಕವಾಗಿ ಸಾಕಷ್ಟು ಪರಿಣಾಮಕಾರಕವಾದವು. ಆರ್ಥಿಕ ಪದ್ಧತಿಯ ಬೇರುಗಳು ಸಡಿಲಗೊಂಡು ಸಾಮಾಜಿಕ ಸಂಬಂಧಗಳ ವ್ಯತ್ಯಾಸಕ್ಕೂ ಕಾರಣವಾದವು. ಈ ಸುಧಾರಣೆಗಳಲ್ಲಿ ಸಕ್ರಿಯವಾಗ ಬೇಕಾಗಿ ಬಂದವರ ಮನೋಧರ್ಮದಲ್ಲೂ ಅದಕ್ಕನುಗುಣ ಸುಧಾರಣೆ ಕಂಡಿತು. ಈ ಎಲ್ಲ ಕ್ರಿಯೆಗಳಿಂದ ಇಂಡಿಯಾದ ಸಾಮಾಜಿಕ ಚರಿತ್ರೆಯಲ್ಲಾದ ಪ್ರಮುಖ ಘಟನೆ ಯೆಂದರೆ—ಹೊಸ ಮಧ್ಯಮವರ್ಗದ ಉದಯ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಬಂಡವಾಳ ಶಾಹಿ ಪದ್ಧತಿಯ ಪ್ರಾರಂಭ.

ಇಂಗ್ಲೀಷಿನವರ ಮೂಲಕ ಆದ ಬಂಡವಾಳಶಾಹಿ ಬೆಳವಣಿಗೆಗೂ ಇಂಗ್ಲಿಷಿನ ಮೂಲಕ ಪ್ರೇರಣೆ ಪಡೆದ ಆಧುನಿಕ ಕಾವ್ಯದ ಬೆಳವಣಿಗೆಗೂ ಸಂಬಂಧವಿಲ್ಲದಿಲ್ಲ. ಏಕೆಂದರೆ ಇವೆರಡೂ ಒಂದೇ ಪ್ರಭಾವ ವಲಯದ ಅಂಗಗಳು. ಆರ್ಥಿಕ ಬದಲಾವಣೆ ಸಾಮಾಜಿಕ ಸಂಬಂಧಗಳ ಮೇಲೆ ಪ್ರಭಾವ ಬೀರಿ ವಿಭಿನ್ನ ಸಾಂಸ್ಕೃತಿಕ ಸಂದರ್ಭಸೃಷ್ಟಿಗೆ ಪ್ರೇರಕ ವಾಗುವುದರಿಂದ ಸಾಹಿತ್ಯವನ್ನು ಅದರಿಂದ ಬೇರ್ಪಡಿಸಿ ನೋಡಲಾಗದು. ಆದ್ದರಿಂದ ಬ್ರಿಟಿಷರು ಭಾರತಕ್ಕೆ ಬಂದ ಎಷ್ಟೋ ವರ್ಷಗಳ ನಂತರ—ಬಂಗಾಳಿ ಸಾಹಿತ್ಯದಲ್ಲಿ ಬದಲಾವಣೆ ಕಾಣಿಸಿಕೊಂಡ ಮೇಲೆ—ಕನ್ನಡದಲ್ಲಿ ಹೊಸ ಕಾವ್ಯ ಸೃಷ್ಟಿಯ ತುಡಿತ ಪ್ರಾರಂಭವಾದದ್ದು. ಕರ್ನಾಟಕದ ಆರ್ಥಿಕ ಬೆಳವಣಿಗೆಯ ವೇಗದ ಮೇಲೂ ಬೆಳಕು ಚೆಲ್ಲಬಹುದು.

ಕನ್ನಡದಲ್ಲಿ ನವೋದಯ ಕಾವ್ಯ (ರಮ್ಯಕಾವ್ಯ) ಎಂದು ಪ್ರಸಿದ್ಧಿ ಪಡೆದ ಸಾಹಿತ್ಯರೂಪ ಇಂಗ್ಲೀಷಿನ Romantic Poetry ಯ ಸ್ಫೂರ್ತಿ ಪಡೆದಿದೆಯೆಂಬುದು ಗಮನೀಯ. ಮುದ್ದಣ ಕವಿಯ ನಂತರ ಬೀಳಾಗಿದ್ದ ಕನ್ನಡ ನೆಲದಲ್ಲಿ, ಮೇಲೆ ಹೇಳಿದ ಸಂದರ್ಭದ ಹಿನ್ನೆಲೆಯಲ್ಲಿ, ಕನ್ನಡ ಕಾವ್ಯ ಹೊಸ ಆಕಾರ ಪಡೆಯಿತು. ಹಿಂದಿನಂತೆ ಆಳುವ ವರ್ಗದ ಆಶ್ರಯವಿಲ್ಲದ, ಅದರ ಆಶಯವನ್ನು ನೇರವಾಗಿ ಪ್ರತಿಪಾದಿಸದ ಹೊಸ ಸಾಮಾಜಿಕ ಸಂದರ್ಭದಲ್ಲಿ ಈ ಕಾವ್ಯ ಹುಟ್ಟಿ ಬೆಳೆಯಿತು.

ಮುದ್ದಣನ ನಂತರ, ನವೋದಯ ಕಾವ್ಯ ಹುಟ್ಟುವವರೆಗಿನ ಕಾಲ ಬೀಳಾಗಿದ್ದಕ್ಕೆ ಕಾರಣಗಳಿವೆ. ಇದು ಕವಿಗಳು ಹೊಸ ಸೃಷ್ಟಿಯ ಸಾಧ್ಯತೆಗಳನ್ನು ಕಂಡುಕೊಳ್ಳದ್ದರಿಂದ

[1] Karl Marx : Selected works ; Vol I

ಮಾತ್ರ ಆದದ್ದೆಂದು ತೀರ್ಮಾನಕ್ಕೆ ಬರುವುದು ಸರಿಯಲ್ಲ; ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುವಂಥ ಪರಿಸರ ಸೃಷ್ಟಿಯಾಗಿತ್ತೆ ಎಂಬುದೂ ಪರಿಗಣಿಸಬೇಕಾದ ಪ್ರಮುಖ ವಿಷಯ.

ಈ 'ಬೀಳುಬಿದ್ದ ಕಾಲ' ಪ್ರಾಚೀನ ಕಾವ್ಯ ಪರಂಪರೆ ಒಂದು ನಿಲುಗಡೆಗೆ ಬಂದ ನಂತರದ್ದು. ಆ ಪರಂಪರೆಯು ಕಣಜ ಬರಿದಾದ ಸಂದರ್ಭ. ಆ ವೇಳೆಗೆ ದೇಶದಲ್ಲಾದ ಬದಲಾವಣೆಗಳ ಫಲವಾಗಿ ಹಳೆಯ ರಾಜಕೀಯ ವ್ಯವಸ್ಥೆಯಲ್ಲಿ ಏರುಪೇರುಗಳು ಸಂಭವಿಸಿ ಸಾಮಾಜಿಕವಾಗಿಯೂ ಪ್ರಭಾವ ಬೀರಿದ್ದವು. ಬದುಕಿನ ಸ್ವರೂಪದಲ್ಲಿ ಸುಧಾರಣೆಗಳು ಕಾಣಿಸಿಕೊಂಡು ಪ್ರಾಚೀನ ಸ್ಥಿತಿಯ ಪ್ರಭಾವೀ ಅಂಶಗಳು ಹಿಂದೆ ಸರಿದಿದ್ದ ಕಾಲದಲ್ಲಿ ಕಾವ್ಯಪರಂಪರೆಗೆ ನಿಲುಗಡೆ ಬಂದದ್ದು ಸ್ವಾಭಾವಿಕ. ಮುಂದೆ ಬ್ರಿಟಿಷರಬೇರು ಇಂಡಿಯಾದಲ್ಲಿ ಭದ್ರವಾಗುವವರೆಗೆ ರಾಜ್ಯಪದ್ಧತಿ ಮತ್ತು ಆರ್ಥಿಕ ವ್ಯವಸ್ಥೆಗಳಿಗೆ ಖಚಿತ ದಿಕ್ಕು ಸಿಕ್ಕಿತ್ತೆಂದು ತೀರ್ಮಾನಿಸಲಾಗದು. ಇದರಿಂದುಂಟಾದ ಸಾಮಾಜಿಕ ಪರಿಣಾಮಗಳು ಸಾಹಿತ್ಯಿಕವಾಗಿಯೂ ಮುಖ್ಯ. ಇಂಥ ಸಂದರ್ಭ ಸ್ವಾಭಾವಿಕವಾಗಿ ಕಾವ್ಯಕ್ಷೇತ್ರದಲ್ಲಿ ಅದೇ ರೂಪದಲ್ಲಿ ಕಾಣಿಸಿಕೊಂಡಿದೆ. ಇಂಗ್ಲಿಷ್ ಜ್ಞಾನ ಮತ್ತು ಕೈಗಾರಿಕಾಭಿವೃದ್ಧಿಯ ಹೆಜ್ಜೆಗಳ ಫಲವಾಗಿ ಉಂಟಾದ ಬೆಳವಣಿಗೆ ಆರ್ಥಿಕ, ಸಾಮಾಜಿಕ ಸ್ವರೂಪವನ್ನು ನಿರ್ಧರಿಸುವ ದಿಕ್ಕನ್ನು ನಿರ್ದೇಶಿಸಲು ಸಮರ್ಥವಾದಾಗ, ಕನ್ನಡ ಸಾಹಿತ್ಯಕ್ಷೇತ್ರಕ್ಕೂ ದಿಕ್ಕೊಂದು ದಕ್ಕುವ ಸಂದರ್ಭ ಬಂದಿತು. ಆದ್ದರಿಂದ ಸದರೀ ಮಧ್ಯಂತರಕ್ಕೆ ಸಾಹಿತ್ಯಸಂಪ್ರದಾಯದ ಬೆಳವಣಿಗೆಯಲ್ಲಾದ ಏಳುಬೀಳುಗಳಿಗಿಂತ ಸಾಮಾಜಿಕ ಆರ್ಥಿಕ ಸಂಬಂಧಗಳನ್ನು ಒಳಗೊಳ್ಳುವ ರಾಜಕೀಯ ಬದಲಾವಣೆಗಳೂ ಕಾರಣ.

ಇಂಗ್ಲಿಷ್ ತಿಳುವಳಿಕೆ ಹೆಚ್ಚಿದಂತೆ ಕೆಲಸರಾದರೂ ಆ ಸಾಹಿತ್ಯವನ್ನು ಅಭ್ಯಾಸ ಮಾಡಲು ಸಾಧ್ಯವಾಯಿತು. ಇದರ ಪರಿಣಾಮವಾಗಿ ಇಂಗ್ಲೀಷ್ ಕವನಗಳು ಅನುವಾದಗೊಂಡವು. ಆದರೆ ಕನ್ನಡದಲ್ಲಿ ಬಿ. ಎಂ. ಶ್ರೀ.ಯವರ 'ಇಂಗ್ಲಿಷ್ ಗೀತೆಗಳು' ಮಾತ್ರ ಹೊಸ ಕವಿತೆಗೆ ಪ್ರೇರಣೆಯಾಗುವ ಶಕ್ತಿ ಪಡೆಯಿತು.

ಕನ್ನಡದ ನವೋದಯ ಕವಿಗಳು ಸಾಮಾನ್ಯವಾಗಿ ನಿಸರ್ಗಪ್ರೇಮಿಗಳು. ಈ ಕಾಲದಲ್ಲಿ ಬಂದ ಕವನಸಂಕಲನಗಳ ಹೆಸರುಗಳೂ ಕವಿಗಳ ಸೌಂದರ್ಯ ಪ್ರೇಮದ ದ್ಯೋತಕವಾಗಿವೆ.

ಉದಾ : ಗಿಳಿವಿಂಡು—ಗೋವಿಂದ ಪೈ ; ತಾವರೆ, ಚೆಲುವು—ಶ್ರೀನಿವಾಸ, ನವಿಲು, ಕೊಳಲು, ಪಕ್ಷಿಕಾಶಿ–ಕುವೆಂಪು; ನಾದಲೀಲೆ–ಬೇಂದ್ರೆ ; ಮೈಸೂರು ಮಲ್ಲಿಗೆ, ಇರುವಂತಿಗೆ—ಕೆ. ಎಸ್. ನ; ಸಾಮಗಾನ, ಚೆಲುವು ಒಲವು, ಕಾರ್ತೀಕ—ಜಿ. ಎಸ್. ಶಿವರುದ್ರಪ್ಪ ; ಇತ್ಯಾದಿ.

ಪ್ರಮುಖ ನವೋದಯ ಕವಿಗಳು ನಿಸರ್ಗ ಕುರಿತು ಬಹಳಷ್ಟು ಕವಿತೆ ರಚಿಸಿದ್ದಾರೆ. ನಮ್ಮ ಕವಿಗಳು ಸೂರ್ಯೋದಯ, ಚಂದ್ರೋದಯ, ಹೂ, ಉದ್ಯಾನಗಳನ್ನು ಬಿಟ್ಟದ್ದೇ

ಕಡನೆ. ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ, ಸಂದರ್ಭದ ಪ್ರಭಾವದ ಜೊತೆಗೆ-ಕನ್ನಡ ಕವಿಗಳ ಇಂಥ ಸೌಂದರ್ಯಪ್ರಿಯತೆಗೆ ಚಾರಿತ್ರಿಕ, ಭೌಗೋಳಿಕ ಹಿನ್ನೆಲೆಯೂ ಇದೆ. ಕನ್ನಡ ನಾಡಿನಲ್ಲಿ ಕಾವ್ಯ ಸ್ಪಷ್ಟರೂಪದಲ್ಲಿ ಕಾಣಿಸಿಕೊಂಡ ದಿನಗಳಿಂದಲೂ ನಮ್ಮ ಕಾವ್ಯಗಳಲ್ಲಿ ನಿಸರ್ಗ ಕುರಿತ ಉದ್ಗಾರ, ಉದ್ಘೋಷ, ಹೊಗಳಿಕೆಗಳಿರುವುದನ್ನು ಗಮನಿಸ ಬೇಕು. ಅದರಲ್ಲೂ ವ್ಯವಸ್ಥೆಯ ಭಾಷೆ, ಶೈಲಿಗಳನ್ನು ಧಿಕ್ಕರಿಸಿ ತಮ್ಮದೇ ದಾರಿ ಕಂಡು ಕೊಂಡ ಸಾಹಿತ್ಯ ಸಂದರ್ಭಗಳನ್ನು ಬಿಟ್ಟರೆ (ಕೆಲವು ವೈಯಕ್ತಿಕ ಪ್ರತಿಭೆಗಳನ್ನು ಹೊರತುಗೊಳಿಸಿ) ಉಳಿದಂತೆ ನಮ್ಮ ಕವಿಗಳು ಅಷ್ಟಾದಶ ವರ್ಣನೆಯ ಕಟ್ಟುಪಾಡಿಗೆ ಒಳಗಾಗಿದ್ದಾರೆ. ಇಲ್ಲದಿದ್ದರೆ ಸಾಹಿತ್ಯಕ್ಷೇತ್ರದ ಪ್ರತಿಷ್ಠಿತ ಶಕ್ತಿ ಇವರ ಕಾವ್ಯವನ್ನು 'ಮಹಾಕಾವ್ಯ'ವೆಂದು ಗುರುತಿಸುವುದಿಲ್ಲವಲ್ಲ? ಅಗತ್ಯವಿರಲಿ ಇಲ್ಲದಿರಲಿ, ಆ ಮಹಾಕಾವ್ಯದ Ideal Condition ಹುಟ್ಟಬೇಕಾದರೆ ಈ ಸೂತ್ರದಿಂದ ದೂರ ಸರಿಯುವಂತಿರಲಿಲ್ಲ; (ಜೊತೆಗೆ ನಾಡಿನ ನಿಸರ್ಗಶಕ್ತಿಯೂ ಪರಿಣಾಮವುಂಟುಮಾಡಿರಬಹುದು.) ನಿಸರ್ಗ ವರ್ಣನೆ ಕೆಲವು ಕವಿಗಳಿಗೆ ಸಹಜಪ್ರವೃತ್ತಿಯಾಗಿರಬಹುದಾದರೂ ಪ್ರತಿಷ್ಠಿತಶಕ್ತಿ ರೂಪಿಸಿದ ಸಾಹಿತ್ಯಸೂತ್ರದ ಒತ್ತಡವನ್ನು ಅಲ್ಲಗಳೆಯುವಂತಿಲ್ಲ. ಹಳಗನ್ನಡ ಕವಿ-ಕಾವ್ಯ ಗಳನ್ನು ಗೌರವದಿಂದ ಅಭ್ಯಾಸಮಾಡಿದ ಹೊಸಗನ್ನಡ ಕವಿಗಳ ಮನಸ್ಸು ಚಾರಿತ್ರಿಕ ಸಂವಹನೆಯ ಫಲವಾಗಿ ಸಹಜ ನಿಸರ್ಗಪ್ರೇಮಕ್ಕೆ ಒಳಗಾಗಿರಬಹುದು. ಜೊತೆಗೆ ಭೌಗೋಳಿಕ ಕಾರಣಗಳೂ ಸೇರಿರಬಹುದು. ಅಂದರೆ ಕೇವಲ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಪ್ರಭಾವದಿಂದ ಕನ್ನಡ ನವೋದಯ ಕವಿಗಳಲ್ಲಿ ನಿಸರ್ಗಪ್ರೀತಿ ಪ್ರವೃತ್ತಿ ಜಾಗೃತ ಗೊಂಡಿತೆಂಬುದು ಸಂಪೂರ್ಣ ಸತ್ಯವಲ್ಲವೆಂದೂ ಇದರಲ್ಲಿ ಕನ್ನಡದ ಸಂದರ್ಭದ ಪಾಲು ಗಮನಾರ್ಹವಾಗಿದೆಯೆಂದೂ ಒಟ್ಟು ನನ್ನ ವಾದದ ಸಾರಾಂಶ.

Plekhanov ಹೇಳಿದ ಕೆಲವು ಮಾತುಗಳು ಕನ್ನಡ ಕಾವ್ಯಸಂದರ್ಭದ ಸದರೀ ಸ್ಥಿತಿಯನ್ನು ಅರ್ಥೈಸಲು ಸಹಾಯಕವಾಗಿವೆ. ಅವು ಹೀಗಿವೆ :

The ideal of beauty prevailing at any time in any society or class of society is rooted partly in the biological conditions of mankind's development—which incidently also produce distinctive racial features—and partly in the historical conditions in which the given society or class arose and Exists; . . . He who worships "Pure beauty" does not thereby become independant of the biological and historical social conditions which determine his Esthetic taste.

*(Art and Sociat life—by Plekhonov-page-30)*

ಈ ಮಾತುಗಳು ಕುವೆಂಪು, ಬೇಂದ್ರೆಯವರಂಥ ಮೊದಲ ಸಾಲಿನ ಕವಿಗಳ ವಿಷಯ ದಲ್ಲೂ ಅರ್ಥಪೂರ್ಣ. ನರಸಿಂಹಸ್ವಾಮಿಯವರಂಥ ಕವಿಗಳು ಸೃಷ್ಟಿಸಿದ ಮನೋಹರ ಶೈಲಿಯ ಕವಿತೆಗಳು ಸಾಂಸ್ಕೃತಿಕ ಚೌಕಟ್ಟಿನೊಳಗೆ ಅರಳಿದಂಥವು ಎಂಬುದನ್ನು

ಗಮನಿಸಬೇಕು. ನವುರಾದ ಭಾವನೆಗಳು ನವುರಾದ ಭಾಷೆಯಲ್ಲಿ ರೂಪತಾಳಿವೆ. ಸಾಂಸ್ಕೃತಿಕ ಸಂಪ್ರದಾಯಗಳನ್ನು ಸಮರ್ಪಣಭಾವದಿಂದ ಅಭಿವ್ಯಕ್ತಿಸಿದ ಕವಿ ತನ್ನ ವರ್ಗದ ಆಚರಣೆ, ಕನಸು, ನನಸುಗಳ ಮಾದರಿಗಳನ್ನು ಕಾವ್ಯೀಕರಿಸಿದ್ದಾನೆ. ಚಿಂತನ ಶೀಲ ಕವಿ ಎಂದು ಹೆಸರು ಪಡೆದ ಪು. ತಿ. ನ. ರವರ ಚಿಂತನೆಯ ಮೂಲಸೆಲೆ ಇರುವುದು ಪರಂಪರೆಯಲ್ಲಿ; ಪುರಾಣಗಳಲ್ಲಿ. ವರ್ಣಾಶ್ರಮಧರ್ಮ ಪದ್ಧತಿಯ ಪರಿಣಾಮದಲ್ಲಿ ಬೆಳೆದ ಪರಂಪರೆಯ ವೃಕ್ಷದ ಬೇರು ಬಿಳಲುಗಳ ಜಾಡು ಹಿಡಿದು ಹೊರಡುವ, ಬೆಳೆಯುವ ವಿಚಾರಧಾರೆ ಯಾವ ವರ್ಗದ ಆಶಯಕ್ಕನುಗುಣ ವಾಗಿರುತ್ತದೆಯೆಂದು ಮತ್ತೆ ವಿವರಿಸಬೇಕಾಗಿಲ್ಲ. ಹೀಗೆಂದಾಕ್ಷಣ ಈ ಕವಿಗಳು ಉದ್ದೇಶ ಪೂರ್ವಕವಾಗಿ ಒಂದು ವರ್ಗದ ಪರವಾದ ವಿಚಾರವನ್ನು ಬಿತ್ತಲು ಯತ್ನಿಸಿದರೆಂದು ತೀರ್ಮಾನಿಸುವುದು ಸರಿಯಲ್ಲ. ತಾವು ಹುಸಿ ಸಾಂಸ್ಕೃತಿಕ ಪರಿಸರದ ಪ್ರಭಾವ ವಲಯದಲ್ಲಿ ಬೆಳೆದರೆಂದು ವ್ಯಾಖ್ಯಾನಿಸುವುದು ವರ್ಗಸಂಸ್ಕೃತಿಯ ಶಕ್ತಿಯನ್ನೂ ಹೇಳು ತ್ತದೆ. ಅದೇ ಸಂದರ್ಭದಲ್ಲಿ ಸಾಮಾಜಿಕವಾಗಿ ಕವಿಯ ಮಿತಿಯನ್ನು ನಿರ್ದೇಶಿಸುತ್ತದೆ. ಪರಂಪರೆಯನ್ನು ಒಪ್ಪಿದವರೆಲ್ಲ ಸಮಕಾಲೀನ ಸಂವೇದನೆಗೆ ಪೂರ್ತಿ ಕುರುಡರಾಗಿದ್ದರೆಂದು ಒಟ್ಟುತೀರ್ಮಾನಕ್ಕೆ ಬರಲಾಗದು. ಪರಂಪರೆಯ ವರ್ಣಪದ್ಧತಿಯನ್ನು ನೆನಪಿನಲ್ಲಿಟ್ಟು ಕೊಂಡು, ಸುಧಾರಣ ಮನೋಧರ್ಮದಿಂದ ವೈದಿಕವರ್ಣದ ಅನ್ಯಾಯವನ್ನು ಗುರುತಿಸಿದ್ದೂ ಉಂಟು. ತೀ. ನಂ. ಶ್ರೀ.ಯವರು 'ಬ್ರಾಹ್ಮಣ ಕುಲ' [ತಳಿರು-ಸಂಕಲನ] ಈ ದಿಕ್ಕಿನಲ್ಲಿ ಮುಖ್ಯವಾಗುವುದನ್ನು ನೋಡಬಹುದು :

> ಅಂದು ಧರ್ಮಧ್ವಜವನೆತ್ತಿತೋರಿದೆ ಜಗಕೆ
> ಧರೆಯ ದೇವತೆಯೆಂಬ ಕೀರ್ತಿಯನು ಪಡೆದೆ
> ಕುಂದಿತೀಜೆಗೆ ನಿನಗೆ ಲೋಕಹಿತದಲಿ ಬಯಕೆ
> ಕಿರಿಯರನು ತುಳಿಮೆಟ್ಟಿ ಮೆರೆದೆ ಗರ್ವದಲಿ
>
> ..........................................
> ಹಳೆಯ ಪಾಪದ ಫಲವನಿಂದುಣ್ಣುತಿರುವೆ
> ಕಳೆದ ವೈಭವವೆಲ್ಲಿ, ದುರ್ಗತಿಯಿದೆಲ್ಲಿ !

ಮೊದಲ ಸಾಲು ವೈದಿಕರ 'ಮಹತ್ಕಾರ್ಯ'ವನ್ನು ಪ್ರಶಂಸಿಸಿದೆ. ಧರ್ಮಧ್ವಜವನೆತ್ತಿ ಹಿಡಿದದ್ದು ಧರೆಯ ದೇವತೆಯಾಗಲು ಕಾರಣವೆಂಬ ಸೂಚನೆಯಿದೆ. 'ಧರ್ಮಧ್ವಜವನೆತ್ತಿ ಹಿಡಿದದ್ದು' ಲೋಕಹಿತಕಾರ್ಯವೆಂಬುದು ಕವಿಯ ಅಭಿಪ್ರಾಯವಿರಬೇಕು. ಈ ಆಲೋಚನಾ ವಿಧಾನ ಪರಂಪರೆಯು ಬೆಳೆಸಿದ್ದೇ ಆಗಿದೆ. ಆದರೆ ತೀ. ನಂ. ಶ್ರೀ. ವೈದಿಕರ 'ವೈಭವ' ದುರ್ಗತಿಗಿಳಿದದ್ದಕ್ಕೆ ಕಾರಣವನ್ನು ವೈದಿಕರಲ್ಲೇ ಕಂಡಿರುವುದು ಗಮನಾರ್ಹ. ಅವರಿಂದ ಆದ ಅನ್ಯಾಯವನ್ನು ಹೇಳುವ ಸಂದರ್ಭದಲ್ಲೆ ಧರ್ಮದ್ವಜವನೆತ್ತಿದ ಕಾರ್ಯ-ಕೀರ್ತಿ, ವೈಭವಗಳ ನೆನಪೂ ಇದೆಯೆಂಬುದನ್ನೂ ಮರೆಯಬಾರದು. ಅಲ್ಲದೆ, ವೈದಿಕರಿಗೆ ದುರ್ಗತಿ ಬಂದಿದ್ದು ಅದಕ್ಕೆ ಅವರು ಮಾಡಿದ ಪಾಪ ಕಾರಣವೆಂದು ಸೂಚಿಸಿದ್ದಾರೆ.

ಬದಲಾವಣೆಗೆ ಸಿಕ್ಕುತ್ತಿರುವ ಸಮಾಜದಲ್ಲಿ ನಿಂತು, ಪಾಪ–ಪುಣ್ಯಗಳ ಪರಂಪರಾಗತ ಕಲ್ಪನೆಯ ಕಣ್ಣಿಂದ ಚರಿತ್ರೆಯ ಒಂದು ಸಂಗತಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ; ವರ್ಣಾಶ್ರಮದ ಅನಿಷ್ಟಗಳನ್ನು ಇಡಿಯಾಗಿ ಗುರುತಿಸದೆ, 'ದುರ್ಗತಿ'ಗೆ ಮರುಕ ಪಡುವ ದಾಟಿ ಇಲ್ಲಿದೆ. ಮೂಲಭೂತವಾಗಿ ಅಗಾಧ ವ್ಯತ್ಯಾಸವಿಲ್ಲದಿದ್ದರೂ ಸಮಾಜದಲ್ಲಿ ಆಗುತ್ತಿರುವ ಸುಧಾರಣೆಗಳ ಪ್ರಭಾವವೂ ಇಲ್ಲಿದೆ. ಶೋಷಣೆಯ ಸ್ಥಿತಿಯನ್ನು ಮತ್ತಷ್ಟು ಚನ್ನಾಗಿ ಗುರುತಿಸಿದ ಬೇಂದ್ರೆ, ಕುವೆಂಪುರವರ ವಿಶ್ಲೇಷಣೆ ರಮ್ಯ ಕವಿಗಳ ದೃಷ್ಟಿಕೋನವನ್ನೂ ಧ್ವನಿಸಬಲ್ಲದು.

ಕುವೆಂಪು ಮತ್ತು ಬೇಂದ್ರೆ ಇಬ್ಬರೂ ಸಾಮಾಜಿಕ ಅನ್ಯಾಯಗಳ ವಿರುದ್ಧ ದನಿ ಮೂಡಿದವರು ; 'ಧರ್ಮದ್ವಜನೆತ್ತಿ ಜಗಕೆ' ತೋರಿದ 'ಧರೆಯದೇವತೆ'ಗಳ 'ವೈಭವ'ದ ಕಾಲದಲ್ಲಿ ಸಾಮಾಜಿಕವಾಗಿ 'ಕಿರಿಯ'ರಾಗಿದ್ದ ಜನಸಮೂಹದಿಂದ ಬಂದ ಕುವೆಂಪು ಸಹಜವಾಗಿ 'ಧರೆಯ ದೇವತೆ'ಗಳ ಬಗ್ಗೆ ಆಕ್ರೋಶಿಸಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. [ಆದರೆ ಚರಿತ್ರೆಯನ್ನು ಅಷ್ಟಕ್ಕೇ ಮಿತಿಗೊಳಿಸಿದರೆ ಆಶ್ಚರ್ಯಪಡಬೇಕು] ಪುರೋಹಿತ ಶಾಹಿಯನ್ನು [ಬ್ರಾಹ್ಮಣರನ್ನು ಮಾತ್ರ ಅಲ್ಲ] ವಿರೋಧಿಸಿದ ಕುವೆಂಪು ಶ್ರೀಸಾಮಾನ್ಯನ ಒಳಿತನ್ನು ಬಯಸಿ ಅಸಮತೆ ಅಳಿಯಬೇಕೆಂದು ಹಾರೈಸಿದ್ದಾರೆ. ಕಣ್ಣೆದುರು ನರಳುತ್ತಿರುವ ರೋಗೀಸಮಾಜದ ಬಗ್ಗೆ ರೊಚ್ಚಿಗೆದ್ದು ಬರೆದಿದ್ದಾರೆ. ಬಲ್ಲಿದರಿಂದ ನಡೆಯುವ ಬಡವರ ಶೋಷಣೆಯ ಸ್ಥಿತಿ ಅವರ ಕಣ್ಣಿಗೆ ಕಂಡಿದೆ ; ಕವಿತೆಯಾಗಿ ಮೂಡಿದೆ. 'ಕಲ್ಕಿ' ಕವನದಲ್ಲಿ ವರ್ಗ ಹೋರಾಟದ 'ಕನಸು' ಕಾಣುತ್ತಾರೆ. 'ಕಲ್ಕಿ ಕಲ್ಕಿ ಎನ್ನುತ್ತ ಚೀರಿ'ದವರು 'ಕನಸೊಡೆದೆದ್ದೆ ಇನ್ನೆಲ್ಲಿಯ ನಿದ್ದೆ' ಎನ್ನುತ್ತಾರೆ. ಶೋಷಣೆಯ ಸೂಕ್ಷ್ಮಗಳನ್ನು ಗುರುತಿಸುವ ತುಡಿತ ಅನೇಕ ಕವನಗಳ ಬೆನ್ನೆಲುಬಾಗಿದೆ.

ಬೇಂದ್ರೆಯವರನ್ನೇ ತೆಗೆದುಕೊಳ್ಳಿ ; ಅವರ 'ಕುರುಡು ಕಾಂಚಾಣ' ಶೋಷಣೆಯ ಸೂಕ್ಷ್ಮ, ಕ್ರೌರ್ಯಗಳನ್ನು ಅದ್ಭುತವಾಗಿ ಪ್ರತಿಮಿಸಿದೆ.[1] ಕ್ರೌರ್ಯದ ಕಠಿಣತೆಯನ್ನು (Art form) ನಲ್ಲಿ ಹೇಳುವ ಕಲಾಶಕ್ತಿಯ ಜೊತೆಗೆ ಅಲ್ಲಿ ಹರಿಯುವ ಅಸಹನೆಯ ದನಿ

---

[1] 'ಕುರುಡು ಕಾಂಚಾಣ'ದ ಈ ಭಾಗಗಳನ್ನು ಗಮನಿಸಿ :

ಸಣ್ಣ ಕಂದಮ್ಮಗಳ
ಕಣ್ಣೀನ ಕವಡಿಯ
ತಣ್ಣನ್ನ ಜೋಮಾಲೆಕೊರಳಳೊಳಗಿತ್ತೊ
ಬಡವರ ಒಡಲಿನ
ಬಡ ಬಾನಲದಲ್ಲಿ
ಸುಡುಸುಡು ಪಂಜು ಕೈಯೊಳಗಿತ್ತೊ
ಕೂಲಿಕಂಬಳಿಯವರ
ಪಾಲಿನ ಮೈದೊಗಲ
ಧೂಳಿಯ ಭಂಡಾರಹಣೆಯೊಳಗಿತ್ತೊ...

ಯನ್ನು ಗಮನಿಸಬೇಕು. ತುತ್ತಿನ ಚೀಲದ ಕೊನೆಯ ಭಾಗದಲ್ಲಂತು ಹಸಿವು ಇಡೀ ಧಾರ್ಮಿಕ ವ್ಯವಸ್ಥೆಯ ನಾಶಕ್ಕೆ ಕಾರಣವಾಗಿ ನೆಲವನ್ನೇ ನುಂಗುವ ಘಟ್ಟ ಮುಟ್ಟ ಬಹುದೆಂಬ ಕಳವಳವಿದೆ.[1] ದರಿದ್ರನಾರಾಯಣ, ಅನ್ನಾವತಾರ, ಕೆಲಸವಿಲ್ಲದವರ ಹಾಡು–ಪುಟ್ಟ ವಿಧವೆ, ಹೆಣದ ಹಿಂದೆ—ಮುಂತಾದ ಬೇಂದ್ರೆ ಕವಿತೆಗಳು ಸಾಮಾಜಿಕ ಅನ್ಯಾಯ, ಸಮಸ್ಯೆಗಳನ್ನು ವಸ್ತುವಾಗಿ ಹೊಂದಿವೆ.

ಹಾಗೆ ನೋಡಿದರೆ ಸಾಮಾಜಿಕ ಅನ್ಯಾಯಗಳ ಸಂದರ್ಭದಲ್ಲಿ ಅನುಕಂಪ, ಆಕ್ರೋಶ ತೋರಿರುವುದರಲ್ಲಿ ಯಾರಿಗೆ ಯಾರೂ ಕಡಿಮೆಯಲ್ಲ; ಆದರೆ ನಮಗೆ ಮುಖ್ಯವಾಗುವುದು ಇದಿಷ್ಟೇ ಅಲ್ಲ. ಇದಿಷ್ಟೇ ಆದರೆ ನಮ್ಮ ಪ್ರಮುಖಕವಿಗಳಲ್ಲನೇಕರನ್ನು ಶೋಷಿತದರ್ಗದ ವಾಣಿಯೆಂದು ಕರೆಯುವ ಸರಳತೀರ್ಮಾನಕ್ಕೆ ಬರಬೇಕಾಗುತ್ತದೆ. ಒಂದು ಸ್ಥಿತಿಯನ್ನು ಗುರುತಿಸುವುದರ ಜೊತೆಜೊತೆಗೇ ಅದರ ಮೂಲಸ್ವರೂಪವನ್ನು ಕಂಡುಕೊಳ್ಳುವುದು ಅಗತ್ಯ. ಇದು ಆಗದೆ ಇದ್ದಾಗ ಬಡವ–ಬಲ್ಲಿದ ಎಂಬ ವ್ಯತ್ಯಾಸದ ಸರಳ ವ್ಯಾಖ್ಯಾನವೇ ಸರ್ವಸ್ವವೂ ಆಗುವ ಅಪಾಯವಿದೆ. ಆದರೆ ತಾತ್ತ್ವಿಕ ದೃಷ್ಟಿಯ ಸಂದರ್ಭದಲ್ಲಿ ಖಚಿತರೂಪ ತಳೆಯುವ ಧೋರಣೆ ವಿರೋಧಾಭಾಸಗಳಿಗೆಡೆ ಕೊಡಲಾರದು. ನಾನು ಹೇಳಬೇಕೆಂದಿರುವುದಿಷ್ಟು: ನಮ್ಮ 'ಸಂಸ್ಕೃತಿ'ಯ ಅಂತರ್ಯದಲ್ಲೇ ಶೋಷಣೆಯ ಸಾಧನಗಳಿವೆಯೆಂಬ ವಿಚಾರ ಗೌಣವಾಗುವುದರಿಂದ ನಮ್ಮ ಪ್ರಮುಖ ಕವಿಗಳು ಆ ಪ್ರಭಾವ ವಲಯದಲ್ಲೇ ನಿಜ ವಿಚಾರಗಳಿಗೆ ಜೀವ ತುಂಬುತ್ತಾರೆ. ಸಾಮಾಜಿಕ ಅಸಮತೆಗೆ ವರ್ಣ–ವರ್ಗಗಳ ಇರುವಿಕೆಯಲ್ಲಿ ಕಾರಣ ಕಂಡುಕೊಳ್ಳಲು ಶಕ್ತರಾದ ಕುವೆಂಪುರವರಿಗೆ ವ್ಯಕ್ತಿಯ ಆಂತರಿಕ ಅಗತ್ಯದ ಪೂರೈಕೆಗಾಗಿ ಆಧ್ಯಾತ್ಮಿಕ ನೆಲೆ ತಕ್ಕುದೆಂದು ಅನ್ನಿಸಿ, ಅದು ಯಾವ ವರ್ಗದ ಆಶಯಕ್ಕೆ ದುಡಿಯುತ್ತದೆಯೆಂಬುದನ್ನು ಗಣಿಸದಿರುವುದು ಒಂದು ವೈರುಧ್ಯ ಸ್ಥಿತಿ. ಇದು ಯಾರಿಗೆ ಆಗಲಿ ಸಾಂಸ್ಕೃತಿಕ ಒತ್ತಾಯಗಳಿಂದ ಉಂಟಾದ

---

[1] ದೇವರದೊಂದು ಗೋರಿಯ ಕಟ್ಟಿ
ಧರ್ಮದ ಧೂಪಕೆ ಬೆಂಕಿಯನಿಕ್ಕಿ
ನೆಲವನ್ನೆಲ್ಲ ತುತ್ತು ವೆನೆಂದು
ಗದರುತಿ ಹುದು ಗರ್ಜಿಸುತಿಹುದು
ಬಡವರ ಬಗ್ಗರ ತುತ್ತಿನ ಚೀಲದ
ಒಳಗಿನ ಒಳಗಿನ ಒಳದನಿಯೊಂದು

[1] ಇದು ಇಂಡಿಯಾಕ್ಕಷ್ಟೇ ಅಲ್ಲ. ಬೇರೆಡೆಯೂ ಸತ್ಯವಾಗಿದೆ. ಈ ಮಾತುಗಳನ್ನು ನೋಡಿ: The master classes have always striven to monoplize knowledge and have withheld it in every way from the people, to whom they have revealed crystalized thought only as an instrument to consolidate their power over the masses ............. This was done because it was feared that, armed with Knowledge, the peopie would refuse to work.

—Maxim Gorky.
(*On Literature* Page. 89)

ದ್ದೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಮೇಲ್ವರ್ಗ ಯಾವಾಗಲೂ ಜ್ಞಾನವನ್ನು monopolize ಮಾಡಿಕೊಳ್ಳುವುದರಿಂದ ಇತರ ವರ್ಗಕ್ಕೆ ದಕ್ಕದ ಸಂಸ್ಕೃತ ಭಾಷೆಯ ಬಗೆಗೆ ಬೆಳೆದ ವ್ಯಾಮೋಹದ ಶೈಲಿಯನ್ನು ರೂಪಿಸುವಲ್ಲಿ ಪಾತ್ರವಹಿಸಿ, ಅವರೇರಿದೆತ್ತರಕ್ಕೆ ಏರುವುದರ ಮೂಲಕ ತೋರಿಸಲಿಚ್ಛಿಸಿದ ಪ್ರತಿಭಟನೆಯ ದನಿ ಅಥವಾ ಸವಾಲಿನ ಸ್ವೀಕಾರದ ವೈಚಿತ್ರ್ಯ ಗಮನಾರ್ಹ. ಅಂತೆಯೆ ಜಲಗಾರ, ಶೂದ್ರ ತಪಸ್ವಿಯಂಥ ನಾಟಕಗಳಲ್ಲಿ ಭಾರತೀಯ ಪರಂಪರೆ ಒಪ್ಪಿದ ಮತ್ತು ಬಿತ್ತಿ ಬೆಳೆದ ಮೌಲ್ಯಗಳು Ideal condition ಆಗುವುದು ನಮ್ಮ ಸಾಂಸ್ಕೃತಿಕ ಪ್ರಭಾವ ಮತ್ತು ಕುವೆಂಪು ಕುರಿತು ಬೆಳಕು ಬೀರುತ್ತವೆ. ಮೇಲ್ವರ್ಗದ ಶೋಷಣೆ (ಪುರೋಹಿತಶಾಹಿಯ ಅನ್ಯಾಯ, ಬಲ್ಲಿದರಿಂದ ಬಡವರ ಶೋಷಣೆ ಇತ್ಯಾದಿ) ಗುರುತಿಸಿದ ಕುವೆಂಪು ಅದೇ ವರ್ಗ ಬಳಸಿ ಕೊಳ್ಳುವ ಸಂಸ್ಕೃತಿಯ ಸೂಕ್ಷ್ಮಗಳಿಂದ ಬಿಡಿಸಿಕೊಳ್ಳಲಾಗಲಿಲ್ಲ.

ಬೇಂದ್ರೆಯವರಾದರೂ ಅಷ್ಟೆ. ನಮ್ಮ ಸಾಮಾಜಿಕ ಚರಿತ್ರೆಯ ಹಿನ್ನೆಲೆಯಲ್ಲಿ ನೋಡಿದಾಗ ಬೇಂದ್ರೆಯವರು ಕುವೆಂಪುರವರಂತೆ ಸಂಸ್ಕೃತವನ್ನು ಒಂದು ಛಾಲೆಂಜಾಗಿ ಕಾಣುವ ಅಗತ್ಯವಿರಲಿಲ್ಲ. ಅಥವಾ ಕುವೆಂಪು ಹುಟ್ಟಿದ ವರ್ಗದಿಂದ ದೂರವುಳಿದ ಸಂಸ್ಕೃತ ಬೇಂದ್ರೆಯವರಿಗೆ ಒಂದು ವ್ಯಾಮೋಹ, ಆಕರ್ಷಣೆ ಆಗುವ ಸಾಧ್ಯತೆಯಿದ್ದಂತೆ ಬೇಂದ್ರೆಯವರಿಗೆ ಹಾಗೆ ಆಗುವ ಸಾಧ್ಯತೆಯಿಲ್ಲ. ಸಂಸ್ಕೃತ ಭಾಷೆಯಿಂದ ವಂಚಿತವಾದ ವರ್ಗದಿಂದ ಬಂದ ಕುವೆಂಪು ಆ ಕಡೆಗೆ ಒಲವು ತೋರಿಸಿ ಸಂಸ್ಕೃತಭೂಯಿಷ್ಠ ಭಾಷೆ ಬಳಸಿದ್ದು, ಹಿಂದಿನಿಂದ ಸಂಸ್ಕೃತ ಬಲ್ಲ ಪರಿಸರದಿಂದ ಬಂದ ಬೇಂದ್ರೆ ಪ್ರಾದೇಶಿಕ ಆಡುಮಾತಿನ ಸಾಧ್ಯತೆಗಳನ್ನು ಸೂರೆಗೊಂಡದ್ದು—ಈ ಎರಡೂ ಕೇವಲ ಇಬ್ಬರು ಪ್ರಾತಿನಿಧಿಕ ಕವಿಗಳನ್ನು ಕುರಿತ ಸ್ಥಿತಿಯಾಗದೆ ಸಾಮಾಜಿಕ ಸ್ತರಗಳಲ್ಲಿ ಮೂಡಿದ ವೈಶಿಷ್ಟ್ಯವಾಗಿದೆ.

ಕುವೆಂಪುರವರಂತೆ ಬೇಂದ್ರೆಯವರೂ ನಮ್ಮ ಸಮಾಜದ ವರ್ಗಸ್ವರೂಪವನ್ನು ಸ್ಥೂಲವಾಗಿ ಕಂಡಿದ್ದಾರೆ. ವರ್ಗಶೋಷಣೆಯ ಅಸ್ತಿತ್ವವನ್ನು ಗುರುತಿಸುವಷ್ಟರಮಟ್ಟಿಗೆ ಮಹತ್ವದೃಷ್ಟಿ ತೋರಿಸುವ ಬೇಂದ್ರೆ ವರ್ಗಹೋರಾಟವನ್ನು ಪ್ರತಿಪಾದಿಸುವುದಿಲ್ಲ. ವರ್ಗಹೋರಾಟ ಪ್ರತಿಪಾದಿಸದಿರುವುದೇ ದೋಷವೆಂದು ನಾನಿಲ್ಲಿ ಹೇಳುತ್ತಿಲ್ಲ. ಇನ್ನೊಂದು ಪರಿಹಾರದ ಕಡೆಗೆ ಅವರ ಮನಸ್ಸಿದೆ ಎಂಬುದು ನನಗಿಲ್ಲಿ ಮುಖ್ಯ. ದೇವರ ಅವತಾರದಲ್ಲಿ ಭರವಸೆಯಿಟ್ಟು ಅಲ್ಲಿಯವರೆಗೆ ಶೋಷಿತವರ್ಗ ಕಾಯಬೇಕೆಂದು[1] ಆಶಿಸುವ ಬೇಂದ್ರೆ

---

[1] ತೆರೆಮರೆಗಳ ನೆತ್ತರಿಸಿ
ತೊಡಕುಗಳ ಕತ್ತರಿಸಿ
ಅವನ ಬೆಳಕ ಬಿತ್ತರಿಸಿ
ಶಕ್ತಿಯೊಂದು ಬರುವುದು
ಅದುವರೆಗೂ ಮಲಗಿದಂತೆ
ನಾವು ತಾಳಿಯಿರುವುದು
—ಅದುವರೆಗೂ (ನಾದಲೀಲೆ)

ಯವರೂ ವೈರುಧ್ಯ ಉಳ್ಳವರಾಗಿದ್ದಾರೆ. ಶೋಷಿತ ವರ್ಗದ ದುಃಸ್ಥಿತಿಗಾಗಿ ಮರುಗಿದ ಬೇಂದ್ರೆಯವರು ತಮ್ಮ ಈ ಆಶಯ ಶೋಷಕವರ್ಗಕ್ಕೆ ಸಹಕಾರಿಯಾದ ವೈಚಾರಿಕ ವೇದಿಕೆಯಾಗುತ್ತದೆಯೆಂಬುದನ್ನು ಗಮನಿಸುವುದಿಲ್ಲ. ಗಮನಿಸುವುದಕ್ಕೆ ಪ್ರಾಚೀನ ಸಂಸ್ಕೃತಿಯ ಸೂಕ್ಷ್ಮಗಳು ಬಿಟ್ಟಿಲ್ಲ. ಈ ಸಮಸ್ಯೆ ಬೇಂದ್ರೆ ಮತ್ತು ಕುವೆಂಪು ಅವರಿಗೆ ಮಾತ್ರ ಮೀಸಲಾದದ್ದಲ್ಲ. ಈ ಇಬ್ಬರಲ್ಲೂ ಬದುಕಿನ ಸಾರ್ಥಕ ಸ್ತರವನ್ನು ಆಧ್ಯಾತ್ಮಿಕ ನೆಲೆಯಲ್ಲಿ ಹುಡುಕುವ, ತಲಪುವ ತೀವ್ರತೆಯಿದ್ದು, ಇದು ಸಂಸ್ಕೃತಿಯ ಮೂಲಸಂದರ್ಭ ದಲ್ಲಿ ಬೆಳೆದ ಭಾವ-ವಿಚಾರವಾಗಿರುವುದರಿಂದ ಅದರ ಪರಿಣಾಮಕಾರಿ ಬಿಗಿ ಮುಷ್ಟಿ ಮತ್ತು ಆಧುನಿಕರ ಮಿತಿಯನ್ನು ಒಟ್ಟಿಗೇ ಹೇಳಲು ಶಕ್ತವಾಗಿದೆ. ತಾವು ಒಂದು ಸಂದರ್ಭದಲ್ಲಿ ವಿರೋಧಿಸಿದ ವರ್ಗದ ಆಶಯಸ್ಥಿತಿಯನ್ನು ಇನ್ನೊಂದು ಕಡೆ ಒಪ್ಪುವ ಈ ವೈರುಧ್ಯ, ಸಮಾಜ ವಿಕಾಸ ಹೊಂದುವಾಗ ಉಂಟಾಗುವ ಪರಂಪರೆ ಮತ್ತು ಪ್ರಗತಿ ಪರ ಧೋರಣೆಗಳ ಹೊಂದಾಣಿಕೆಯ ಇಕ್ಕಟ್ಟಿನಲ್ಲಿ ಹುಟ್ಟಿದೆ. ಈ ವೈರುಧ್ಯಸ್ಥಿತಿ ಚಲನ ಶೀಲ ಸಮಾಜದ ಒಂದು ಅನಿವಾರ್ಯತೆಯೂ ಹೌದು. ಈ ಸಂದರ್ಭದಲ್ಲಿ ಬರೆದ ಕವಿ ಗಳಲ್ಲಿ ಅದು ಕಾಣಿಸಿಕೊಂಡದ್ದು ಆಶ್ಚರ್ಯವಲ್ಲ. ಇದರಿಂದ ರಮ್ಯಕವಿಗಳು ಎತ್ತಿದ ಶೋಷಕವಿರೋಧೀ ದನಿಯ ಮಿತಿಗಳನ್ನು ಅರಿಯಬಹುದು. ಈ ಕವಿಗಳು (ಪ್ರಾತಿ ನಿಧಿಕವಾಗಿ ಕುವೆಂಪು, ಬೇಂದ್ರೆ) ತಮ್ಮ ಪರಿಸರದ ಅಸಹ್ಯ ಸ್ಥಿತಿಯನ್ನು ವಿರೋಧಿಸಿ ದಾಗಲೂ ಸಾಮಾಜಿಕ, ಆರ್ಥಿಕ ಸಂಬಂಧಗಳ ಮೂಲಕ ಬಂಡಾಯದ ದನಿ ಕೇಳಿಸಲಿಲ್ಲ. ಅಂದರೆ ಪ್ರತಿಷ್ಠಿತವರ್ಗ ರೂಪಿಸಿದ ವ್ಯವಸ್ಥೆಯ ವಿರುದ್ಧ ಮೂಲಭೂತ ವಿರೋಧವಿಲ್ಲ. ವ್ಯವಸ್ಥೆಯ ಅಮಾನುಷ ಆಚರಣೆಗಳಿಗೆ ಮಾತ್ರ ವಿರೋಧವಿದೆಯೆನ್ನಬಹುದು. ಚರಿತ್ರೆಯ ಸಂದರ್ಭದಲ್ಲಿ ಏರ್ಪಟ್ಟ ವೈರುಧ್ಯಗಳನ್ನು ದಾಟುವ ವೈಚಾರಿಕ ತೊಡಗುವಿಕೆಯಲ್ಲಿ ವ್ಯವಸ್ಥೆಗೆ ಮೂಲಭೂತ ವಿರೋಧ ಚಿಗುರಲು ಸಾಧ್ಯ. ಆಧುನಿಕರಿಗೆ ಇದು ಅಸಾಧ್ಯ ವಾಗಬೇಕಾದ್ದೇನೂ ಇಲ್ಲ. ಇಷ್ಟಾದರೂ ಪ್ರಮುಖ ರಮ್ಯಕವಿಗಳು ಸಮಾಜದ ವರ್ಗ ಸ್ಥಿತಿಯನ್ನು ಗುರುತಿಸಿ, ತಮ್ಮ ವೈರುಧ್ಯಗಳ ನಡುವೆಯೇ ಚರಿತ್ರೆಯ ಚಲನೆಗೆ ಆಂತರಿಕಶಕ್ತಿ ತುಂಬಿರುವುದನ್ನು ಅಲ್ಲಗಳೆಯುವಂತಿಲ್ಲ.

ಹೆಚ್ಚು ಕಮ್ಮಿ ಇದೇ ಕಾಲದಲ್ಲಿ ಬೇರೆ ಬೇರೆ ಪ್ರಕಾರಗಳಲ್ಲಿ ಬಂದ ಕೃತಿಗಳು–ಒಡೆದು ಕಾಣುವಂಥ ವರ್ಗಖಚಿತತೆಯನ್ನು ತೋರದೆ ಇದ್ದಾಗಲೂ–ಚಾರಿತ್ರಿಕ ದಾಖಲೆಗಳಾಗಿ ಮಹತ್ವ ಪಡೆಯುತ್ತವೆ. ರಾವಬಹದ್ದೂರರ 'ಗ್ರಾಮಾಯಣ'ವನ್ನೆ ತೆಗೆದುಕೊಳ್ಳಿ. ಅದ್ಭುತ ಶಿಲ್ಪದಲ್ಲಿ ಎರಕ ಹೊಯ್ದ ಈ ಕಾದಂಬರಿ ಹೊಸ ನಾಗರಿಕತೆಯ ಪ್ರವೇಶದೊಂದಿಗೆ ಉಂಟಾದ ಹಳ್ಳಿಯ ಅರಾಜಕ ಸ್ಥಿತಿಯನ್ನು ವಿವಿಧ ಸ್ತರದಲ್ಲಿ ಚಿತ್ರಿಸುತ್ತದೆ; ಕಡೆಯಲ್ಲಿ ಹಳ್ಳಿಯ ನಾಶದ ಹಿಂದೆ ಅಪಾರ ವ್ಯಥೆಯ ಮಿಡಿತ ಕೇಳಿಸುವಂತೆ ದಟ್ಟತೆಯಿದೆ. ಇಲ್ಲಿ ಹಳ್ಳಿಯ ಸ್ಮಶಾನಸ್ಥಿತಿ, ಹಳೆಯ ಪದ್ಧತಿಗೆ ಒದಗಿದ ಸ್ಥಿತಿಯೂ ಆಗುವುದರಿಂದ ಲೇಖಕರ ಧೋರಣೆಯನ್ನು ಕುರಿತು ಯೋಚಿಸಬೇಕಾಗುತ್ತದೆ. ಆದರೆ ಇದೊಂದೇ ಕಾರಣಕ್ಕೆ ಸಂಕ್ರಮಣಕಾಲದ ಗ್ರಾಮ್ಯಸಮಾಜದ ಸ್ಥಿತಿ-ಗತಿಯನ್ನು ದಾಖಲಿಸುವ ಉತ್ತಮ

ಕೆಲದ ಕಾದಂಬರಿಯನ್ನು ಇಡಿಯಾಗಿ ತಿರಸ್ಕರಿಸುವುದಕ್ಕಾಗದು. ಅದು ಸಾಧುವೂ ಅಲ್ಲ. ಇದೇ ಮಾತನ್ನು ಕುವೆಂಪು ಕಾದಂಬರಿಗಳಿಗೂ ಅನ್ವಯಿಸಬಹುದು. ಮಲೆನಾಡಿನ ಬದುಕು ಸೃಜನಶೀಲ ಲೇಖಕನಿಂದ ಪುನರ್ ನಿರ್ಮಾಣಗೊಂಡದ್ದು ಆ ಮಟ್ಟಿಗೆ ಮಹತ್ವದ ವಿಷಯ. ತನ್ನದೇ ಲೋಕದಲ್ಲಿದ್ದ ಪ್ರದೇಶಕ್ಕೆ ಪ್ರವೇಶಿಸುವ ನಾಗರಿಕತೆಯ ಸಾಧನೆಗಳು, ಕ್ರಿಶ್ಚಿಯನ್ ಮಿಷನರಿ, ಇವುಗಳ ಹಿನ್ನೆಲೆಯಲ್ಲಿ (ಮಲೆಗಳಲ್ಲಿ ಮದುಮಗಳು– ಕಾದಂಬರಿಯಲ್ಲಿ) ಸನ್ಯಾಸಿಯ ಪ್ರವೇಶ ಸಂದರ್ಭ ಕುವೆಂಪು ನಿಂತ ನೆಲೆಯನ್ನು ಸೂಚಿಸಬಹುದಾದರೂ (ಅವರ ಧೋರಣೆ ಕುರಿತು ಕಾವ್ಯ ಸಂದರ್ಭದಲ್ಲಿ ಹೇಳಲಾಗಿದೆ) ಗ್ರಾಮಾಯಣಕ್ಕೆ ಹೇಳಿದ ಮಾತುಗಳನ್ನೇ ಇಲ್ಲೂ ಹೇಳಬಹುದು. 'ಕಾಕನಕೋಟೆ'ಯಲ್ಲಿ ರಾಜಭಕ್ತಿಯ ಕಡೆ ಒಲವು ತೋರಿಸುವ ಆಳುವವರ್ಗದ ಆಶಯವನ್ನು ಮನ್ನಿಸುವಿಕೆ ಕಂಡುಬರುವುದು ಮಾಸ್ತಿಯವರ ಧೋರಣೆಯನ್ನು ಪರಿಚಯಿಸುತ್ತದೆಯೆಂಬುದು ನಿಜ. ಅವರ ಸರಳ ಸುಂದರ (ನಿರ್ಲಿಪ್ತ ?) ಕತೆಗಳು ಕಟ್ಟಿಕೊಡುವ ಜೀವನ ಚಿತ್ರಗಳು ಮೇಲೆ ಹೇಳಿದ ಕಾರಣಗಳಿಗಾಗಿ ಮುಖ್ಯವಾಗುತ್ತವೆ. ಮತ್ತು ಮಾನವೀಯ ಮನಸನ್ನು ಪರಿಗಣಿಸಬೇಕು. ಜೊತೆಗೆ ಸಂಸ್ಕೃತಿಯ ವಿವರಗಳೂ ಸಿಗುತ್ತವೆ. ಶಿವರಾಮಕಾರಂತರ 'ಮರಳಿ ಮಣ್ಣಿಗೆ' ಕುಡಿಯರ ಕೂಸು, ಮುಂತಾದ ಕಾದಂಬರಿಗಳು, ಸಾಂಸ್ಕೃತಿಕ ವಿವರಗಳನ್ನು ಒದಗಿಸುವುದರ ಮೂಲಕ ಮೇಲಿನ ಅಭಿಪ್ರಾಯದ ಆಶ್ರಯಕ್ಕೆ ಬರುತ್ತವೆ. ಕಾರಂತರು ಸುಧಾರಣಾ ಶೀಲಮನೋವೃತ್ತಿಯವರು ; (ಉದಾ : ಕನ್ಯಾ ಬಲಿ) ಬದುಕಿನ ಸಾಮಾಜಿಕ ಭ್ರಷ್ಟತೆಯನ್ನು ಕಂಡರೆ ಉರಿಯಬಲ್ಲರು. ಒಂದು ಉರಿಯುವ ಸಮಸ್ಯೆ ಚಿತ್ರಿಸುವಾಗ ಯಾವುದೇ ವ್ಯಕ್ತಿಯ ಸಾಮಾಜಿಕ ಧೋರಣೆಯ ಅರಿವಾಗುವುದರಿಂದ 'ಚೋಮನದುಡಿ' ಯನ್ನು ನೋಡಬಹುದು. ಆ ಕಾಲಕ್ಕೆ ಹರಿಜನರನ್ನು ಕುರಿತು ಬರೆಯುವುದು, ಅವರಿಗೆ ಸಹಾನುಭೂತಿ ತೋರುವುದು ಪ್ರಾರಂಭಿಕಮಹತ್ವವುಳ್ಳ ವಿಷಯ. ಮಾನವೀಯ ಅಂತಃಕರಣವಷ್ಟೆ ಮುಖ್ಯವಾಗಿ ಸಮಸ್ಯೆಯ ಮೂಲಗಳು ಗೌಣವಾದಾಗ ಚೋಮನಂಥವನ ಪಾತ್ರತನ್ನ ವರ್ಗದ ಪ್ರತಿನಿಧಿಯಾಗದೆ ಆಸೆ ಆಕಾಂಕ್ಷೆ ಹೊತ್ತ ವ್ಯಕ್ತಿ ಮಾತ್ರ ಆಗುತ್ತದೆ. ಮತ್ತು ದುಃಸ್ಥಿತಿಯ ಕಾರಣಗಳು ವ್ಯವಸ್ಥೆಯಲ್ಲಿವೆಯೆಂಬ ಸತ್ಯ ಮೂಲೆ ಸೇರುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ 'ಚೋಮನದುಡಿ'ಯಲ್ಲಿ ಚೋಮನ ಸ್ಥಿತಿಗೆ ಸಂಕಪ್ಪಯ್ಯ ಪ್ರತಿನಿಧಿಸುವ Systemನಲ್ಲಿ ಕಾರಣ ಹುಡುಕುವ ಧೋರಣೆ ಕಾಣದೆ, ಚೋಮ ಎಂಬ ವ್ಯಕ್ತಿಯ ಆಸೆ ಆಕಾಂಕ್ಷೆ ಗಳ ಸುತ್ತ ಒಂದು ಪರಿಸರವನ್ನು ಪರಿಚಯಿಸಿದೆ. ಕ್ರಿಶ್ಚಿಯನ್ ಮಿಷನರಿಯ ಸಂದರ್ಭದಲ್ಲಿ ಸಮಸ್ಯೆಯನ್ನು ಇಡಲಾಗಿದೆ.

ಕನ್ನಡ ನಾಟಕದ ತಿರುವುಗಳಿಗೆ ಕಾರಣರಾದ ಕೈಲಾಸಂ, ಮತ್ತು ಶ್ರೀರಂಗರು ಆರಿಸಿಕೊಂಡ ವಸ್ತುವಿಧಾನಗಳು ಹಿಂದಿನ ನಾಟಕ ಸಂಪ್ರದಾಯಕ್ಕೆ ಹೋಲಿಸಿದಾಗ ಇದು ಪ್ರಗತಿಯನ್ನು ಸೂಚಿಸುವಂಥದು. 'ಬಹಿಷ್ಕಾರ' ನಾಟಕದ ಮೂಲಕ ಕೈಲಾಸಂರವರ ಧೋರಣೆಯನ್ನು ನೋಡಬಹುದು. ವರದಕ್ಷಿಣೆ, ಜಾತಿ, ಮದುವೆ–ಇವೆಲ್ಲ ಒಟ್ಟಿಗೆ ಹೆಣೆದು ದುರಂತಸ್ಥಿತಿ ತಲಪುವ ವಸ್ತುವಿನ ಈ ನಾಟಕ ವರದಕ್ಷಿಣೆ ಪಿಡುಗನ್ನು ವಿರೋಧಿಸಿದರೂ

ಜಾತಿಕಟ್ಟಳೆ ಮೀರುವ ಮಾತು ಬರುವುದಿಲ್ಲ. ಇದು ನಾಟಕದ ವಸ್ತು-ಪಾತ್ರಗಳ ಮಿತಿ ಇರಬಹುದು. ಮಧ್ಯಮವರ್ಗದ ಸಮಸ್ಯೆಯನ್ನು ಆಯ್ದುಕೊಂಡ ಕೈಲಾಸಂ ಆ ವರ್ಗದ ಮಿತಿಗಳೊಳಗೆ ಕೆಲಸ ಮಾಡಿದ್ದಾರೆ.

ಶ್ರೀರಂಗರ ಬಹುಸಾಲು ನಾಟಕಗಳು ಸಾಮಾಜಿಕ ರಾಜಕೀಯ ವಿಷಯಗಳಿಂದ ದೂರ ಸರಿದವುಗಳಲ್ಲ. ಈ ಪರಿಸರದ ಚಿಂತನೆ ನಡೆಸುವ ಶ್ರೀರಂಗರ ನಾಟಕಗಳ ಹಿಂದೆ ಗಾಂಧೀ ಯುಗದ ಪ್ರಭಾವವೂ ಇದೆ (ಉದಾ: ಶೋಕಚಕ್ರ, ಹರಿಜನ್ವಾರ). ತಾಂತ್ರಿಕ ಪರಿಣತಿಯ ಕಡೆಗೂ ಗಮನ ಹರಿಸಿದ ಇವರಿಗೆ ಒಟ್ಟಾರೆ ಕೆಟ್ಟದ್ದೆನ್ನಿಸಿದ್ದನ್ನು ವಿರೋಧಿಸುವ ದೃಷ್ಟಿಯಿದೆ.

ಆದರೆ ಈ ಎಲ್ಲ ಲೇಖಕರು ವ್ಯವಸ್ಥೆಯ ಬೇರುಗಳನ್ನು ಕಂಡು ಕೀಳಲೆಳಸಿದವರೆಂದೇನು ಅಲ್ಲ.

ಈ ಕೆಲವು ಪ್ರಮುಖ ಲೇಖಕರನ್ನು ನಾನಿಲ್ಲಿ ಪ್ರಸ್ತಾಪಿಸಿದ ಮುಖ್ಯ ಉದ್ದೇಶ— ಅವರ ಕೃತಿಗಳಲ್ಲಿ ನಾವು ಬಯಸುವ ವರ್ಗದ ಪರವಾದಿ ದೃಷ್ಟಿಕೋನ ಇಲ್ಲದಿದ್ದಾಗಲೂ ಅಥವಾ ಅರಿತೊ ಅರಿಯದೆಯೊ ವ್ಯವಸ್ಥೆಯ ಸೂತ್ರಧಾರೀ ವರ್ಗಕ್ಕೆ ಕೃತಿಯ ಆಶಯ ಒಂದು ಸಾಧನವಾಗುವಂತಿದ್ದರೂ ಇತರೆ ಸಂಗತ ಕಾರಣಗಳಿಗಾಗಿ ಕೃತಿ ಮತ್ತು ಕೃತಿಕಾರ ಒಂದು ಮಿತಿಯಲ್ಲಿ ಮಹತ್ವವಾಗಬಹುದೆಂಬುದನ್ನು ಸೂಚಿಸುವುದಾಗಿದೆ.

ಈ ಸಂದರ್ಭದಲ್ಲಿ ಟಾಲ್ ಸ್ಟಾಯ್ ಕುರಿತ ಲೆನಿನ್ನನ ವಿಶ್ಲೇಷಣೆಯನ್ನು ನೆನಪಿಗೆ ತಂದುಕೊಳ್ಳಬಹುದು.[1] ಏಕೆಂದರೆ ಕನ್ನಡದ ಇಂಥ ಅನೇಕ ಕೃತಿಗಳ ಬಗ್ಗೆ ತೀರ್ಮಾನಿಸುವಾಗ ನಾವು ಎಂಥ ನಿಲುವಿನ ನೆಲೆಯಲ್ಲಿರಬೇಕಾಗುತ್ತದೆಯೆಂಬುದನ್ನು ಇದು ಸೂಚಿಸುತ್ತದೆ. ಲೆನಿನ್ನನು ಕ್ರಾಂತಿಯಲ್ಲಿ ತನ್ನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ತೊಡಗಿಸಿಕೊಂಡವನಾಗಿದ್ದು ಆತ ಕಲಾಕೃತಿಯ ಬಗೆಗೆ ಹೇಳುವ ಮಾತುಗಳು ಪ್ರಗತಿವಾದಿಗಳು ಅಗತ್ಯವಾಗಿ ಗಮನಿಸಬೇಕಾದಂಥವು.

"Tolstoy's doctrine is certainly utopian and in content is reactionary in the most Precise and most Profound sense of the word'' ಎಂದು ಹೇಳಿದ ಲೆನಿನ್ ಮಹಾಕ್ರಾಂತಿಯನ್ನು ಅರ್ಥಮಾಡಿಕೊಳ್ಳದೆ ಇರುವುದನ್ನೂ ಹೇಳಿದ್ದಾನೆ; ಆತನಲ್ಲಿದ್ದ ವೈರುಧ್ಯಗಳನ್ನು ಗುರುತಿಸಿ 'they Express the Contradictory Conditions of Russian life in the last third of the ninteenth century;...........The Contradictions in Tolstoy's view are indeed a mirror of those Contradictory Conditions in which the peasantry has to play their historical part in our revolution'' ಎಂದಿದ್ದಾನೆ. ಟಾಲ್‌ಸ್ಟಾಯ್ ಕೃತಿಗಳ ಅಧ್ಯಯನದಿಂದ ರಷ್ಯದ working class ತನ್ನ ಶತ್ರುಗಳನ್ನು ಚೆನ್ನಾಗಿ ಅರಿಯಬಹುದು ಮತ್ತು ತಮ್ಮ

ದೌರ್ಬಲ್ಯಗಳನ್ನೂ ತಿಳಿಯಬಹುದು.[1]

ಫೆಡ್ರಿಕ್ ಎಂಗೆಲ್ಸ್ ಶ್ರೀಮಂತಪರ ಧೋರಣೆಯುಳ್ಳ ಬಾಲ್ಜಾಕನ ಕೃತಿ ವಿಮರ್ಶೆ ಮಾಡುವ ರೀತಿಯನ್ನೂ ಗಮನಿಸಬಹುದು. ಶ್ರೀಮಂತ ವರ್ಗ ಅವನತಿ ಹೊಂದ ಬೇಕಾದ ಕಾರಣಗಳನ್ನು ದಾಖಲಿಸುವ ಬಾಲ್ಜಾಕನ ಕೃತಿಗಳು ಆ ದೃಷ್ಟಿಯಿಂದಲಾದರೂ ಮುಖ್ಯವಾಗುತ್ತದೆಯೆಂಬುದು ಆತನ ಅನಿಸಿಕೆ.[2]

ಈ ನಿದರ್ಶನಗಳಿಂದ ಒಂದು ಮುಖ್ಯ ಸಂಗತಿ ಗೊತ್ತಾಗುತ್ತದೆ. ಒಂದು ಕೃತಿ ಪ್ರತಿ ಗಾಮಿಯಾಗಿದ್ದಾಗಲೂ ಅಥವಾ ಕ್ರಾಂತಿಯೊಂದಿಗೆ ಅರ್ಥಪೂರ್ಣ ಸಂಬಂಧ ಪಡೆಯ ದಿದ್ದಾಗಲೂ ಅದರೊಳಗೆ ಚಾರಿತ್ರಿಕ ಪ್ರಾಮುಖ್ಯ ಪಡೆದ ವಿವರಗಳಿರಬಹುದು. ಆ ದೃಷ್ಟಿಯಿಂದ ಅವು ಉಪಯುಕ್ತ ಕೃತಿಗಳು. ಸಾಹಿತ್ಯವನ್ನು ದಾಖಲೆಯೆಂದು ಪರಿಗಣಿಸಿ ದಾಗ ಆತುರದ ಒಂದೊಂದೇ ಮಾತಿನ ತೀರ್ಮಾನಗಳು ತಪ್ಪುತ್ತವೆ. ವಿಶ್ಲೇಷಣೆ ಮುಖ್ಯವಾಗಿ ಕೃತಿಯ ಎಲ್ಲ ಮುಖಗಳನ್ನೂ ಸಮಕಾಲೀನ ಸಂದರ್ಭದಲ್ಲಿ ತೆರೆದು ತೋರು ವುದು ಸಾಧ್ಯ ಮತ್ತು ಸಾಧು.

ಈ ದೃಷ್ಟಿಯಿಂದ ಕನ್ನಡದ ಮೇಲೆ ಉಲ್ಲೇಖಿಸಿದ (ಹಾಗೂ ಇಲ್ಲಿ ಉಲ್ಲೇಖಿಸದ ಕೆಲವು) ಕೃತಿಗಳು ಯಾವುದಾದರೊಂದು ಮುಖವನ್ನು ಸಮ್ರ ಸಮಕಾಲೀನ ಅಗತ್ಯದ ಕಡೆ ತಿರುಗಿಸಿವೆಯೆನ್ನಬಹುದು. ಇನ್ನೇನಲ್ಲದಿದ್ದರೂ ದಾಖಲೆಯಾಗಿ ಉಳಿದು ಮುಂದಿನ ಬೆಳವಣಿಗೆಗೆ ಹಾದಿ ಮಾಡಿಕೊಡಲು ಶಕ್ತವಾಗಿವೆ; ಆಯಾ ಕಾಲದ ಸಮಾಜದಲ್ಲಿ ಪ್ರಚಲಿತವಿದ್ದ ವಿಚಾರಧಾರೆಗಳಲ್ಲಿ ಯಾವುದಾದರೊಂದನ್ನು ಆಯಾ ಕೃತಿ ತನ್ನ ಅಂತರ್ಯದಲ್ಲಿಟ್ಟುಕೊಂಡಿರಬಹುದೆಂಬುದನ್ನು ಮರೆಯಬಾರದು. ಮಹತ್ವದ ಕೃತಿಗಳಿಗೆ ಈ ಮಾತು ಅನ್ವಯಿಸುತ್ತದೆ.

ನವ್ಯ ಕಾವ್ಯ ಸಂದರ್ಭ ಆಧುನಿಕರಲ್ಲಿ ಹಳಬರಿಂದ ಭಿನ್ನವಾದ ಘಟ್ಟ; ಚರಿತ್ರೆಯ ಮುಂದುವರಿದ ಭಾಗ ಇದಕ್ಕೂ ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿರುವುದು ರಮ್ಯಕಾವ್ಯ ಜನ್ಮಸಂದರ್ಭದಷ್ಟೇ ಪ್ರಮುಖ ಸಂಗತಿ.

ಆಧುನಿಕ ಪಾಶ್ಚಾತ್ಯ ಸಮಾಜದಲ್ಲಿ ಹಳೆ–ಹೊಸ ಮೌಲ್ಯಗಳ ಸಂಘರ್ಷಸ್ಥಿತಿ ಬಂದು ಹೊಸ ವರ್ಗವ್ಯವಸ್ಥೆ ರೂಪುಗೊಳ್ಳತೊಡಗಿತು. ಕೃಷಿಪ್ರಧಾನ ನಾಗರಿಕತೆ ಶಕ್ತಿಹೀನ ವಾಯಿತು. ಧಾರ್ಮಿಕ ಪ್ರಜ್ಞೆಗೆ ಪೆಟ್ಟು ಬೀಳಲಾರಂಭಿಸಿತು. ಒಟ್ಟಾರೆ ಪ್ರಾಚೀನವೆನ್ನ ಬಹುದಾದ ಅಂಶಗಳು ಬದಲಾವಣೆಗೆ ಪಕ್ಕಾದವು. ಸಾಮಾಜಿಕ ಸ್ಥಿತ್ಯಂತರ ಸಾಹಿತ್ಯದ ಮೇಲೆ ಪರಿಣಾಮ ಬೀರುವುದು ಸ್ವಾಭಾವಿಕ. ಹೀಗಾಗಿ ಪಾಶ್ಚಾತ್ಯರಲ್ಲಿ ನವ್ಯಸಾಹಿತ್ಯ ಕೇವಲ ತಾಂತ್ರಿಕ ಪರಿವರ್ತನೆಯಾಗಲಿಲ್ಲ, ಅಂತರಿಕ ಅವಶ್ಯಕತೆಯಾಯಿತು.

---

[1] ಲೆನಿನ್ನನ on literature and and Art ಮತ್ತು Lunacharsky ಸಂಪಾದಿಸಿದ Lenin on litrature and art ಎಂಬ ಕೃತಿಗಳನ್ನು ವಿವರಗಳಿಗಾಗಿ ನೋಡಬಹುದು.

[2] On literature—Marx and Engels.

ಕನ್ನಡದಲ್ಲಿ ನವ್ಯಕಾವ್ಯ ಹುಟ್ಟಿದಾಗ ಪಾಶ್ಚಾತ್ಯ ಸಮಾಜದ ಘಟ್ಟವನ್ನು ಇಲ್ಲಿನ ಬದುಕು ಮುಟ್ಟಿತ್ತೆಂದು ಹೇಳುವುದು ಕಷ್ಟ. ಆದ್ದರಿಂದ ಇಲ್ಲಿ ನವ್ಯಕಾವ್ಯ ಆಂತರಿಕ ಅಗತ್ಯವಾಗಿರಲಿಲ್ಲ. ವೈಯುಕ್ತಿಕ ಪ್ರಯೋಗಪ್ರಿಯತೆಯ ಫಲವೆಂಬ ವಾದವೂ ಇದೆ. ಅದೇನೇ ಇರಲಿ ನವ್ಯ ಕಾವ್ಯ ಹುಟ್ಟಿ ಬಾಳಿದ್ದಾಗಿದೆ. ಇದು ಹುಟ್ಟುವುದಕ್ಕೆ ಮುಂಚೆಯೇ ವಿ. ಕೃ. ಗೋಕಾಕರು ಅದರ ಲಕ್ಷಣಗಳನ್ನು ಕುರಿತು ಮಾತಾಡಿದರು: "ಅಲಂಕಾರಿಕ ಮಾನಸಿಕ ನಿರ್ಮಿತಿಗಳಿಂದ ದೂರ ಸರಿಯುವ ಮಾರ್ಗ ಇದು. ವಸ್ತುಗಳ ನೈಜ ಸತ್ಯದ ಸಹಜ ಅಭಿವ್ಯಕ್ತಿಯೆಡೆಗೆ ಈ ಮಾರ್ಗವು ನಮ್ಮನ್ನು ಕರೆದೊಯ್ಯಲಿದೆ........ವ್ಯಕ್ತಿನಿಷ್ಠ ವಾಗಿ ಅದು ನಿರೂಪಿತವಾಗಿದ್ದರೆ ಕಾವ್ಯವು ರೊಮ್ಯಾಂಟಿಕ್ ಮಾದರಿಯದಾಗಿರುತ್ತದೆ. ವಸ್ತುನಿಷ್ಠವಾಗಿ ನಿರಾಭರಣವಾಗಿ ನೇರವಾಗಿ ಅದು ವ್ಯಕ್ತವಾಗಿದ್ದರೆ ಕಾವ್ಯವು ನವ್ಯ ವಾಗುತ್ತದೆ."[1]

ಹಾಗೆ ನೋಡಿದರೆ ರೊಮ್ಯಾಂಟಿಕ್ ಕವಿಗಳಾದ ಬೇಂದ್ರೆ ಮತ್ತು ಕುವೆಂಪು 'ಅಲಂಕಾರಿಕ ಮಾನಸಿಕ ನಿರ್ಮಿತಿ'ಗಳಿಂದ ದೂರ ಸರಿದೇ ಇರಲಿಲ್ಲವೆಂದು ಹೇಳಲಾಗದು. ಪ್ರಾಚೀನ ಕನ್ನಡ ಕಾವ್ಯದಲ್ಲಿ ವಸ್ತುನಿಷ್ಠತೆಯಿತ್ತೆಂಬುದನ್ನು ನೆನಸಬಹುದು. ಜೊತೆಗೆ ಗೋಕಾಕರ ಮಾತುಗಳಲ್ಲಿ ಕಾವ್ಯದ ಆಕಾರಕ್ಕೆ (form) ಒತ್ತು ಬಿದ್ದಿದೆ.

ನವ್ಯಕಾವ್ಯದ ಚಾಲಸೆಯಲ್ಲಿ ಪ್ರಮುಖ ಕವಿಗಳೆನಿಸಿದ ಗೋಪಾಲಕೃಷ್ಣ ಅಡಿಗರು, ಆಧುನಿಕ ಕಾವ್ಯ ಆದರ್ಶಲೋಕದ ನಕ್ಷತ್ರಗಳನ್ನೆಣಿಸುತ್ತ ವೇದಾಂತದ ಮಂಜಿನಲ್ಲಿ ಕರಗಿದೆ ಯೆಂದೂ ಅದಕ್ಕೆ ಮತ್ತೆ ರಕ್ತದಾನದ ಅವಶ್ಯಕತೆಯಿದೆಯೆಂದೂ ವಾದಿಸಿದರು.

"ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕ ಇದ್ದ ವಾತಾವರಣ ಈಗ ಸಮೂಲ ಪರಿ ವರ್ತನಗೊಂಡಿದೆ. ಸ್ವಾತಂತ್ರ್ಯಸಂಗ್ರಾಮದ ಉದ್ವೇಗ, ಪರವಶತೆಯ ಹಾರಾಟ ಮುಗಿದು ಈಗ ನಮ್ಮ ಮನಸ್ಸು ಮತ್ತೆ ನೆಲಕ್ಕೆ ಇಳಿದಿದೆ........ಹೊಸ ಆದರ್ಶಕ್ಕಾಗಿ ಹೊಸ ಕನಸಿ ಗಾಗಿ ದೇಶದ ಮನಸ್ಸು ಹಸಿದು ಕಾಯುತ್ತಿದೆ. ಇಂಥ ವಾತಾವರಣ ಸುತ್ತಮುತ್ತಲೂ ಇರುವಾಗ ಜೀವನಾವಲಂಬಿಯಾದ ಕಾವ್ಯವೂ ಪರಿವರ್ತನಗೊಳ್ಳುವುದು ಸಹಜ" ಎಂದರು.[2]

ಅಡಿಗರ ಮಾತುಗಳಲ್ಲಿ ಕಾವ್ಯವನ್ನು ಜೀವನದ ಹತ್ತಿರಕ್ಕೆ ತರುವ ಹಂಬಲವಿದೆ. ಆದರೆ ನಮ್ಮಲ್ಲಿ ಜೀವನವೆಂದಾಗ ಅದರ ಸಾಮಾಜಿಕ ಸೂಕ್ಷ್ಮಗಳನ್ನು, ಆಯಾಮಗಳನ್ನು ಗಮನಿಸುವುದು ಅಪರೂಪ. ಇಲ್ಲಿ ಆಗಿರುವುದೂ ಅದೇ. ಇವನ್ನು ಗಮನಿಸಬೇಕಾದರೆ ಸಾಹಿತ್ಯೇತರ ಶಾಸ್ತ್ರಗಳ ನೆರವೂ ಅಗತ್ಯ. ಇದನ್ನು ಬಿಟ್ಟು 'ಶುದ್ಧ ಸಾಹಿತ್ಯ' ಮುಂತಾದ ಮಾತುಗಳಲ್ಲಿ–ಬದುಕಿಗೆ ಹತ್ತಿರವಿರಬೇಕೆಂದು ಹೇಳಿಯೂ—ದೂರವಿರುವಂತೆ ಮಾಡು ವುದು ಅಥವಾ ಅದಕ್ಕೆ ಸಾಂಸ್ಕೃತಿಕವೂ ಆಗದ ಪ್ರತಿಷ್ಠೆಯ ಸ್ಥಾನ ಕೊಡುವುದು ನಮ್ಮಲ್ಲಿ

---

1 ನವ್ಯತೆ ಹಾಗೂ ಕಾವ್ಯ ಜೀವನ—ವಿ. ಕೃ. ಗೋಕಾಕ.

2 ನಡೆದು ಬಂದ ದಾರಿ (ಕವನ ಸಂಕಲನ)—ಗೋಪಾಲಕೃಷ್ಣ ಅಡಿಗ.

ನಡೆದುಬಂದಿರುವ ಪರಿಪಾಠ. ಹೀಗೆಂದಾಕ್ಷಣ ನವ್ಯಕಾವ್ಯ ಅಥವಾ ಸಾಹಿತ್ಯ ನಮ್ಮ ಸಾಹಿತ್ಯದ ಚರಿತ್ರೆಗೆ ಚಾಲನೆಯನ್ನು ಕೊಟ್ಟೇ ಇಲ್ಲವೆಂದು ಅರ್ಥವಲ್ಲ. ನವ್ಯಕಾವ್ಯದೊಂದಿಗೆ ಬಂದ ಸಾಹಿತ್ಯ ಧೋರಣೆ ಹಿಂದಿನ ಕಾವ್ಯ ಸಂಪ್ರದಾಯಕ್ಕೆ ತೀವ್ರ ಪ್ರತಿಕ್ರಿಯೆಯಾಗಿದ್ದು ಚಾರಿತ್ರಿಕವಾಗಿ ಗಮನಿಸಲೇ ಬೇಕಾದ ಸಂದರ್ಭವಾಯಿತು. ಸಂಗೀತದ ಸಾಹಚರ್ಯದಿಂದ ಸಾಹಿತ್ಯವನ್ನು ದೂರಮಾಡಿ ಆಡುನುಡಿಯ ಹತ್ತಿರಕ್ಕೆ ಬರುವ ಪ್ರಯತ್ನ ನಡೆಯಿತು. [ಆಡುನುಡಿಯ ಹತ್ತಿರಕ್ಕೆ ಬಂದರೂ ಜನರಿಂದ ದೂರವುಳಿದದ್ದು ಅದರ ಮುಖ್ಯ ಮಿತಿಗಳಲ್ಲೊಂದು] ಬದುಕು ಸಂಕೀರ್ಣವಾಗಿದೆಯೆಂದು ಹೇಳಿ ಸಾಹಿತ್ಯದಲ್ಲಿ ಸಂಕೀರ್ಣತೆ ತಂದರು. [ಇದರ ಹೆಸರಿನಲ್ಲಿ ಅಸ್ಪಷ್ಟತೆಯೂ ಬಂದಿತು]. ಅನುಭವ ಸತ್ಯತೆ ಮತ್ತು ಅಭಿವ್ಯಕ್ತಿಗೆ ಭಾಷೆ ಯೊಡನೆ ನಡೆಸುವ ಹೋರಾಟಗಳು ಮುಖ್ಯವಾದದ್ದು ನವ್ಯ ಸಾಹಿತ್ಯದ ನೆಲೆಯನ್ನು ಸ್ಥೂಲವಾಗಿ ಹೇಳಬಲ್ಲವು. ನವ್ಯರು ಹೇಳುವಂಥ ಸಂಕೀರ್ಣತೆ ಏನಾದರೂ ಇದ್ದರೆ ಅದು ನಗರಗಳಲ್ಲಿ, ನವ್ಯ ಸಾಹಿತಿಗಳು ಬಹಳಷ್ಟು ಜನ ಬುದ್ಧಿವಂತ ಮಧ್ಯಮ ವರ್ಗದವರಾಗಿದ್ದು ಅವರ ಅನುಭವಕ್ಕೆ ಬದುಕಿನ ಸ್ತರಗಳೆಲ್ಲ ದಕ್ಕಿವೆಯೆಂದು ಹೇಳಲಾಗದು. ತಮ್ಮ ವರ್ಗದ ನೆಲೆ ಯಾವ ಮುಖಾಂತರವಾದರೂ ಕೆಲಸಮಾಡುವುದರಿಂದ ಸುಶಿಕ್ಷಿತ ಮಧ್ಯಮ ವರ್ಗದ ಲೇಖಕರು ಅನೇಕವೇಳೆ ಶಿಕ್ಷಣದಿಂದ ಅಥವಾ ಅಧ್ಯಯನದಿಂದ ಪಡೆದ ಪರಿಕಲ್ಪನೆಗಳಿಗನುಗುಣವಾಗಿ ಪರಿಸರ–ಪಾತ್ರ ಕಲ್ಪನೆ ಮಾಡಿದ್ದರೆ ಆಶ್ಚರ್ಯವಲ್ಲ. ಗಿರಿಯವರ 'ಗತಿ–ಸ್ಥಿತಿ'ಯ ಪರಿಸರ, ಅದರ ಸಾಂಕೇತಿಕ ಸ್ವರೂಪದಿಂದ ಯೋಚಿಸಿದರೂ ಕನ್ನಡ ಸಂದರ್ಭದಲ್ಲಿ ಸಂಪೂರ್ಣ ಸತ್ಯವಾಗದು. ಪರಿಸರದೊಂದಿಗೆ ಸಂಬಂಧ ಪಡೆಯಲಾರದ ನಾಯಕನ ಒದ್ದಾಟದ ಜೊತೆ ಜೊತೆಗೆ ಬರುವ ಆಸ್ಪತ್ರೆ, ಕಚೇರಿಯ Still ಗಳು ಬ್ಯೂರೋಕ್ರಸಿಯ ವಿಡಂಬನೆಗಳಾಗಬಹುದಾದರೂ ಕಾದಂಬರಿಯ ಕೇಂದ್ರ ಅದಲ್ಲ ಎಂಬುದನ್ನೂ ಗಮನಿಸಬೇಕು. ಅಲ್ಲಲ್ಲಿ ಭ್ರಷ್ಟ ಜೀವನದ ಚಿತ್ರಗಳಿದ್ದರೂ ನಾಯಕನ ಮನಸ್ಥಿತಿ, ಪರಕೀಯತೆಗಳಿಗೆ ಇವು ಕಾರಣವಾದ ಗಾಢತೆ ನಮ್ಮ ಸಾಮಾಜಿಕ ಪರಿಸರದಲ್ಲಿ ಸಿಕ್ಕುವುದು ಕಷ್ಟ. ಅಂದರೆ ಭಾಷೆಯ ಬಳಕೆ, ನಮಗೆ ತೀರಾ ಹತ್ತಿರವಾಗದ ಮುಖ್ಯ ಪಾತ್ರಗಳ ಸೆಳೆತಗಳೇ ಕಾದಂಬರಿಯ ಆಕರ್ಷಣೆಯಾಗಿರುವ ಸಂಭವವೂ ಇದೆ. ನವ್ಯರಲ್ಲಿ ಕಾಣಸಿಗುವ ಪರಕೀಯತೆ,–ಅನಾಥಸ್ಥಿತಿಗೆ ಕಾರಣವಾದರೂ ಏನು ? ಮಧ್ಯಮವರ್ಗದ ಲೇಖಕರಿಗೆ ಬೆಂಗಳೂರಿನಂಥ ನಗರವೇ ಪಾಶ್ಚಾತ್ಯ ಮಹಾನಗರಿಯಂತೆ ಆದರೆ ಹೇಗೆ ? ಈ ದೇಶದ ರೈತ-ಕಾಮಿಕರಿಗೆ ಒದಗುವ ಅನಾಥಪ್ರಜ್ಞೆಯನ್ನು ಗುರುತಿಸುವ ಗೊಡವೆಗೆ ಹೋಗದ ಇಲ್ಲಿನ ಲೇಖಕರು ತಾವಾಗಿಯೇ ಸಮುದಾಯ ಸಂಬಂಧದಿಂದ ದೂರವುಳಿಯುವ ಪ್ರಸಂಗ ತಂದುಕೊಂಡಂತಾಗಲಿಲ್ಲವೆ ? ತನ್ನ ದುಡಿಮೆ ತನ್ನದಾಗದೆ ಇನ್ನೊಬ್ಬನ ಸ್ವತ್ತಾಗುವ ಪ್ರಜ್ಞೆ ಸುಳಿದಾಗ ರೈತ ಕಾರ್ಮಿಕರಲ್ಲುಂಟಾಗುವ ಅನಾಥ ಸ್ಥಿತಿಯ ಅನುಭವ ಅಗಾಧವಾದದೆಂಬುದು ಆ ಕುರಿತು ಕಾಳಜಿ ವಹಿಸಿದವರಿಗೆ ಗೊತ್ತಾಗುವ ವಿಷಯ. ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಇಂಗ್ಲೀಷರಿಂದ ಪ್ರೇರಣೆ ಪಡೆದ ಸುಧಾರಿತ ಸಮಾಜವಾದ ಸಂದರ್ಭದಲ್ಲಿ, ಉದಯವಾದ ಮಧ್ಯಮವರ್ಗದ ಮನಸ್ಸು ಈ ಅನಾಥ ಪ್ರಜ್ಞೆಯನ್ನು ಸಾಹಿತ್ಯದಲ್ಲಿ

ದಾಖಲಿಸದೆ ಇದ್ದದ್ದು ಆಶ್ಚರ್ಯದ ಸಂಗತಿಯಲ್ಲ. ಆದರೆ ಅದೇ ಇಂಡಿಯಾದ ಬದುಕು ಎನ್ನುವಷ್ಟರ ಮಟ್ಟಿಗೆ ಪ್ರಾಶಸ್ತ್ಯ ಕೊಡುವುದು ಸಲ್ಲ. ನವ್ಯರಲ್ಲಿ ಕಾಣಸಿಗುವ ಅನಾಥ ಸ್ಥಿತಿಯ ಸಂದರ್ಭಗಳು ವ್ಯಕ್ತಿ ವಿಶಿಷ್ಟ ಅನುಭವ ಸತ್ಯತೆಯ ಪುರಾವೆಗಳು ಇದು ಈ ರೀತಿ ಬರೆಯುವ ನವ್ಯಸಾಹಿತಿಗಳು ತಮ್ಮನ್ನು ಸಮಾಜದ ಯಾವ ನೆಲೆಯಲ್ಲಿ ತೊಡಗಿಸಿ ಕೊಂಡರೆಂಬುದನ್ನು ಸಾಬೀತು ಮಾಡಲು ಸಹಾಯಕ.

ಹೀಗೆಂದಾಗ ನವ್ಯರೆಲ್ಲ ಇಷ್ಟೇ ಎಂದೇನೂ ಅಲ್ಲ. ಖಚಿತ ವರ್ಗಧೋರಣೆ ಇಲ್ಲದಿದ್ದರೂ ಲಂಕೇಶರ ನಾಟಕಗಳಲ್ಲಿ ಬರುವ ನಾಯಕರ ಪರಿಸರದ ಪ್ರತಿಭಟಕರಾಗಿರುವುದೂ ಗಮನೀಯ. ಅವರ ಕೆಲವು ನಾಟಕಗಳಲ್ಲಿ [ಉದಾ: ಟಿ. ಪ್ರಸನ್ನನ ಗೃಹಸ್ಥಾಶ್ರಮ, ನನ್ನ ತಂಗಿಗೊಂದು ಗಂಡು ಕೊಡಿ] ಖಾಸಗಿ ಅಪ್ರಾಮಾಣಿಕತೆ, ಕಂದಾಚಾರಗಳ ವಿರುದ್ಧದ ದನಿಯಿದೆ. 'ತೆರೆಗಳು' ನಾಟಕದಲ್ಲಿ ಭ್ರಷ್ಟಾಚಾರಿ ಶ್ರೀಮಂತ ನಾಯಕನ ವಿರುದ್ಧ ಕಾನೂನು ಕೈಗೆತ್ತಿಕೊಂಡ ಜನ ನಿಲ್ಲುವುದು ಅರ್ಥಪೂರ್ಣವಾದುದು; ಇದು ವಿಶಿಷ್ಟ ನಾಟಕ ಕ್ರಿಯೆಯ, ಸಾಮಾಜಿಕ ಮೂಲಗಳುಳ್ಳ ಯಶಸ್ವೀ ನಾಟಕ.

ಅಡಿಗರು ರಮ್ಯಕವಿಯಾಗಿದ್ದಾಗಲೆ ಈ ದೇಶದ ವರ್ಗಸ್ಥಿತಿಯನ್ನು ಗುರುತಿಸಿದವರು ಧರ್ಮ, ಜ್ಞಾನದ ಗುತ್ತಿಗೆ ಆಳುವ ಜನ–ಇತ್ಯಾದಿ ಹೇಗೆ ಶೋಷಣೆಗೆ 'ಸ್ವಾಮೀ'ಲಾಗಿದೆ ಯೆಂದು ಕಂಡುಕೊಂಡು 'ಸುಲಿಗೆಯೆಂಬ ಯಾಗ' ದಂತಹ ಕವಿತೆ ಬರೆದವರು. ಅನ್ನ, ಬಟ್ಟೆ, ವಸತಿಯ ಮೂಲಭೂತ ಅಗತ್ಯವನ್ನು ಮನಗಂಡ 'ಇದು ಮೊದಲು' ಪದ್ಯ ಬರೆದರು, ನವ್ಯ ಕವಿಯಾದ ಮೇಲೂ ,ಶೋಷಣೆಯ ಸ್ಥಿತಿ ಅವರಿಗೆ ಗೊತ್ತಿತ್ತೆಂಬುದುದಕ್ಕೆ 'ಚಂಡೆಮದ್ದಳೆಯ' ಗೊಂದಲ ಪುರ' ಕವಿತೆಯ ಈ ಸಾಲುಗಳನ್ನು ನೋಡಬಹುದು:

"ಉಳುವವರ ಎದೆಗೆ ಹಾಕಿತ್ತು ರಬ್ಬರು ಟ್ಯೂಬು ಒಂದೆರಡು ಮೈಲಿ ಉದ್ದ,
ಅದರಾಚೆ ತುದಿಯಲ್ಲಿ ಕುಳಿತು ಹೀರುತ್ತಿದ್ದ ರಕ್ತ ಮದ್ಯಪನೊಬ್ಬ ಅಬ್ಬಬ್ಬ ಒಂಟೆಯ ಡುಬ್ಬ,
ಗುಂಡೋದರನ ಪಟ್ಟ ಶಿಷ್ಯ ಧಾಂಡಿಗ ಜುಬ್ಬ;"

ಉಳುವವರ ಶೋಷಣೆ ಮಾಡುವ ಉಳ್ಳವರ ಕ್ರೌರ್ಯವನ್ನು ಕವಿ ತೀಕ್ಷ್ಣವಾಗಿ ಗಮನಿಸಿರುವುದು ಇಲ್ಲಿ ಕಂಡು ಬಂದಿದೆ. ಇಷ್ಟಾದರೂ ಅಡಿಗರ ರಾಜಕೀಯ ಧೋರಣೆ ಬಲಪಂಥೀಯವಾಗಿದೆ ಎಂಬುದಕ್ಕೆ ಅವರ ಆ ಮೇಲಿನ ಕವಿತೆಗಳಲ್ಲಿ ಆಧಾರವಿದೆ.[1] ಅನುಭವದ ಎಲ್ಲ ಸ್ತರಗಳಿಗೆ ಸ್ಥಾನ ಕೊಡಬೇಕೆನ್ನುವ ನವ್ಯಸಾಹಿತ್ಯ ಧೋರಣೆ ವರ್ಗಗಳು ಸಮಾಜದಲ್ಲಿ ಅಸ್ತಿತ್ವ ಪಡೆದಿರುವುದರ ಕಡೆಗೆ ಕಣ್ಣುಹಾಯಿಸಿದ್ದು ಆಶ್ಚರ್ಯವಲ್ಲ. ಆದರೆ ಇವೆಲ್ಲ ವೈಯಕ್ತಿಕ ಧೋರಣೆಯಾಗಬಹುದೇ ಹೊರತು ನವ್ಯ ಸಾಹಿತ್ಯದ ಚಳುವಳಿಯ ಕೇಂದ್ರವಲ್ಲ. ಅಡಿಗರು ಶೋಷಣೆಯ ಸ್ಥಿತಿಯನ್ನು ಗುರುತಿಸುವುದರ ಜೊತೆಗೆ ಅದರ ಇತಿಹಾಸದ ಸೂಕ್ಷ್ಮಗಳನ್ನೂ ಗಮನಿಸಿ ತಾತ್ವಿಕವಾಗಿ ಗಟ್ಟಿಯಾಗಿದ್ದರೆ ಎಡ–ಬಲ, ಗಜೇಂದ್ರ

[1] ಅಡಿಗರ ಕಾವ್ಯದಲ್ಲಿ ರಾಜಕೀಯ ಧೋರಣೆ (ಸಂಕ್ರಮಣ-೬೭)

ಮೋಕ್ಷ, ಡೊಂಕು ಬಾಲಕ್ಕೆ ಚಿನ್ನದ ನಳಿಗೆ ಇಂಥ ಕವನಗಳಲ್ಲಿ ವಾಮವಾದೀ ಧೋರಣೆ
ಯನ್ನು ಧಿಕ್ಕರಿಸುವ ಅಗತ್ಯ ಬರುತ್ತಿರಲಿಲ್ಲ. ಆದರೆ ನವ್ಯ ಕವಿ ಅಡಿಗರ, ಪ್ರಮುಖ ಕಾಳಜಿ
ಭಾರತೀಯ ಪರಂಪರೆ ಎಂಬುದು ಈಗ ಸ್ಪಷ್ಟವಾಗಿದೆ. ಅನುಭವ ನಿಷ್ಠತೆಯಲ್ಲಿ ಪರಂಪರೆಯ
ಬೇರು ಹುಡುಕುವ, ಅರ್ಥದ ಆಯಾಮಗಳಿಗೆ ತಲಪುವ ತವಕ ಅವರಿಗೆ, 'ಭೂತ' ಭ್ರೂಣ
ಗಳ ಕಾಡುವಿಕೆ ಅಪಾರ. ಭೂತವನ್ನು ವಿಶ್ಲೇಷಿಸಿ ವರ್ತಮಾನದೊಂದಿಗೆ ಸಮನ್ವಯಿಸುವ
ಮನೋಧರ್ಮ ಸುಧಾರಣಾಶೀಲವಾದದ್ದೆಂದು ಮತ್ತೆ ಹೇಳಬೇಕಾಗಿಲ್ಲ. ಭಾರತೀಯ
'ಸಂಸ್ಕೃತಿ'ಗೆ ಮನ ಸೋತವರಿಗೆ ನಮ್ಮಲ್ಲಿ ಶೋಷಣೆ ಮತ್ತು ಸಂಸ್ಕೃತಿಗಿರುವ ಸೂಕ್ಷ್ಮ
ಸಂಬಂಧಗಳು ಅರ್ಥವಾಗುವುದು ಕಷ್ಟ. ಹೀಗಾದಾಗ, ಪರಂಪರೆಯನ್ನು ಬಿಡದ, ಪ್ರಗತಿ
ಯನ್ನು ಸಂಪೂರ್ಣ ಧಿಕ್ಕರಿಸದ, ಎರಡರ 'ಒಳ್ಳೆಯದನ್ನು' ಸ್ವೀಕರಿಸಿ ಬೆಳೆಯುವ' ಪ್ರಕ್ರಿ
ಯೆಯ ಮೂಲಕ ಮೂಲಭೂತವಾಗಿ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವ ವರ್ಗಕ್ರಿಯೆ
ಸಂಕ್ರಮಣ ಕಾಲದ ಸಮಾಜದಲ್ಲಿ ಕಾಣುತ್ತದೆ; ಅದರೊಂದಿಗೆ ಹಾಗೇ ಬೆರೆತ ಸಾಹಿತಿಗಳಲ್ಲಿ
ಇದು ಸಾಮಾನ್ಯ. ಈ ಮಿತಿಯನ್ನು ದಾಟಲು ಆಗುವುದೇ ಇಲ್ಲವೆಂದರೆ ಸಮಂಜಸವೆನ್ನಿ
ಸದು. ಸಮಾಜದ ಸಹಜ ಬೆಳವಣಿಗೆಯೊಂದಿಗೆ ಬೆಸೆದುಕೊಂಡ ಲೇಖಕ ಒಂದು ಸೃಜನ
ಶೀಲ ದಾಖಲೆಯನ್ನು ಒದಗಿಸುತ್ತಾನೆ. ಅಲ್ಲಿ ಆತನ ದೃಷ್ಟಿಕೋನವೂ ವ್ಯಕ್ತವಾಗಬಹುದು.
ಆದರೆ ಪ್ರಮುಖ ನವ್ಯರಲ್ಲಿ ಪ್ರಮುಖ ನವ್ಯರಂತೆ ಕೆಲವು ವೈರುಧ್ಯಗಳಿವೆ. ವ್ಯವಸ್ಥೆಯನ್ನು
ವಿರೋಧಿಸುವಂತೆ ಕಂಡರೂ ಅದು ಶೋಷಿತ ವರ್ಗದ ಅಗತ್ಯವಾಗದೆ ಕವಿ–ಸಾಹಿತಿಯ
ವೈಯಕ್ತಿಕ ಒತ್ತಡದ ಫಲವಾಗಿರುವುದುಂಟು ; ಕೆಲವೊಮ್ಮೆ ವೈಯಕ್ತಿಕವಾದರೂ
ಸಾಮಾಜಿಕ ನೆಲೆಯಿರಲು ಸಾಧ್ಯ. ಉದಾ : ನವ್ಯರು ಬರೆದ ಕಾಮ ಕವನಗಳು.

ಇಂಥ ಕವನಗಳು ಸಾಮಾನ್ಯವಾಗಿ ನಿರ್ಭಿಡೆಯಿಂದ ಭಾವಾಭಿವ್ಯಕ್ತಿಯನ್ನು ಪಡೆ
ದಂಥವು. ಹಿಂದೆ ಯಾರೂ ಸ್ವಚ್ಛಂದವಾಗಿ ಬರೆದಿಲ್ಲವೆಂದಲ್ಲ. ಆಳುವ ವರ್ಗದವರ ಆಸ್ಥಾನದಲ್ಲಿ
'ರಸಿಕ ಶಿಖಾಮಣಿ'ಗಳ ಸಮ್ಮುಖದಲ್ಲಿ ವಾಚನ ಮಾಡುವ (ಮಾಡಿದ) 'ಶೃಂಗಾರ' ಸಂದರ್ಭ
ಗಳು ಪ್ರಾಚೀನ ಕಾವ್ಯಗಳಲ್ಲಿವೆ. ಈ ಶೃಂಗಾರ ವರ್ಣನೆಗಳು ವ್ಯವಸ್ಥೆಯ ಸೂತ್ರಧಾರಕರ
ಇಚ್ಛೆಗೆ ವಿರುದ್ಧವಾದವುಗಳಲ್ಲ ; ಬದಲಾಗಿ ಅವರ ಆಶಯಕ್ಕೆ ತಕ್ಕಂತೆಯೇ ಬಂದಿವೆ.
('ಭರತೇಶ ವೈಭವ'ದ ಭೋಗಜೀವನ ಆಳುವವನ ವಾಸ್ತವಸ್ಥಿತಿಯ ಉತ್ಪ್ರೇಕ್ಷೆ ಅಥವಾ
ಆಶಯದ ಪ್ರತಿನಿಧಿ ಎನ್ನಬಹುದಲ್ಲವೆ ?) ಆದರೆ ಆಧುನಿಕ ಕಾಲದ ನವ್ಯಕವಿಗಳು ಕಾಮದ
ಬಗ್ಗೆ ಬರೆದದ್ದನ್ನು—ಅತಿಯಾಗಿತ್ತೆಂದು ಕಾಮೆಂಟ್ ಮಾಡಿಯೂ ಅತಿಲಘುವಾಗಿ ಕಾಣುವ
ಅಗತ್ಯವಿಲ್ಲ. ಯಾಕೆಂದರೆ 'ಸಾಂಸ್ಕೃತಿಕ ಪರಂಪರೆ'ಯ ರಕ್ಷಣೆಗೆ ಟೊಂಕ ಕಟ್ಟಿದಂತೆ
ಪ್ರೇಮ ಕಾಮಗಳಿಗೆ ಕಟ್ಟುನಿಟ್ಟು ಹಾಕಿದ್ದ ಸಾಂಪ್ರದಾಯಿಕ ವ್ಯವಸ್ಥೆ ಮತ್ತು ಆರ್ಥಿಕ
ಬೆಳವಣಿಗೆಯ ಹಂತದಲ್ಲಾದ ಹೊರಸಂಪರ್ಕ ಹಾಗೂ ಶಿಕ್ಷಣ ಕ್ರಮಗಳ ಫಲ, ಪ್ರಭಾವ
ಗಳಿಂದ ಯುವ ಪೀಳಿಗೆಯ ಮನೋಧರ್ಮ ಬದಲಾಗುತ್ತ ಬಂತು. ಸಾಮಾಜಿಕವಾಗಿ
ಹೊಸ ಮೌಲ್ಯಪ್ರಿಯತೆ ಬೆಳೆದಂತೆ ವೈಯಕ್ತಿಕ ತುಡಿತ ಸಾಮಾಜಿಕ ವ್ಯವಸ್ಥೆಯ
ಕಟ್ಟುಪಾಡುಗಳನ್ನು ಮುರಿಯುವ ಘಟ್ಟ ಮುಟ್ಟಿದಾಗ, ಒಳಗೆ ಬೇಗೆಗೊಂಡು ಭಾಷೆ

ಯಾಗಿ ಹೊರಕಂಡಿತೆನ್ನಬಹುದು. ಸಾಮಾಜಿಕ ಕಟ್ಟಳೆಗಳನ್ನು ಸಡಿಲಿಸುವ ಈ ಇಚ್ಛೆ ಹೊಸ ಮಧ್ಯಮ ವರ್ಗದೊಳಗೆ ಬೆಳೆದು, ಅದೇ ವರ್ಗದ ಸಾಹಿತಿಗಳಲ್ಲಿ ಸಾಂಕೇತಿಕ ಅಭಿವ್ಯಕ್ತಿ ಪಡೆದಿದೆ.

ಗಂಡು–ಹೆಣ್ಣಿನ ಸಮಸ್ಯೆ ವೈಯಕ್ತಿಕವಾದಂತೆ ಸಾಮಾಜಿಕವೂ ಆಗಿರುವುದರಿಂದ, ಸಾಮಾಜಿಕತೆ ವೈಯಕ್ತಿಕ ಕಾಳಜಿಯ ಮುಖಾಂತರ ಪ್ರಕಟವಾಗುವ ಒತ್ತಡ ಬಿದ್ದಿತು. ಈ ವಿಷಯಗಳಲ್ಲಿ ವ್ಯವಸ್ಥೆ ವಿರೋಧಿ ಕ್ರಿಯೆ ಕಾಣಿಸುವುದು ಇದೇ ಕಾರಣದಿಂದಿರಬೇಕು. ಆದರೆ ಬಹು ಮುಖ್ಯವಾದ ಸಾಮಾಜಿಕ ಆಯಾಮಗಳನ್ನು ಅಷ್ಟಾಗಿ ಕೆದಕದಿರುವುದು ಆ ಸಾಹಿತ್ಯ ಕ್ಷೇತ್ರದ ಸೀಮಿತತೆಯನ್ನೂ ಹೇಳುತ್ತದೆ.

ನವ್ಯರ ತಾಂತ್ರಿಕ ಸಾಧನೆಯನ್ನು ಮರೆಯಲಾಗದು. ಹೊಸ ಆಸೆಗಳನ್ನು ತೆರೆದ ಆರ್ಥಿಕ ಸುಧಾರಣೆಗಳು ಕೈಗಾರಿಕಾ ಕ್ಷೇತ್ರದ ವಿಸ್ತರಣೆಗೆ ಕಾರಣವಾಗಿ ದೇಶ–ಹೊರದೇಶ ಗಳನ್ನು ಹತ್ತಿರ ತಂದದ್ದನ್ನು ಹಿಂದೆಯೇ ಹೇಳಿದ್ದೇನೆ. ಇದರಿಂದ ಉಂಟಾದ ನಗರೀಕರಣ ಬದುಕಿನ ರೀತಿ ನೀತಿಗಳಲ್ಲಿ ವ್ಯತ್ಯಾಸವುಂಟುಮಾಡಿದ್ದು ಈಗಾಗಲೆ ಗೊತ್ತಿರುವ ಸಂಗತಿ. ಆರ್ಥಿಕ ಸುಧಾರಣೆ, ತಾಂತ್ರಿಕ ಪ್ರಗತಿ ಮತ್ತು ನಗರೀಕರಣಗಳು ಪರಸ್ಪರ ಸಂಬಂಧ ಹೊಂದಿದ್ದು ವಿಶಿಷ್ಟ ಸಾಂಸ್ಕೃತಿಕ ಸ್ಥಿತಿ ಏರ್ಪಡುವುದು ಸಹಜ. ಸಾಮಾನ್ಯವಾಗಿ ಸುಶಿಕ್ಷಿತ ಮಧ್ಯಮವರ್ಗದವರೇ ಆಗಿರುವ ನವ್ಯರು ಬದುಕನ್ನು ಇಂಥ ವಿಶಿಷ್ಟ ಸಾಂಸ್ಕೃತಿಕ ಸಂದರ್ಭದಲ್ಲಿ ಅನುಭವಿಸುವ ಅನಿವಾರ್ಯತೆಯೊದಗಿ, ಅಭಿವ್ಯಕ್ತಿಯಲ್ಲಿ ತಾಂತ್ರಿಕ ಪರಿಣ ತಿಗೆ ಹಾದಿ ತೆರೆಯಿತು. ನವ್ಯತೆಗೆ ಸಂಪೂರ್ಣ ಸಮರ್ಪಿಸಿಕೊಳ್ಳದ ಜಿ. ಎಸ್. ಶಿವ ರುದ್ರಪ್ಪನವರು ಯಾಂತ್ರಿಕ ಬದುಕಿನ ಸ್ಥಿತಿಗತಿಯನ್ನು ವ್ಯಂಗ್ಯ, ವಿಷಾದಗಳೊಂದಿಗೆ ಯಾಂತ್ರಿಕವೆನ್ನಿಸುವ ತಂತ್ರದ ಮುಖೇನ ಕಾವ್ಯವಾಗಿಸಿರುವುದನ್ನಿಲ್ಲಿ ಜ್ಞಾಪಿಸಿಕೊಳ್ಳ ಬಹುದು.[1]

ರಮ್ಯ ಕಾವ್ಯಮಾರ್ಗ ಸತ್ವಹೀನವಾದ ಸಂದರ್ಭದಲ್ಲಿ ಹಳೆಯದನ್ನು ತ್ಯಜಿಸುವ ಉತ್ಸಾಹದಲ್ಲಿ ಹೊರಟ ನವ್ಯರು ಅಂತರ್ಮುಖತೆಯ ವಕ್ತಾರರೂ ಆಗಿ Individualist ಆದರೆಂಬುದು ಚರಿತ್ರೆಯ ಮುಖ್ಯ ಸಂಗತಿ. [ಇಲ್ಲಿ ನಾನು ಅಂತರ್ಮುಖತೆಯ ಅಸ್ತಿತ್ವ ವನ್ನೇ ವಿರೋಧಿಸುತ್ತಿಲ್ಲ. ಚರಿತ್ರೆಯ ಗತಿಯೊಂದಿಗೆ ಅಳವಡದ ಅಂತರ್ಮುಖತೆಯನ್ನು ಇಲ್ಲಿ ಗಮನಿಸಿದ್ದೇನೆ] ಇದರ ಜೊತೆಯಲ್ಲಿ, ಸಂಪ್ರದಾಯ ಸ್ಥೂಲ ಸ್ಥಿತಿಯನ್ನು ವಿರೋಧಿಸಿ ನಿಂತ ಪ್ರಗತಿಶೀಲರನ್ನೂ ಗಮನಿಸಬಹುದು. ಅವರು ಕೆಲವು ನವ್ಯರಂತೆ ಅಂತರ್ಮುಖಿಗಳಾಗಿ ತಮಗೆ ತಾವೆ ಗುಣಗುಣಿಸುವುದರಲ್ಲಿ ತೃಪ್ತಿ ಪಡೆಯುವ ವರ್ಗಕ್ಕೆ ಸೇರಲಿಲ್ಲವೆಂಬುದು ನಿಜ. ಆದರೆ ಮೊದಮೊದಲು ಧೋರಣೆಯೊಂದರ ವೇದಿಕೆ ನಿರ್ಮಿಸಿ ನಿಂತವರು ಬರಬರುತ್ತ ತಾವೂ Individualists ಆದರು. ಸಾಮಾನ್ಯ ಮಧ್ಯಮ ವರ್ಗಕ್ಕೆ ಸೇರಿದ ಈ ಸಾಹಿತಿಗಳು, ಆ ವರ್ಗದ ಸ್ಥಿತಿ, ಆಶಯಗಳನ್ನು ಸಾಕಷ್ಟು ಚಿತ್ರಿಸಿ

———

ಮುಂಬೈ ಜಾತಕ

ದ್ದಾರೆ. ಆದರ್ಶಮಯತೆಯಲ್ಲಿ ಮುಚ್ಚಿ ಹೋಗುವ [ಅಪತ್ರಿಸ ಸಾಮಾಜಿಕ ಜೀವನದ ಒಂದು ಕವಲು ಹಾಗೇ ಇತ್ತು] ಆಕರ್ಷಕ ಜನಪ್ರಿಯ ಪುಸ್ತಕಗಳು ಬಂದಿವೆ. ಅ. ನ. ಕೃ. ರವರ ಸಂಧ್ಯಾರಾಗ, ಉದಯರಾಗಗಳನ್ನು ಉದಾಹರಿಸಬಹುದು. ಅ. ನ. ಕೃ ಅವರು ತಮ್ಮ 'ಜೀವನ ಯಾತ್ರೆ' ಕಾದಂಬರಿಯ ಹಿನ್ನುಡಿಯಲ್ಲಿ ಭಾರತೀಯ ಸ್ತ್ರೀಯ ಸ್ಥಾನ ಮಾನವನ್ನು ಕುರಿತು ಬರೆದು ಆಕೆಯನ್ನು ಅನ್ಯಾಯದ ಶೃಂಖಲೆಗಳಿಂದ ಬಿಡಿಸುವ ಅಗತ್ಯವನ್ನು ಹೇಳಿದರು. (ಈ ಧೋರಣೆ ಮಹಿಳಾ ಲೇಖಕರಲ್ಲೂ ಬಂದಿರುವುದುಂಟು. ಸ್ತ್ರೀಗೆ ಆಗುತ್ತಿರುವ ಅನ್ಯಾಯದ ಗುರುತಿಸುವಿಕೆಯ ಸಂದರ್ಭದಲ್ಲಿ ಹುಟ್ಟಿದ ಸ್ತ್ರೀ ಸ್ವಾತಂತ್ರ್ಯ ಪರಿಕಲ್ಪನೆ ಕನ್ನಡದ ಈ ಲೇಖಕರಲ್ಲಿ ಸ್ಥೂಲವಾಗಿದೆಯೆನ್ನಬಹುದು. ಅಂದರೆ ಸ್ತ್ರೀ ಸ್ವಾತಂತ್ರ್ಯ ಹಿನ್ನೆಲೆಯಲ್ಲಿ ಆಕೆಗೆ ಮನೆಯಿಂದ ಬಿಡುಗಡೆ, ಉದ್ಯೋಗ—ಮುಂತಾದ ಬೇಡಿಕೆಗಳನ್ನು ಮಂಡಿಸುವಾಗ ಮಧ್ಯಮ (ಕೆಳಮಧ್ಯಮ) ವರ್ಗದ ಮಹಿಳೆಯನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ. ವಾಸ್ತವವಾಗಿ ಕೆಳವರ್ಗದ ಮಹಿಳೆಯರು ಪುರುಷರಿಗೆ ಸಮಾನರಾಗಿ ದುಡಿಯಲೇ ಬೇಕಾದ ಆರ್ಥಿಕ ಅನಿವಾರ್ಯತೆಯಿದೆ. ಅವರ ಸಾಂಸ್ಕೃತಿಕ ಪರಿಸರ ಅದೇ ರೀತಿ ರೂಪುಗೊಂಡಿದೆ. ಈ ಹಿನ್ನೆಲೆಯಲ್ಲಿ ಹೆಣ್ಣನ್ನು ಒಂದೇ ಸ್ತರದಲ್ಲಿ ಕಾಣುವುದು ಸೂಕ್ತವಲ್ಲ. ಸಾಮಾಜಿಕ ಮಟ್ಟವನ್ನು ಗಮನಿಸದೆ ಹೊರಡಿಸುವ ಘೋಷಣೆ ಗಳು ಆಂತರ್ಯದಲ್ಲಿ ಹುಸಿಯಾಗುವುದು ಸಾಧ್ಯ. ಅನಿವಾರ್ಯವಾಗಿ ದುಡಿಯಬೇಕಾ ಗಿರುವ ಕೆಳವರ್ಗದ ಮಹಿಳೆಯರನ್ನು ಗಮನಿಸಿದಾಗ, ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ, ಸ್ತ್ರೀ ಸ್ವಾತಂತ್ರ್ಯ ಎಂಬ ಮಾತುಗಳು ಮೂಲಭೂತ ಸಾಮಾಜಿಕ ಬದಲಾವಣೆಗೆ ಹೊರ ತಾದ ಮಧ್ಯಮ–ಕೆಳ ಮಧ್ಯಮವರ್ಗದ ಮಹಿಳೆಯರ ಸ್ಥಾನಮಾನ ಸುಧಾರಣೆಗೆ ಸಹಾಯಕವಾದ ಧೋರಣೆಯನ್ನು ಒಳಗೊಂಡಿರುವುದು ಸ್ಪಷ್ಟ. ಉದಾರವಾದಿ ಧೋರಣೆಯ ನಮ್ಮ ಬಹುಪಾಲು ಸಾಹಿತಿಗಳು ಎಡುವುದು ಇಲ್ಲಿಯೇ. ಹೀಗಾದಾಗ ಸ್ತ್ರೀ ಸಹಾನುಭೂತಿಯಷ್ಟೆ ಮುಖ್ಯವಾಗಿ, ಆಕೆಯ ಬದುಕಿನ ವಿವಿಧ ಸಾಮಾಜಿಕ ಸ್ತರಗಳು ಗೌಣವಾಗುತ್ತವೆ. ಒಂದೇ ಬೆಲ್ಲದ ಪಾಕದಲ್ಲಿ ತಯಾರಾದ ಪಾತ್ರಗಳು ಕಾಣಿಸಲು ಅನುವಾಗುತ್ತವೆ.

[ನವ್ಯರು ಹೆಣ್ಣಿನ ಬಗ್ಗೆ ಬರೆದಾಗಲೂ ಅದನ್ನು ಎಷ್ಟು ಜನ ಸಾಮಾಜಿಕಗೊಳಿಸಿದರು ಎಂದು ಪ್ರಶ್ನಿಸಬೇಕಾಗುತ್ತದೆ. ಗಂಡು–ಹೆಣ್ಣಿನ ಸಂಬಂಧದ ಸಾಮಾಜಿಕ ವ್ಯಾಪ್ತಿಯನ್ನು ಗುರುತಿಸಿದ ಬರವಣಿಗೆ ವೈಯಕ್ತಿಕ ತುಡಿತದ ಹಂತದಲ್ಲೆ ಮುರುಟಿ ಹೋಗುತ್ತದೆಯೆಂಬ ಮಾತನ್ನು ಕೆಲವು ನವ್ಯಕವಿತೆಗಳ ಹಿನ್ನೆಲೆಯಲ್ಲೂ ಹೇಳಬಹುದು.]

ಪ್ರಗತಿಶೀಲ ಚಳುವಳಿಯ ಕಾವು ಸಾಹಿತ್ಯ ಕ್ಷೇತ್ರದ ಮಡಿವಂತಿಕೆಗಳನ್ನು ಕಿತ್ತೊಗೆ ಯುವ ಶಕ್ತಿ ಪಡೆದದ್ದುಂಟು. ಈ ಮಡಿವಂತಿಕೆಯು ಹಿಂದೆ ಮಧ್ಯಮವರ್ಗದ (ಅಥವಾ ಲೇಖಕರು ಎಂದರೆ ಸಾಕು?) ಲೇಖಕರ ಆಶಯವೂ ಆಗಿತ್ತು. ಆ ವರ್ಗದಿಂದ ದೂರವಲ್ಲದ ಪ್ರಗತಿಶೀಲರ 'ಮಡಿವಂತಿಕೆ ವಿರೋಧೀ ಧೋರಣೆ' ಒಂದೇ ವರ್ಗದ ವೈರುಧ್ಯಗಳನ್ನು ತೋರಿಸಬಲ್ಲದು. ಸಾಂಪ್ರದಾಯ ಆಲೋಚನೆಯಲ್ಲಿ ನಂಬಿಕೆಯುಳ್ಳ ಒಂದು ಗುಂಪಿನ

ವಿರೋಧೀ ದನಿ ಅದೇ ವರ್ಗದ ಒಡಲಲ್ಲಿ ಬಂದಿರುವುದು ಸ್ವಾಭಾವಿಕ. ವಿರೋಧೀ ಉತ್ಸಾಹ ಹೊಸ ವಸ್ತುವಿಗೆ ಸೇರ್ಪಡೆಗೆ ಕಾರಣವಾಗಿ ಸೂಳೆಯರನ್ನು ಕುರಿತು ಕಾದಂಬರಿಗಳು ಬಂದವು. [ನಗ್ನ ಸತ್ಯ, ಶನಿಸಂತಾನ, ಅಪರಂಜಿ, ಸಂಜೆಗತ್ತಲು, ಮಸಣದ ಹೂ...ಇತ್ಯಾದಿ] ಜಾತಿ ಪದ್ಧತಿ, ಮಠಾಧಿಪತಿಗಳ ಅನಾಚಾರ ಕುರಿತ ಕೃತಿಗಳೂ ಬಂದಿವೆ. [ಜನಿವಾರ ಶಿವದಾರ, ನೀ ನನ್ನ ಮುಟ್ಟಬೇಡ, ಜರತಾರಿ ಜಗದ್ಗುರು, ಭೂಮಿಗಿಳಿದು ಬಂದ ಭಗವಂತ....ಇತ್ಯಾದಿ. 'ನೀ ನನ್ನ ಮುಟ್ಟ ಬೇಡ' (ಕಟ್ಟೀಮನಿವಿರಚಿತ) ಗಮನಿಸಲರ್ಹ ವಾದ ಶಕ್ತಿಶಾಲೀ ಕೃತಿ.]

ಕೇವಲ ಸೂಳೆಯರನ್ನು ಕುರಿತು ಬರೆಯುವುದು, ಸ್ತ್ರೀ ಸ್ವಾತಂತ್ರ್ಯ ಕುರಿತು ಮಾತಾಡು ವುದು ಪ್ರಗತಿಶೀಲ ಚಳುವಳಿಯೆ ಎಂಬ ಪ್ರಶ್ನೆಗಳೂ ಎದ್ದಿವೆ. ಸೂಳೆಯರನ್ನು ಕುರಿತ ಕೆಲವು ಕೃತಿಗಳಲ್ಲಂತೂ ಆಂತರಿಕ ಆಸೆ ಆಕಾಂಕ್ಷೆಗಳು ಹೇರಳ ವಿವರಗಳಲ್ಲಿ ಹರಡಿಕೊಂಡಿವೆ. ಕೆಲವು ಕಡೆ ಆಂತರಿಕ ಕಲಾತ್ಮಕತೆಗೆ ಧಕ್ಕೆ ತಂದು, ಸಮಸ್ಯೆಯನ್ನೂ ಗೌಣಗೊಳಿಸಿಬಿಟ್ಟವೆ. ಈ ಹಿನ್ನೆಲೆಯಲ್ಲಿ ಪ್ರಗತಿಶೀಲ ಚಳುವಳಿಗೆ ಗೌರವಪ್ರಾಯವಾದ, ಬದುಕಿನ ಮೂಲ ಸಮಸ್ಯೆಗಳಿಗೆ ಸ್ಪಂದಿಸಿದ ಕೃತಿಗಳು ಬಂದಿರುವುದು ಸಂತೋಷದ ಸಂಗತಿ. ನಿರಂಜನರ 'ವಿಮೋಚನೆ', 'ಚಿರಸ್ಮರಣೆ' ಮತ್ತು ಬಸವರಾಜ ಕಟ್ಟೀಮನಿಯವರ 'ಜ್ವಾಲಾ ಮುಖಿಯ ಮೇಲೆ' ಕೃತಿಗಳು ಈ ಪಂಗಡಕ್ಕೆ ಸೇರುತ್ತವೆ. ವರ್ಗ ಪ್ರಜ್ಞೆಯ ಇಂಥ ಕೆಲವು ಕೃತಿಗಳನ್ನು ಬಿಟ್ಟರೆ, ಪ್ರಗತಿಶೀಲರ ಬಹಳಷ್ಟು ಕೃತಿಗಳು ಒಟ್ಟಾರೆ ಸಾಮಾಜಿಕ ಜೀವನದ ಭ್ರಷ್ಟ ಸ್ಥಿತಿಯನ್ನು ಕಂಡು ಕೆರಳಿ ಸಮಾಜದ ಮೇಲೆ ಅಥವಾ ಸಮಾಜದ ಕೆಲವರ ಮೇಲೆ ಭಾರ ಹಾಕಿ, ಕೃತಿಯ ವಿವರಗಳಲ್ಲೂ ಗೆರೆ ಮೀರುವುದರ ಮೂಲಕ ವೈಯಕ್ತಿಕ ಒತ್ತಡಕ್ಕೆ ಹಾದಿ ಸುಗಮಗೊಳಿಸುವಲ್ಲಿಯೇ ಸಾಹಿತ್ಯ ಮತ್ತು ಸಾಮಾಜಿಕ ಸಂಪ್ರ ದಾಯಗಳನ್ನು ವಿರೋಧಿಸಿ ನಿಂತರು. ಪ್ರಗತಿಶೀಲರೆಲ್ಲ ಶೋಷಣೆಯ ಸೂಕ್ಷ್ಮಗಳನ್ನು ಪ್ರಜ್ಞೆಯ ಪರಿಧಿಗೆ ತಂದುಕೊಂಡು ಧೋರಣೆ ರೂಪಿಸಿಕೊಂಡಿದ್ದರೆ ಬಹುಶಃ ಆಮೇಲೆ Individualists ಆಗುತ್ತಿರಲಿಲ್ಲ. ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಾಹಿತ್ಯಕ್ಕೆ ಸಾಮಾಜಿಕ ಸಂಬಂಧ ದೊರಕಿಸಿದ ಪ್ರಮುಖ ಚಳುವಳಿಯಾದ ಇದು ತನ್ನ ಮಿತಿಗಳ ಫಲವಾಗಿ ಶೋಷಣೆಯ ಚರಿತ್ರೆಯನ್ನು ಅದರ ಸಾಮಾಜಿಕ, ಸಾಂಸ್ಕೃತಿಕ ಸೂಕ್ಷ್ಮಗಳ ಜೊತೆಯಲ್ಲಿ ದಕ್ಕಿಸಿಕೊಳ್ಳದೆ, ಒಂದು ಮುಖ್ಯ ಘಟ್ಟವಾಗಿ ಇತಿಹಾಸಕ್ಕೆ ಸೇರಿ ಹೋಯಿತು.

ನಾನು ಪ್ರಸ್ತಾಪಿಸಿದ Iindividualist ತಂತಾನೆ ಉದ್ಭವವಾದ್ದಲ್ಲ. ಇದು ಊಳಿಗ ಮಾನ್ಯ ಪದ್ಧತಿ(Feudal System)ಅನ್ನು ತಪ್ಪಿಸಲು ಬಂಡವಾಳಶಾಹಿ ಬೆಳೆಸಿದ ಒಂದು ಮಾನಸಿಕಸ್ಥಿತಿ ; ಅಂದರೆ ಖಾಸಗಿ ಆಸ್ತಿ ಹಕ್ಕನ್ನು ಕೊಡುವುದರ ಮೂಲಕ ವರ್ಗಹಕ್ಕಿಗಿಂತ individualಗೆ ಪ್ರಾಶಸ್ತ್ಯ ನೀಡಿ Social Products ಅನ್ನು ಮನಾಪಲಿ ಮಾಡಿಕೊಳ್ಳುವುದು ಬಂಡವಾಳಶಾಹಿಯ ವಕ್ತಾರರಿಗೆ ಸಾಧ್ಯ. Feudal Sytsemನಲ್ಲಿದ್ದ ನೇರ ನಿರ್ಬಂಧ ಸ್ಥಿತಿಯನ್ನು ಹೋಗಲಾಡಿಸಿ ಪರೋಕ್ಷ

ನಿರ್ಬಂಧಗಳನ್ನಿಟ್ಟುಕೊಳ್ಳುವುದು ಇದರಿಂದ ಸುಲಭ; ಈ ನಿರ್ಬಂಧದ ಸೂತ್ರಗಳು ಮೇಲ್ವರ್ಗದ ಕೈಯಲ್ಲಿ (ಅಥವಾ ಬಂಡವಾಳಶಾಹಿ ಪಕ್ಕಾರರು) ಇರುತ್ತವೆಯೆಂದು ಬೇರೆ ಹೇಳಬೇಕಾಗಿಲ್ಲ. ನೇರ ನಿರ್ಬಂಧ ಪದ್ಧತಿಯನ್ನು ಹೋಗಲಾಡಿಸಿ ಮುಕ್ತ ಮಾರು ಕಟ್ಟೆಯನ್ನೂ ತೆಗೆಯುವುದರಿಂದ ಇದು ಸ್ವತಂತ್ರ ಸಮಾಜ ಎಂಬ ಭ್ರಮೆ ಹುಟ್ಟು ತ್ತದೆ. ಈ ಭ್ರಮೆಯಲ್ಲೆ ಬದುಕು ಸುತ್ತುತ್ತದೆ. ತನ್ನ Individualismನಿಂದ ಇದು ಸ್ವತಂತ್ರ ಸಮಾಜವಾಗಿ ಕಾಣುತ್ತದೆ. ನಾವು ಬದುಕುವ ವ್ಯವಸ್ಥೆಯ ಒಳಪದರಗಳಲ್ಲಿ ಇರುವ ಈ ಭ್ರಮಾತ್ಮಕ ಸ್ಥಿತಿ ಮತ್ತು ಅದಕ್ಕೆ ಹೊಂದಿಕೊಂಡಂಥ individuality ಸಾಮಾಜಿಕ ಗ್ರಹಿಕೆ ಮತ್ತು ಸೃಜನಶೀಲ ಅಭಿವ್ಯಕ್ತಿಯಲ್ಲೂ ಕಂಡರೆ ಆಶ್ಚರ್ಯ ಪಡ ಬೇಕಾಗಿಲ್ಲ. ಸಮುದಾಯ ಸ್ವಾತಂತ್ರ್ಯದ ಬದಲು ವ್ಯಕ್ತಿ ಸ್ವಾತಂತ್ರ್ಯದ ಅಮಲು ಹತ್ತು ವುದು ಈ ನಾಡಿನಲ್ಲಿ ಕಂಡು ಬರುವ ವ್ಯಾಪಕ ಕ್ರಿಯೆಯಾಗಿದೆ ; ಇದು ನಮ್ಮ ಪ್ರಗತಿ ಪರ ಹೋರಾಟಗಳ ಮಿತಿಯಾದಾಗ ಪರಿಣಾಮ ಗೊತ್ತೇ ಇದೆ. ಇದನ್ನು ನವ್ಯ ಸಾಹಿತ್ಯಕ್ಕೂ ಅನ್ವಯಿಸಿ ನೋಡಬಹುದು ; ಪ್ರಗತಿಶೀಲರು ನವ್ಯರಿಗಿಂತ ಸರಳ, ಗಾಢ ಸಾಮಾಜಿಕ ಸಂಬಂಧವನ್ನು ಪಡೆಯುವ ತವಕ ತೋರಿದರು. ಆದರೂ ಬೂರ್ಜ್ವಾ ಸಮಾಜದ ವ್ಯಕ್ತಿ ನಿಷ್ಠ ಸ್ವಾತಂತ್ರ್ಯದ ಕಲ್ಪನೆ ಪ್ರಗತಿಪರ ಸಂಘಟನೆಗಳ ನಡುವೆ ಹೇಗೆ ತನ್ನ ಕೆಲಸ ಮಾಡಿ ಕೈ ತೊಳೆಸುತ್ತದೆಯೆಂಬುದು ಮೇಲಿನ ವಿವರಣೆಯ ಹಿನ್ನೆಲೆಯಲ್ಲಿ ಸ್ಪಷ್ಟ.

ಇಂಥ ಚಳುವಳಿಗಳು ಶೋಷಿತರ ಬಗ್ಗೆ ಸಾಕಷ್ಟು ಸಹಾನುಭೂತಿ ಅನುಕಂಪೆಗಳನ್ನು ಬಿಟ್ಟು ಹೋಗಲು ಸಾಧ್ಯವಾಗಿದೆ. ಮೋಚಿ, ಬೂಟ್ ಪಾಲಿಷ್—ಇಂಥ ಕತೆಗಳು ಇದಕ್ಕೆ ಉತ್ತಮ ಉದಾಹರಣೆಯಾಗಬಲ್ಲವು. ಆದರೆ ಈ ಚಳುವಳಿಗಳು ಪ್ರಗತಿಪರ ಹೋರಾಟದ ಮುಂದುವರಿಕೆಗೆ ಒಂದು ಹಂತದ ಆಂತರಿಕ ಶಕ್ತಿಯಾಗುತ್ತಿವೆಯೆಂಬುದನ್ನು ಒಪ್ಪಬೇಕು.

ಇಷ್ಟೆಲ್ಲ ಏಳು ಬೀಳುಗಳನ್ನು ನಮ್ಮ ಸಾಮಾಜಿಕ, ಸಾಹಿತ್ಯ ಚರಿತ್ರೆ ಕಂಡಿದ್ದರೂ ಯಥಾಸ್ಥಿತಿವಾದಿ ದೃಷ್ಟಿಕೋನ ಇಲ್ಲಿ ಹೆಚ್ಚು ಪ್ರಿಯವಾಗಿದೆ. ಬೌದ್ಧಿಕ ಸ್ತರದಲ್ಲಿ ಹೆಚ್ಚು ಚುಚ್ಚು ಮದ್ದನ್ನೂ ಕೊಟ್ಟಿದೆ. ಹೊಸ ಮೌಲ್ಯಗಳಿಗೆ ಆಸೆ ಪಟ್ಟರೂ "ಬದಕು ಜಟಕಾ ಬಂಡಿ ವಿಧಿಯದರ ಸಾಹೇಬ" [ಮಂಕುತಿಮ್ಮನ ಕಗ್ಗ—ಡಿ. ವಿ. ಜಿ.] ಎಂದಾಗ ಹೌದೆಂದು ಒಪ್ಪುವ, ಆದರೆ ಬದುಕಲು ಲೌಕಿಕ ಸ್ಥಿತಿಯಲ್ಲಿ ಸದಾ ಹೋರಾಡು ವೈರುಧ್ಯ ಸ್ಥಿತಿಯನ್ನು ನಮ್ಮ ಸಾಂಸ್ಕೃತಿಕ ಚರಿತ್ರೆ ಸಿದ್ಧಗೊಳಿಸಿದೆ. "ಹಳೆಬೇರು ಹೊಸ ಚಿಗುರು ಕೂಡಿರಲು ಮರ ಸೊಬಗು" [ಡಿ. ವಿ. ಜಿ.] ಎಂದು ಪರಂಪರೆ–ಪ್ರಗತಿ ಅಥವಾ ಸಂಪ್ರದಾಯ–ಸುದಾರಣೆಗಳ ಹಿನ್ನೆಲೆಯಲ್ಲಿ ಹೇಳಿದಾಗಂತೂ ನಮ್ಮವರಿಗೆ (ಬುದ್ಧಿಜೀವಿ ಗಳಿಗೂ) ಆಪ್ಯಾಯಮಾನ. ಈ ಮನೋಧರ್ಮ ನಮ್ಮ ಬಹುಪಾಲು ಸಾಹಿತ್ಯದ ಮನೋಧರ್ಮವೂ ಆಗಿರುವುದು ಸ್ವಾಭಾವಿಕ. ಇಲ್ಲಿ ಬೇರು ಭದ್ರ ' ಅದನ್ನು ಅಲುಗಾಡಿಸ ಬಾರದು, ಸುಧಾರಣೆ ಅಥವಾ ಪ್ರಗತಿ ಹೂವು ಉದುರಿ ಹುಟ್ಟುವಂತೆ ಸಹಜಕ್ರಿಯೆ (ಅಂದರೆ ಮನುಷ್ಯಪ್ರಯತ್ನ ಅನಗತ್ಯ ?) ಈ ವಿವರಣೆ ಕವಿಯ Conservatism

ಆಗಿರುವಂತೆ ಸಾಂಸ್ಕೃತಿಕವಾಗಿ ಇಂಡಿಯಾ ಇತಿಹಾಸದ ಸಾರಾಂಶವೂ ಆಗಿದೆಯೆನ್ನಬಹುದು.

ಈ ದೇಶದಲ್ಲಿ ಸಂಸ್ಕೃತಿಯ ಬಗ್ಗೆ ಮಾತಾಡುವುದು ಭಾವನಾತ್ಮಕ ವಿಷಯವಾಗಿದ್ದು, ಅದಕ್ಕನುಗುಣವಾದ ತಾತ್ವಿಕ ತಳಹದಿಯ ನಿರ್ಮಾಣದ ಪ್ರಯತ್ನಗಳೂ ನಡೆದಿದ್ದು, ಸಾಹಿತಿಗಳ ಮೇಲೂ ಪ್ರಭಾವ ಬೀರಿರುವುದುಂಟು. ಭಾರತೀಯ ಸಂಸ್ಕೃತಿ ಹಿಂದೂ ಸಂಸ್ಕೃತಿ ಮುಂತಾದ ಮಾತುಗಳ ಹಿಂದಿರುವ ಸೂಕ್ಷ್ಮಾತಿಸೂಕ್ಷ್ಮಗಳೆಲ್ಲ ಗೌಣವಾಗಿ, ರಕ್ತದಲ್ಲಿ ಹರಿಯುವ ಆವೇಶವಾಗಿ ವಿಜೃಂಭಿಸಿರುವುದು ವಿಷಾದನೀಯ. ವಾಸ್ತವವಾಗಿ ಸಂಸ್ಕೃತಿಯ ಈ ಶೀರ್ಷಿಕೆಗಳು ಸಾಂಸ್ಕೃತಿಕ ಹಾಗೂ ಆರ್ಥಿಕ ಸಂಬಂಧದ ಒಳ ಸ್ಥಿತಿಯನ್ನು ಮುಚ್ಚಿ ವೇದಿಕೆಯಲ್ಲಿ ವಿಜೃಂಭಿಸುವ ಭಾವನಾತ್ಮಕ ಉಪಾಯಗಳಾಗುತ್ತವೆ; ಭಾವಾವೇಶದ ವಾತಾವರಣ ನಿರ್ಮಿಸಿ ವರ್ಗ ಸಂಬಂಧಗಳ ಸ್ವರೂಪವನ್ನು ಮರೆಸುತ್ತವೆ ; ಬಹಳಷ್ಟು ಜನ ಇದನ್ನೇ ಸಂಸ್ಕೃತಿ ಎಂದು ಪ್ರಾಮಾಣಿಕವಾಗಿ ನಂಬಿ ಅದರಲ್ಲಿ ಉಸಿರಾಡುವ ದುರಂತ ಕಣ್ಣೆದುರು ಇದೆ. ಸಮಾಜದ ಪ್ರತಿಷ್ಠಿತ ಶಕ್ತಿಗೆ (ವರ್ಗಕ್ಕೆ) ದುಡಿಯುವ ಹುಸಿ ಸಂಸ್ಕೃತಿಯ ವಾತಾವರಣವನ್ನು ಭದ್ರಗೊಳಿಸುವ ಸಂದರ್ಭ ಸೃಷ್ಟಿಯಾಗುವ ಅಗತ್ಯವಿರುವಾಗ ಬುದ್ಧಿಜೀವಿಗಳನೇಕರು ಅದರ ಪರವಾಗಿ ತುಡಿಯುವುದು ನಮ್ಮ ಬೌದ್ಧಿಕ ಪ್ರಸಾರ ಕ್ರಿಯೆಯ ಮೇಲೆ ಬೆಳಕು ಚೆಲ್ಲುತ್ತದೆ. ಹೊಸ ಧೋರಣೆ ಹೊತ್ತು ಹೊಸಕಾವ್ಯ ಸೃಷ್ಟಿಗೆ ಕ್ರಿಯಾಶೀಲತೆ ತುಂಬಿದ ಅಡಿಗರಂಥವರೂ ಈ ವ್ಯೂಹದಿಂದ ಹೊರ ಬರುವ ಹೊಸ ಒತ್ತಡಕ್ಕೆ ಸಿಕ್ಕಲಿಲ್ಲ. ಎಸ್. ಎಲ್. ಭೈರಪ್ಪನವರಿಗೆ 'ಭಾರತೀಯ ಸಂಸ್ಕೃತಿ ಬಲು ಪ್ರಿಯವಾದದ್ದು; ಹಳೆಯ ಮೌಲ್ಯಗಳನ್ನು ಧಿಕ್ಕರಿಸದ ಮನಸ್ಸು; ಅದಕ್ಕನುಗುಣವಾದ ಕೃತಿರಚನೆ ಧರ್ಮಶ್ರೀ, ತಬ್ಬಲಿಯು ನೀನಾದೆ ಮಗನೆ, ನಯಿನೆರಳು ವಂಶವೃಕ್ಷ–ಇಲ್ಲೆಲ್ಲ ಒಂದಲ್ಲ ಒಂದು ರೀತಿಯಲ್ಲಿ So called ಸಂಸ್ಕೃತಿಯ ಒತ್ತು ಇದೆ. ಆದ್ದರಿಂದ ಇವರ ಕೆಲವು ಕೃತಿಗಳು ಪ್ರತಿಗಾಮಿ ಶಕ್ತಿಯ ಅಥವಾ ವರ್ಗದ ಆಶಯದೊಂದಿಗೆ ಸಹಕರಿಸುತ್ತವೆ. ಈ ದೇಶದಲ್ಲಿ ಮಾನಸಿಕ ಬೌದ್ಧಿಕ ಹಿಂಸೆಗೆ ತುತ್ತಾದವರ ವಿರುದ್ಧದ ಧೋರಣೆಗೆ ಕುಮ್ಮಕ್ಕು ಕೊಡುತ್ತವೆ. 'ದಾಟು' ಆಲೋಚನೆಗೆ ಹಚ್ಚಲು ಶಕ್ತವಾಗಿದೆ. ವಿಶೇಷ ಅರ್ಥ ಕೊಡುವಂತೆ ಕಾಣುವ 'ದೇವ ಸ್ಥಾನ'ದ ನಾಶ, ಪ್ರವಾಹಕ್ಕೆ ಸತ್ಯಭಾಮೆ ಜನಿವಾರ ಬಿಡುವುದು ಮುಂತಾದ ಸಂದರ್ಭಗಳು ರೆಲೆವೆಂಟಾಗುವ ಸಾಧ್ಯತೆಗಳನ್ನು ಹೊಂದಿದ್ದು ಮೇಲೆ ಹೇಳಿದ ಕೃತಿಗಳ ವಿಚಾರ ಕ್ಕಿಂತ ಭಿನ್ನವಾಗಿ ಕಾಣುತ್ತದೆ. ಈ ಕೃತಿಯನ್ನು ಕುರಿತು ಚರ್ಚೆಯ ಹೆಸರಿನ ಆವೇಶ, ಆಕ್ರೋಶ, ಮತ್ತು ಗಂಭೀರ ಚಿಂತನೆಗಳು ನಡೆದಿದ್ದು, ಬಹುಶಃ ಭೈರಪ್ಪನವರ ಮುಂದಿನಕೃತಿಗಳಲ್ಲಿ ವ್ಯಕ್ತವಾಗುವ ಸಾಮಾಜಿಕ ಧೋರಣೆ ಈ ಕೃತಿಯ ಮೌಲ್ಯನಿರ್ಣಯಕ್ಕೂ ಸಹಕಾರಿಯಾದೀತು; ಸತ್ಯಭಾಮೆ ಬ್ರಾಹ್ಮಣೀಕರಣದ ಪ್ರಯತ್ನ ನಡೆಸಿ ಕಡೆಗೆ [ಜನಿವಾರ ಎಸೆಯುವ ಕ್ರಿಯೆಯ ಮುಖಾಂತರ] ಅದರ ಅರ್ಥಹೀನತೆಯನ್ನು ಅರಿಯುವುದು ಕಾದಂಬರಿಯಲ್ಲಿ ಕಡೆಗಣಿಸ ಬಾರದ ಒಂದು ಮುಖ್ಯ ಘಟ್ಟ. ಭೈರಪ್ಪನವರ ಈ ಕೃತಿಗೆ ಮಿತಿ ಗೊಳಿಸಿ ಈ ಮಾತು

ಗಳನ್ನು ಹೇಳುತ್ತಿದ್ದೇನೆ ಅಷ್ಟೆ ಅಲ್ಲದೆ ಇದಿಷ್ಟು ಇಡೀಕೃತಿಗೆ ಅಂತಿಮ ಭಾಷ್ಯವೇನೂಅಲ್ಲ.

ಸಾಕು ಬೇಕಷ್ಟು ಪ್ರಚಾರ ಪಡೆದ 'ಸಂಸ್ಕಾರ' (ಲೇ. ಯು. ಆರ್. ಅನಂತಮೂರ್ತಿ) ಹೆಚ್ಚು ವ್ಯಾಪ್ತಿಯಿಲ್ಲದ ವೈದಿಕ ವರ್ಗದ ವೈಚಾರಿಕ ವಿಶ್ಲೇಷಣೆಗೆ ತೊಡಗುವ ಕೃತಿ. ಜೀವ ಕಳೆದುಕೊಂಡ ವೈದಿಕ ಸಂಸ್ಕೃತಿಯ ಚಿತ್ರ ಕೊಡುತ್ತ, ಇದರಿಂದ ಸಿಡಿದ ನಾರಾಯಣಪ್ಪನೇ ಸಮಸ್ಯೆಯಾಗಿ, ಕಾಡುವ, ಪ್ರಾಣೇಶಾಚಾರ್ಯರು ಆ ಪರಿಸರದಿಂದ ಪ್ರತ್ಯೇಕಗೊಳ್ಳುವ, ಜೀವಶಕ್ತಿ ತುಂಬಿಸಿಕೊಳ್ಳ ಬಯಸುವ ಘಟ್ಟದವರೆಗೆ ಹರಡಿಕೊಂಡಿದೆ. ಈ ಕಾದಂಬರಿ ; ವೈದಿಕ ವರ್ಗದ ಅರ್ಥಹೀನ ಆಚರಣೆ ಆಲೋಚನೆಗಳನ್ನು ಪ್ರಶ್ನಿಸುವ ದಾಟಿಯಿರುವುದರಿಂದ ಆ ಮಟ್ಟಿಗೆ ಪ್ರಗತಿಪರ ಧೋರಣೆಯ ಕೃತಿಯೆಂದು ಹೇಳಬಹು ದಾದರೂ ಇದೇ ಕಥಾವಸ್ತುವಿನಲ್ಲಿ ಬೇರೆ ಮುಖಗಳನ್ನೂ ಸಂಧಿಸುವ ಸಾಧ್ಯತೆಯಿದ್ದು ಆಶಯದಲ್ಲೆ ಮಿತಿ ತಂದುಕೊಂಡಿದೆಯೆಂಬ ಅಂಶವೂ ಮುಖ್ಯ. ಅನಂತಮೂರ್ತಿಯವರ 'ಭಾರತೀಪುರ'ದಲ್ಲಿ 'ಬೆಟ್ಟಅಗೆದು ಇಲಿ ತೆಗೆಯುವ' ಕ್ರಾಂತಿಕಾರೀ ನಾಯಕನಿದ್ದಾನೆ. ಶೋಷಣೆಯ ತೆಕ್ಕೆಗೆ ಎಂದೂ ಸಿಕ್ಕಿರದ, ದುರ್ಬಲ ಮನಸ್ಸಿನ ನಾಯಕ ವ್ಯವಸ್ಥೆಯ ಸಂಕೇತವಾದ ದೇವಾಲಯದ ಪ್ರವೇಶವನ್ನು 'ಕ್ರಾಂತಿ' ಯ ಮೂಲಭೂತ ಧೋರಣೆ ಯೆಂಬಂತೆ ಭಾವಿಸಿ ಕ್ರಿಯೆಗಿಳಿಯುವ ಆಭಾಸ, ಅಂತರ್ಮುಖತೆಯ ಗೀಳು,- ಇತ್ಯಾದಿ ಸೇರಿ ಕ್ರಾಂತಿಯೂ ಇಲ್ಲಿ ಒಂದು ಮೋಜಿನ ಮಜಲಾಗಿರಬಹುದೆ ಎಂಬ ಗುಮಾನಿ ಬರುವುದುಂಟು. ಈ ಕಾದಂಬರಿ, ಶೋಷಿತರ ಬದುಕಿನ ಸ್ತರಗಳನ್ನು ಚಿತ್ರಿಸುವ, ಅವರ ದನಿಯಾಗುವ ಸಾಧ್ಯತೆಯನ್ನು ದಕ್ಕಿಸಿಕೊಳ್ಳುವ ವಸ್ತುವನ್ನು ಪಡೆದಿದ್ದರೂ, ಜಗನ್ನಾಥನ ಕ್ರಾಂತಿ ಕಲ್ಪನೆಯ ಕತೆಯಾಗಿದೆ. ಕುವೆಂಪು, ಕಾರಂತ, ರಾವಬಹದ್ದೂರ್ ಮಾಸ್ತಿ ಇಂಥವರಲ್ಲಿ ಬದುಕಿನದಟ್ಟ ಅನುಭವದ ದಾಖಲೆಗಳಾದರೂ ಸಿಗುತ್ತವೆ. ಅನಂತಮೂರ್ತಿ ಯವರ ಕಾದಂಬರಿಗಳು ಈ ದೃಷ್ಟಿಯಿಂದ ತೆಳ್ಳಗಿವೆ ; ಆದರೆ ಆರಿಸಿಕೊಂಡಿರುವ ವಸ್ತು ಅತ್ಯಂತ ಸಮಕಾಲೀನ ಎಂಬುದು ಸಮಾಧಾನದ ಅಂಶ.

ಹಾಗೆ ನೋಡಿದರೆ ದೇವನೂರು ಮಹದೇವರ ಕೆಲವು ಕತೆಗಳು (ದ್ಯಾವನೂರು- ಸಂಕಲನ) ಶೋಷಣೆಯ ಸ್ತರಗಳನ್ನು ತನ್ನೆಲ್ಲ ತೀವ್ರತೆಯೊಂದಿಗೆ ಹಿಡಿದಿಟ್ಟಿವೆ. ಅಮಾಸ, ಡಾಂಬರು ಬಂದುದು-ಇಂಥ ಕತೆಗಳ ಜೊತೆಗೆ [ಒಂದೆರಡು ಸಾಮಾನ್ಯ ಕತೆಗಳೂ ಇವೆ.] ಒಡಲಲ್ಲಿ ಬಿಚ್ಚಿಕೊಳುವ ಸಹಜ ವಿವರಗಳು ಅರ್ಥಶಕ್ತಿಯನ್ನು ತುಂಬಿಕೊಂಡು ಉತ್ತಮ ವೆನಿಸಿವೆ ; ಕೆಳವರ್ಗದ ದನಿಯಾಗುವ ಸಾಮರ್ಥ್ಯ ಪಡೆದಿವೆ. ಇತಿಹಾಸದುದ್ದಕ್ಕೂ ತುಳಿಸಿಕೊಂಡ ಜನಾಂಗದಿಂದ ಜೀವಂತ ಕಲೆಗಾರಿಕೆಯಿಂದ ಬರೆಯುವ ಮಹದೇವ ಬಂದಿ ದ್ದಾರೆಂಬುದುಗಮನೀಯ ಸಾಂಸ್ಕೃತಿಕ ಘಟನೆ. ಈ ಸಂದರ್ಭದಲ್ಲಿ 'ಹೊಲೆಮಾದಿಗರ ಹಾಡು' (ಸಿದ್ದಲಿಂಗಯ್ಯ)ವನ್ನು ಜ್ಞಾಪಿಸಿಕೊಳ್ಳಬಹುದು.

ತೇಜಸ್ವಿಯವರು ಬರೆದ ಕೆಲವು ಕತೆಗಳು ಸಾಮಾಜಿಕ ಆಯಾಮ ಪಡೆದಿವೆ. ಉದಾ : ಕುಬಿ ಮತ್ತು ಇಯಾಲ, ತಬರನ ಕತೆ. ಆಳುವ ವರ್ಗದ ಬೌದ್ಧಿಕ ಬಲವಾದ ಅಧಿಕಾರ ಶಾಹಿ ನಿರ್ಮಿಸಿದ ವಿಷವೃತ್ತದೊಳಗೆ ಸಿಕ್ಕಿ ಹುಚ್ಚು ಹಿಡಿಯುವ ತಬರನ ಕತೆ ವ್ಯವಸ್ಥೆಯ

ಸೂತ್ರಗಳನ್ನು ದಾರುಣ ವ್ಯಂಗ್ಯದಿಂದ ನೋಡುವ ದೃಷ್ಟಿ ತಾಳಿ, ನೇರ ನಿರೂಪಣೆಯ ಸತ್ವಶಾಲಿ ಕೃತಿಯಾಗಿದೆ; ಮೂಢನಂಬಿಕೆಯ ಹಿನ್ನೆಲೆಯಲ್ಲಿ ಬರೆದದ್ದು 'ಕುಬಿ ಮತ್ತು ಇಯಾಲ.'

ಇವೆಲ್ಲ ಬೇರೆ ಬೇರೆ ಸ್ತರದಲ್ಲಿ ಸಾಮಾಜಿಕ ಮೂಲವುಳ್ಳ ಕೆಲವು ನಿದರ್ಶನಗಳು.

ಇನ್ನು ಮಹಿಳಾ ಲೇಖಕಿಯರನ್ನು ಕುರಿತು ಒಂದೆರಡು ಮಾತು: ಮಹಿಳಾ ಲೇಖಕಿಯರು ಸ್ವಾಭಾವಿಕವಾಗಿ ಮಧ್ಯಮವರ್ಗದವರೇ ಆಗಿದ್ದಾರೆ. ಯಾವ ವರ್ಗದ ಪಾತ್ರವೇ ಆಗಿರಲಿ ಅಂತಹ ವಿಶೇಷ ವ್ಯತ್ಯಾಸವೇನೂ ಇಲ್ಲದ ಪಡಿಯಚ್ಚು ಇರುತ್ತದೆ. ಈ ಮಾತು ಕೆಲವು ಲೇಖಕರ ವಿಷಯದಲ್ಲೂ ನಿಜ; ಹಳ್ಳಿಯ ರೈತಮಹಿಳೆಯಾಗಲಿ, ಪಟ್ಟಣದ ಉದ್ಯೋಗಿಯಾಗಲಿ ಅಂಥ ಮೂಲಭೂತ ವ್ಯತ್ಯಾಸವೇನೂ ಕಾಣದಂತೆ ಚಿತ್ರಿಸಿದ್ದಾರೆ. [ಉಡುಪಿಯಲ್ಲಿ ಬದಲಾವಣೆ ಇರುವ ಚಿತ್ರಣ ಸಿಕ್ಕಬಹುದಷ್ಟೆ] 'ತ್ರಿವೇಣಿ' ಮಹಿಳೆಯ ಅಂತರಂಗದಲ್ಲಿ ನಿಂತು ನವಿರಾಗಿ ಮಾತಾಡುವ ಪ್ರತಿಭೆ ಪಡೆದಿದ್ದ ಲೇಖಕಿ. ಕಳಪೆ ಕೃತಿಗಳನ್ನು ರಚಿಸಿದ್ದರೂ, ಅವರ ಜನಪ್ರಿಯ ಕೃತಿಗಳು ಈ ಕಾರಣಕ್ಕಾಗಿ ಜನಮನಕ್ಕೆ ತಟ್ಟಿವೆ. 'ಬೆಕ್ಕಿನ ಕಣ್ಣು'ವಿನ ಬಾಲಕಿ ಚಿಕ್ಕಪ್ಪನ ದೌರ್ಜನ್ಯಕ್ಕೆ ಸಿಕ್ಕಿದರೆ 'ಬೆಳ್ಳಿಮೋಡ'ದ ನಾಯಕಿ ಗಂಡಸಿನ ವಂಚನೆಗೆ ಸಿಕ್ಕುತ್ತಾಳೆ. ತ್ರಿವೇಣಿಯವರ ಕೃತಿಗಳಲ್ಲಿ ಹೆಣ್ಣಿನ ದುಃಸ್ಥಿತಿಗೆ ಸಮಾಜ, ಮುಖ್ಯವಾಗಿ ಗಂಡಸರು ಕಾರಣವೆಂಬ ಧೋರಣೆ ಕಂಡುಬರುತ್ತದೆ. ಹೆಣ್ಣಿನ ಶೋಷಣೆಯ ಒಂದು ಮುಖವನ್ನು ಮಾತ್ರ ಗಮನಿಸುವ ಈ ಧೋರಣೆ ಸಾಮಾಜಿಕ ವ್ಯಾಪ್ತಿಯಲ್ಲಿ ಹೆಣ್ಣಿನ ಸಮಸ್ಯೆಯನ್ನು ವಿಶ್ಲೇಷಿಸುವುದಿಲ್ಲ. ಈ ಮಾತನ್ನು ತ್ರಿವೇಣಿ. ಎಂ. ಕೆ. ಇಂದಿರಾವರಾದಿಯಾಗಿ ಮಹಿಳಾ ಲೇಖಕಿಯರಿಗೆ ಅನ್ವಯಿಸಬಹುದು; ನಮ್ಮ ಸಾಹಿತ್ಯ ಸಂದರ್ಭದಲ್ಲಿ ಕಾಣಿಸಿಕೊಂಡ ವೀಣಾ ಎಲಬುರ್ಗಿ ವಸ್ತುವನ್ನು ಬಿಗಿಬಂಧದಲ್ಲಿಡುವ ಪ್ರಯತ್ನ ಮಾಡಿದರೆ, ಉಳಿದ ಲೇಖಕಿಯರನೇಕರು ವಸ್ತುವಿನಂತೆ ಬಂಧದಲ್ಲೂ ಬಡವಾದರು. [ವೀಣಾರವರಿಗೆ ನವ್ಯರನ್ನು ಕುರಿತು ಹೇಳಿದ ಮಾತುಗಳನ್ನೇ ಹೆಚ್ಚುಕಮ್ಮಿ ಅನ್ವಯಿಸಬಹುದು]. ಸಹಾನುಭೂತಿ ಗಿಟ್ಟಿಸುವ ವಿವರಗಳಿಂದ ಪುಟ ತುಂಬಿಸಿದ ಲೇಖಕಿಯರು ಹೆಚ್ಚು. ಕರವಸ್ತ್ರ ತೋಯಿಸುವ 'ತಂತ್ರ', ಘಟನೆಗಳ ಸರಪಳಿ, ಕಸುವಿಲ್ಲದ ಭಾಷೆ—ಇವು ಸಾಮಾನ್ಯವಾಗಿ ಲೇಖಕಿಯರ ಕೃತಿಗಳಲ್ಲಿ ಎದ್ದು ಕಾಣುವ ಅಂಶಗಳು. ಮಧ್ಯಮವರ್ಗದ ಮಹಿಳೆಯ ಆಸೆ ಆಕಾಂಕ್ಷೆಗಳು ಯಾವ ಸ್ತ್ರೀಪಾತ್ರದ ಮೇಲಾದರೂ ಆರೋಪಿಸಲ್ಪಡುತ್ತವೆಯೆನ್ನಬಹುದು.

ಲೇಖಕಿಯರ ಕೃತಿಗಳು ಸಾಮಾನ್ಯವಾಗಿ ಪೇಲವವಾಗಿರುವುದಕ್ಕೆ ಸಾಮಾಜಿಕ ಇತಿಹಾಸವೂ ಕಾರಣ. ಕುಟುಂಬದಲ್ಲಿ ಉತ್ಪಾದನಾ ಸಾಧನಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡ ಪುರುಷ, ಸ್ತ್ರೀಯನ್ನು ಅಡುಗೆಮನೆ ಸೇರಿಸಿದಂದಿನಿಂದ ಶೋಷಣೆಯಲ್ಲಿ ಬದುಕಿಬಂದಿದ್ದಾಳೆ; ಸಂಸ್ಕೃತಿಯ ಹೆಸರಿನಲ್ಲಿ ವಂಚನೆಗೀಡಾಗಿದ್ದಾಳೆ. ಭಾರತದಲ್ಲಿ ಹೊಸ ಮಧ್ಯಮವರ್ಗದ ಉದಯದೊಂದಿಗೆ ಚಿಗುರಿದ ಸುಧಾರಣಾಶೀಲತೆಯ ಫಲವಾಗಿ ಮಹಿಳೆಯರು ಶಾಲೆ, ಕಾಲೇಜು ಮೆಟ್ಟಲು ಹತ್ತುವಂತಾಗಿ ಕೆಲವು ವರ್ಷ

ಗಳಿಂದ ಸಾಹಿತ್ಯ ರಚನೆಯಲ್ಲಿ ಪಾಲ್ಗೊಂಡಿದ್ದಾರೆ. ಈ ಇತಿಹಾಸದ ಹಿನ್ನೆಲೆ, ಅನುಭವದ ಮಿತಿ, ಅಧ್ಯಯನದ ಅಭಾವ–ಮುಂತಾದ ಅಂಶಗಳು ಸ್ವಜನಶೀಲತೆಯ ಸೋಲವತೆಗೆ ಕಾರಣಗಳಾಗಿವೆ. ಆದರೆ ಇವತ್ತೂ ಇದೇ ಸ್ಥಿತಿ ಮುಂದುವರಿಯಬೇಕಾದ ಅತ್ಯಂತ ಅನಿವಾರ್ಯ ಸ್ಥಿತಿಯೇನೂ ಇಲ್ಲ. ಕೇವಲ ಗಂಡಸರ ಮೇಲೆ ಅನ್ಯಾಯದ ಭಾರ ಹಾಕುವ 'ಗಂಡಸರು' [ಲೇ : ವೀಣಾ]ವಿನಂತಹ ಕೃತಿಗಳಿಗಿಂತ ಭಿನ್ನವಾದ, ಆಳವಾದ, ಹೆಣ್ಣಿನ ಬೇರೆ ಬೇರೆ ಸಾಮಾಜಿಕ ಮೂಲಗಳನ್ನು ಗುರುತಿಸುವ ಕೃತಿಗಳು ಬರಬೇಕಾಗಿದೆ; ಅನುಭವ ಸಾಮಗ್ರಿಯನ್ನು ವೈಚಾರಿಕ ನಿಕಷಕ್ಕಿಟ್ಟು ಮಹಿಳೆಯ ಸ್ಥಿತಿ, ಸಮಸ್ಯೆಗಳ ಬೇರುಗಳನ್ನು ಸಾಮಾಜಿಕ ಸಾಂಸ್ಕೃತಿಕ ನೆಲೆಯಲ್ಲಿ ಹುಡುಕುವ ಪ್ರಯತ್ನ ಈ ಸಂದರ್ಭ ದಲ್ಲಿ ಅರ್ಥಪೂರ್ಣವಾಗಬಹುದು.

ಇನ್ನು ಇತ್ತೀಚಿನ ಎರಡು ಮಹತ್ವದ ಘಟನೆಗಳಿಗೆ ಸಂಬಂಧಿಸಿದಂತೆ ಒಂದೆರಡು ಮಾತುಗಳನ್ನು ಹೇಳಿ ಲೇಖನವನ್ನು ಮುಗಿಸಬಹುದು. ಈ ಎರಡು ಘಟನೆಗಳೆಂದರೆ ಬರಹಗಾರರ ಒಕ್ಕೂಟ ಮತ್ತು ಪ್ರಗತಿಪಂಥದ ಉದಯ. ಒಕ್ಕೂಟದ ಧೋರಣೆ–ಈಗ ವ್ಯಕ್ತವಾಗಿರುವಂತೆ–ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಆರ್ಥಿಕ ಸತ್ಯವನ್ನು ಮನಗಾಣ ಲಿಚ್ಛಿಸದೆ ವಾಸ್ತವಸ್ಥಿತಿಯನ್ನು ಆಮಟ್ಟಿಗೆ ಮರೆಮಾಚಿದೆ. ಪ್ರಗತಿಪಂಥ ಅಮೂರ್ತಮಾತು ಗಳಲ್ಲಿ ದನಿಮಾಡಬಯಸಿ ಧೋರಣೆಯ ಖಚಿತತೆ ತೋರಿಸಿಲ್ಲ. ಒಕ್ಕೂಟ ಕಡೇ ಪಕ್ಷ ಸ್ಪಷ್ಟವಾಗಿತ್ತು ; ಇದು ಅಸ್ಪಷ್ಟವಾಗಿದೆ.

ಇಂದು ಸಮಾಜದ ಹುಟ್ಟು, ವಿಕಾಸವನ್ನು ಆದರ ಸಾಂಸ್ಕೃತಿಕ ಆರ್ಥಿಕ ವ್ಯಾಪ್ತಿಯಲ್ಲಿ ವೈಜ್ಞಾನಿಕವಾಗಿ ಅರ್ಥೈಸಿಕೊಳ್ಳಲು ಪ್ರಾಮಾಣಿಕ ಪ್ರಯತ್ನ ನಡೆಸುವ ಹೊಸ ಪೀಳಿಗೆಯ ಜನ ಕಾಣಿಸುತ್ತಿರುವುದು ಆಶಾದಾಯಕವಾಗಿದೆ. ಕಷ್ಟಸಾಧ್ಯವಾದರೂ ಹಿಂದಿನವರ ವೈರುಧ್ಯಸ್ಥಿತಿಗಳನ್ನು ದಾಟುವ, ಸಂದಿಗ್ಧತೆಯಿಂದ ಪಾರಾಗುವ ಪ್ರಯತ್ನಗಳು ನಡೆದಂತೆ, ನಮ್ಮ ಸಾಹಿತ್ಯವೂ ಕಾಲದ ಅಗತ್ಯವನ್ನರಿತು ರಚಿತಗೊಳ್ಳುವ ಸಾಮಾಜಿಕ ಸಾಧ್ಯತೆ ಗಳಿವೆ. ಈ ದಿಕ್ಕಿನಲ್ಲಿ ಪ್ರಯತ್ನಗಳು ನಡೆಯುತ್ತಿವೆ. ಇದು ಹೊಸ ಆಸೆ ಹುಟ್ಟಿಸುವ ವಿಷಯ. ಸಾಮಾಜಿಕ ಕಳಕಳಿ, ಬದ್ಧತೆಗಳ ಹಿನ್ನೆಲೆಯಲ್ಲಿ ರಚಿತವಾಗುವ ಸಾಹಿತ್ಯ ಕೇವಲ ಮ್ಯಾನಿಫೆಸ್ಟೋ ಆಗದೆ ಬದುಕನ್ನೂ ಪ್ರೀತಿಸುವ ಬದ್ಧ ಕಲಾಕೃತಿಯಾಗಬೇಕು. ಈ ದಿಕ್ಕಿನಲ್ಲಿ ನಾವೆಲ್ಲ ಯೋಚಿಸುವುದು ಅಗತ್ಯ.

ಕಡೆಯದಾಗಿ ಒಂದೆರಡು ಮಾತು : ಆಧುನಿಕ ಕನ್ನಡ ಸಾಹಿತ್ಯದ ಸಮೀಕ್ಷೆ ನನ್ನ ಉದ್ದೇಶವಲ್ಲವಾದ್ದರಿಂದ ಎಲ್ಲ ಲೇಖಕರೂ ಇಲ್ಲಿ ಪ್ರಸ್ತಾಪಕ್ಕೆ ಬಂದಿಲ್ಲ. ಸಾಧ್ಯವಾದಷ್ಟೂ ಪ್ರಾತಿನಿಧಿಕ ಘಟ್ಟಗಳನ್ನು ನೋಡಲು ಯತ್ನಿಸಲಾಗಿದೆ. ಆದ್ದರಿಂದ ಆಯಾ ಘಟ್ಟದ ನೆಲೆ, ನಿಲುವು ಮುಖ್ಯ. ಲೇಖಕರ ಪಟ್ಟಿಯಲ್ಲ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿ ದಂತೆ ವಿಮರ್ಶೆಯ ಸೂತ್ರಗಳು (ಅಥವಾ ಮಾರ್ಗ) ಕನ್ನಡದ ಸಂದರ್ಭದಲ್ಲಿ ಸ್ಪಷ್ಟರೂಪ ತಾಳಿಲ್ಲವೆಂಬುದನ್ನು ಓದುಗರು ದಯವಿಟ್ಟು ಗಮನಿಸಬೇಕು. ಆದರೆ ಅಷ್ಟೊಂದೇ ಕಾರಣ ದಿಂದ ಎಲ್ಲ ರಿಯಾಯಿತಿಗಳನ್ನು ಖಂಡಿತ ಬಯಸುವುದಿಲ್ಲ.

---

ಕೆ. ಕುಟುಂಬರಾವ್

# ತೆಲುಗು ಸಾಹಿತ್ಯದಲ್ಲಿ ವರ್ಗದೃಷ್ಟಿ

ಯಾವ ಕಾಲದ ಸಾಹಿತ್ಯವನ್ನೇ ಆಗಲಿ ವರ್ಗದೃಷ್ಟಿಯಿಂದ ಪ್ರತ್ಯೇಕಿಸುವುದು ಸಾಧ್ಯವಿಲ್ಲ. ನಿಜಕ್ಕೂ ವರ್ಗವನ್ನು—ಅದರ ಶಕ್ತಿಗಳನ್ನು ಸಮೀಕರಿಸುವುದೇ ಸಾಹಿತ್ಯದ ಮುಖ್ಯ ಆಶಯ ಎಂದೇ ನನ್ನ ನಂಬಿಕೆ. ಕೇವಲ ಸಾಹಿತ್ಯವೊಂದೇ ಅಲ್ಲ, ಎಲ್ಲ ಕಲೆಗಳೂ ಸಹ ಒಂದೊಂದು ವರ್ಗದ ವ್ಯಕ್ತಿಗಳ ಮಧ್ಯೆ ಸಂಘಜೀವನದ ಭಾವನೆಯನ್ನು ವೃದ್ಧಿಗೊಳಿಸುತ್ತವೆ. (ಕರ್ನಾಟಕ ಸಂಗೀತ, ಉತ್ತರಾದಿ ಸಂಗೀತ, ವೈರೂಪ್ಯ ಚಿತ್ರಕಲೆ, ಸಿನಿಮಾ ಸಂಗೀತ, ನಾಟ್ಯಕಲೆ, ನಾಟಕಕಲೆ)—ಇವೆಲ್ಲ ಸಮಾಜದಲ್ಲಿ ಚೆಲ್ಲಾಪಿಲ್ಲಿಯಾಗಿರುವ ವ್ಯಕ್ತಿಗಳನ್ನು ಒಗ್ಗೂಡಿಸಿ, ಅವರ ಮಧ್ಯೆ ಒಂದು ತೆರನ ಸಾಂಘಿಕ ಭಾವನೆಯನ್ನು ವೃದ್ಧಿಗೊಳಿಸುತ್ತವೆ. ಆದರೆ ಇವುಗಳು—ಮಾರ್ಕ್ಸಿಸ್ಟ್ ದೃಷ್ಟಿಯಲ್ಲಿ ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ ವರ್ಗಗಳಲ್ಲ. ಆ ಕಾರಣದಿಂದಾಗಿ ಆ ವರ್ಗಗಳು ಪ್ರದರ್ಶಿಸುವ ಚೈತನ್ಯವು ಸಮಾಜದ ಪುರೋಭಿವೃದ್ಧಿಗೆ ಯಾವ ರೂಪದಲ್ಲೂ ಸಹಾಯಕಾರಿಯಾಗುವುದಿಲ್ಲ. ಇದಕ್ಕೆ ಅತ್ಯುತ್ತಮ ಉದಾಹರಣೆ ಎಂದರೆ—ಊರೂರಿನಲ್ಲೂ ತಲೆ ಎತ್ತಿರುವ ಸಿನಿಮಾ ನಟರ ಅಭಿಮಾನ ಸಂಘಗಳು !

ನಮ್ಮ ಜನ ಇಂದು ಪ್ರಾಚೀನವಾದುದು ಎಂದುಕೊಳ್ಳುವ ಸಾಹಿತ್ಯ ಸಾಧಾರಣವಾಗಿ ಬ್ರಾಹ್ಮಣ ಸಾಹಿತ್ಯ. ಆ ಸಾಹಿತ್ಯ ಬ್ರಾಹ್ಮಣ ವರ್ಗವನ್ನು ಬಲಿಷ್ಠಗೊಳಿಸುವಂಥದೂ, ಆ ಬ್ರಾಹ್ಮಣ ವರ್ಗಕ್ಕೆ ಆಶ್ರಯದಾತನಂತಿದ್ದ ಆಳುವ ವರ್ಗಕ್ಕೆ ಉಪಕರಿಸುವಂಥದೂ ಆಗಿದೆಯಷ್ಟೆ. ಆ ಪುರಾಣ ಸಾಹಿತ್ಯವನ್ನು ಇನ್ನಿತರ ವರ್ಗದವರು ತಮ್ಮ ಸಾಹಿತ್ಯವೆಂದೇ ಪರಿಭಾವಿಸಿದಷ್ಟು ಕಾಲವೂ—ಸಮಾಜದಲ್ಲಿ ನಡೆಯುವ ಮಾರ್ಪಾಟುಗಳಿಗೆ ಸಾಹಿತ್ಯ ಮಾಡುವ ಕೆಲಸ ಇರುವ ಅವಕಾಶವಿಲ್ಲ.

ಆದರೆ ರಾಜರುಗಳು ಬಲಿಷ್ಠರಾಗಿ, ಬ್ರಾಹ್ಮಣರು ಪ್ರಚಾರ ಮಾಡುತ್ತಿದ್ದ ಧರ್ಮಗಳ ಅಗತ್ಯ ಅವರಿಗೆ ಇಲ್ಲದಾದ ಮೇಲೆಯೇ ತೆಲುಗಿನಲ್ಲಿ "ಪ್ರಬಂಧಯುಗ" ಪ್ರಾರಂಭವಾಯಿತೆನ್ನಬಹುದು. ಇದು ರಾಜರುಗಳ ಕೀರ್ತಿ ಪ್ರಲಾಪಗಳಿಗೂ, ಅವರ ಶೃಂಗಾರಕ್ಕೂ ಕನ್ನಡಿ ಹಿಡಿದ ಸಾಹಿತ್ಯ. ಇದನ್ನೂ ಸಹ ಬಲುಮಟ್ಟಿಗೆ ಬ್ರಾಹ್ಮಣ ಕವಿಗಳೇ ರಚಿಸಿದ್ದಾರೆ.

ಆದರೆ ಆಳುವ ವರ್ಗಗಳು ವರ್ಣವ್ಯವಸ್ಥೆಯನ್ನು ಧಿಕ್ಕರಿಸಿದುವು. ಯಾವನು ರಾಜನಾಗುತ್ತಾನೋ ತಿಳಿಯದು. ಅವನು ಯಾವ ವರ್ಗದವನೋ ತಿಳಿಯದು. ಬ್ರಾಹ್ಮಣರು ಅವನನ್ನು ಚಂದ್ರವಂಶದ ಕ್ಷತ್ರಿಯನೆನ್ನುತ್ತಾರೋ, ಸೂರ್ಯವಂಶದ ಕ್ಷತ್ರಿಯನೆನ್ನುತ್ತಾರೋ, ಅವನಿಗೆ ಯಾವ ಗೋತ್ರವನ್ನು ತಗುಲಿಸುತ್ತಾರೋ ಹೇಳುವುದು ಅಸಾಧ್ಯ.

ಯವನರನ್ನು ಧರ್ಮಬಾಹಿರರಾದ ಕ್ಷತ್ರಿಯರೆಂದು ಆಮೋದಿಸಿದ ಬ್ರಾಹ್ಮಣರು ; ಶಿವಾಜಿಯನ್ನು ಕ್ಷತ್ರಿಯನನ್ನಾಗಿ ಮಾಡಿದರು. ನಂದರ ಕಾಲದಿಂದಲೂ ಭರತಖಂಡದಲ್ಲಿ ಕ್ಷತ್ರಿಯರು ಇಲ್ಲ ಎಂಬ ಮಾತನ್ನು ಹುಸಿಗೊಳಿಸಿದರು

ಆದ್ದರಿಂದ ಸಾಹಿತ್ಯ ಹಳೆಯ ಕಾಲದ ವರ್ಣಧರ್ಮಗಳ ಪ್ರಸಕ್ತಿಯನ್ನು ತೊರೆದು ಭಕ್ತಿಯತ್ತ ತಿರುಗಿತು. ಭಕ್ತಿತತ್ತ್ವದಲ್ಲಿ ವರ್ಣ ವಿವಕ್ಷೆಗಳಿಲ್ಲ. ದೇವರ ಬಗ್ಗೆ ಇಂಥ ಭಕ್ತಿ ತೋರಿಸು ; ಪ್ರಭುವಿನ ಬಗ್ಗೆ ಅಂಥ ಭಕ್ತಿ ತೋರಿಸು ; ದೈವಾಂಶವಿಲ್ಲದೇ ರಾಜನಾಗಲಾರ....ಈ ಭಕ್ತಿ ಸಾಹಿತ್ಯವನ್ನು ಹಲವರು ವಿಪ್ಲವ ಸಾಹಿತ್ಯ ಕ್ರಾಂತಿ ಸಾಹಿತ್ಯ ಎಂದರು. ಇದು ಯಾವ ವರ್ಗದವರು ಸಾಧಿಸಿದ ವಿಪ್ಲವವೋ ಯಾರೂ ಸ್ಪಷ್ಟವಾಗಿ ಹೇಳುತ್ತಿಲ್ಲ. ತೆಲುಗಿನಲ್ಲಿ ಈ ವರ್ಗಕ್ಕೆ ಸೇರಿದ ಸಾಹಿತ್ಯ—ಶತಕ ಸಾಹಿತ್ಯ. ಇದರಲ್ಲಿ ಒಂದಿಷ್ಟು ತಿರುಗಿಬೀಳುವ ಮನಸ್ಸತ್ತ್ವವಿಲ್ಲವೇ ಇಲ್ಲ. ಆದರೆ ಆ ತಿರುಗಿಬೀಳುವ ಮನಸ್ಸತ್ತ್ವವನ್ನು ಆ ಕಾಲದ ಸಾಮಾಜಿಕ ವ್ಯವಸ್ಥೆ ಸ್ವೀಕರಿಸಲು ಸಿದ್ಧವಾಗಿಯೇ ಇತ್ತು. ಅದು ಸಮಾಜವನ್ನು ನಡೆಸಿತೇ ಎಂದು ಹೇಳುವಂತಿಲ್ಲ; ಸಮಾಜವೇ ಅದನ್ನು ಪ್ರೇರೇಪಿಸಿರಲೂ ಬಹುದು.

ಭಕ್ತಿಯಿಂದ ಶೈವ ವೈಷ್ಣವ ಅಂಥ ಮತಗಳು ಹುಟ್ಟಿಕೊಂಡವು. ಒಂದೊಮ್ಮೆ ಬ್ರಾಹ್ಮಣ ಮತವನ್ನು ಆದರಿಸಿದ ಹಾಗೆಯೇ ರಾಜರುಗಳು ಈ ಮತಗಳನ್ನು ಕೂಡ ತಮ್ಮ ಸೌಕರ್ಯ ಸೌಲಭ್ಯಗಳಿಗನುಗುಣವಾಗಿ ಆದರಿಸಿದರು. ಪ್ರಜಾದೃಷ್ಟಿಯಿಂದ—ಪುರಾಣಗಳಿಗಿಂತಲೂ, ಪ್ರಬಂಧಗಳಿಗಿಂತಲೂ—ಶತಕ ವಾಙ್ಮಯ ತುಂಬಾ ಆದರಣೀಯವಾಯಿತು. ಅದರಲ್ಲಿ ಲೌಕಿಕ ದೃಷ್ಟಿ ಇದೆ. ಅದು ನಿತ್ಯಜೀವನಕ್ಕೆ ಸನ್ನಿಹಿತವಾದುದು. ಪಂಡಿತರಿಗೆಂದೇ ಅಲ್ಲದೆ ಪಾಮರರಿಗೂ ಅರ್ಥವಾಗುತ್ತದೆ. ಭಾಷೆಗೆ ಸಂಬಂಧಿಸಿದ ಕಸರತ್ತುಗಳು ಅದರಲ್ಲಿಲ್ಲ. ವೇಮನನಂಥವನ ಪದ್ಯಗಳು ಅಂತ್ಯಜನಿಗೂ ಸಹ ತನಗಾಗಿಯೇ ರಚಿಸಲ್ಪಟ್ಟಿದೆ ಎಂದೆನಿಸಿದ್ದರೆ ಆಶ್ಚರ್ಯವೇನೂ ಇಲ್ಲ.

ಆದರೆ ದೇಶದಲ್ಲಿ ಮುಸಲ್ಮಾನ ಆಳ್ವಿಕೆಯ ಪ್ರಭಾವ ಹೆಚ್ಚಿದ ಮೇಲೆ ದೇಶೀಯ ಭಾಷೆಗಳಲ್ಲಿ ಸಾಹಿತ್ಯದ ಸಾಮಾಜಿಕ ಪ್ರಯೋಜನ ಕ್ರಮವಾಗಿ ಕ್ಷೀಣದೆಸೆಗೆ ತಲುಪಿತು. ಅದು—ಯಾರು ಯಾರು ಆದರಿಸಿದರೆ ಅವರನ್ನು ಆಶ್ರಯಿಸಿ, ಅವರನ್ನು ತೃಪ್ತಿಪಡಿಸುವ ಸ್ಥಿತಿಗೆ ಇಳಿಯಿತು. ಮಂತ್ರಿಗಳೂ ಶ್ರೇಷ್ಠರೂ ಗ್ರಂಥಗಳನ್ನು ಅಂಕಿತಗೊಳಿಸಿಕೊಂಡರು ಹೀಗಾಗಿ ಹಳೇಕಾಲದ ಮತೀಯ ಸಾಹಿತ್ಯಕ್ಕೆ ಮತ್ತೆ ಗಿರಾಕಿ ಹೆಚ್ಚಿತು. ಮಹಾಭಾರತ, ಭಾಗವತಗಳು ಜನಸಾಮಾನ್ಯರಲ್ಲಿ ಹೆಚ್ಚು ಪ್ರಚುರಗೊಂಡವು. ಅವುಗಳಿಗೆ ಆ ಮೊದಲು ಇರದ ಪವಿತ್ರತೆ ಹೊಸತಾಗಿ ಹಬ್ಬಿಕೊಂಡಿತು. ಅಧಿಕ ಸಂಖ್ಯಾತರಾದ ಪಾಮರರು ಪುರಾಣಶ್ರವಣದ ಮೂಲಕ ಸಾಹಿತ್ಯಾಭಿಮಾನವನ್ನು ಬೆಳಸಿಕೊಳ್ಳಲಿಲ್ಲ ; ಆದರೆ ಪುಣ್ಯ ಸಂಪಾದಿಸಿಕೊಳ್ಳುತ್ತಿದ್ದೇವೆ ಎಂದು ತೃಪ್ತಿಪಡತೊಡಗಿದರು. ಆ ಪುರಾಣಗಳಲ್ಲಿನ ವ್ಯಕ್ತಿಗಳಾಗಲೀ, ಜೀವನವಾಗಲೀ, ಧರ್ಮಗಳಾಗಲೀ ತಮ್ಮನ್ನು ಯಾವ ವಿಧದಲ್ಲೂ ಸೋಂಕವು. ಅದೇ ಅವುಗಳ ಪವಿತ್ರತೆ !

ಸಾಮಾಜಿಕ ಪ್ರಯೋಜನವನ್ನು ಕಳೆದುಕೊಂಡ ಸಾಹಿತ್ಯ ಎರಡು ಕಾರಣಗಳಿಗಾಗಿ ಉಳಿದುಕೊಂಡಿರುತ್ತದೆ. ಅದು ಪವಿತ್ರ ಗ್ರಂಥ ಎಂದಾದರೂ ಕರೆಯಿಸಿಕೊಳ್ಳುತ್ತಿರಬೇಕು; ಕಲಾಕೃತಿ ಎಂತಲಾದರೂ ಕರೆಯಿಸಿಕೊಳ್ಳುತ್ತಿರಬೇಕು. ತೆಲುಗಿನ ಕವಿತ್ರಯರು ರಚಿಸಿದ 'ಮಹಾಭಾರತ' ಈ ಎರಡೂ ರೀತಿಯ ಪ್ರಶಸ್ತಿಗಳನ್ನು ಸಂಪಾದಿಸಿಕೊಂಡು ಇಂದಿಗೂ ಉದ್ಗ್ರಂಥವಾಗಿ ನಿಂತುಕೊಂಡಿದೆ. ಇಂದಿಗೂ ರಾಯಲಸೀಮ ಗ್ರಾಮಾಂತರಗಳಲ್ಲಿ ಸಾಮಾನ್ಯ ಜನರು ಮಹಾಭಾರತದಿಂದ ತಮ್ಮ ಜೀವನಕ್ಕೆ ಅನುಕೂಲಿಸುವ ಪ್ರೇರಣೆಯನ್ನು ಪಡೆಯದೇ ಇದ್ದರೂ ತಮ್ಮ ಕಷ್ಟಗಳಲ್ಲಿ ತಮ್ಮ ಮನಸ್ಸುಗಳನ್ನು ಸಮಾಧಾನಪಡಿಸಿಕೊಳ್ಳಲಾದರೂ ಮಹಾಭಾರತದಲ್ಲಿನ ಉದಾಹರಣೆಗಳನ್ನು ಕೊಟ್ಟುಕೊಳ್ಳುತ್ತಾರೆ.

ಭಾರತೀಯರ ಲೌಕಿಕ ಸಾಹಿತ್ಯದ ಮೇಲೆ ಮುಸಲ್ಮಾನ ರಾಜರುಗಳ ಆಳ್ವಿಕೆಯ ಪ್ರಭಾವ ಅಷ್ಟಾಗಿ ಕಂಡುಬರುತ್ತಿಲ್ಲ. ಮಿಗಿಲಾಗಿ ಭಾರತೀಯರ ತಾತ್ವಿಕ ಭಾವಗಳ ಪ್ರಭಾವವೇ ಆ ಮುಸಲ್ಮಾನ ರಾಜರುಗಳ ಮೇಲೆ ಸ್ವಲ್ಪ ಮಟ್ಟಿಗೆ ಇರುವಂತೆ ಕಂಡುಬರುತ್ತದೆ. ಗ್ರೀಕರೂ, ಕುಷಾನರೂ, ಶಕರೂ, ಹೂಣರೂ, ರಜಪೂತರೂ, ಮೊಗಲರೂ— ಎಲ್ಲರೂ ಭಾರತೀಯತೆಯನ್ನು ಅಷ್ಟೋ ಇಷ್ಟೋ ಮೈಗೂಡಿಸಿಕೊಂಡವರೇ. ಆದರೆ ಭಾರತೀಯ ಸಾಹಿತ್ಯವನ್ನು ಅಧಿಕವಾಗಿ ಪ್ರಭಾವಿತಗೊಳಿಸಿದ್ದು ಪಾಶ್ಚಾತ್ಯ ಸಂಸ್ಕೃತಿ— ಸಾಹಿತ್ಯಗಳೆಂದೇ ಹೇಳಬೇಕು.

ಈ ಪ್ರಭಾವ ಅನೇಕ ಮಾರ್ಗಗಳಿಂದ ನಮ್ಮ ಸಾಂಸ್ಕೃತಿಕ ಭಾವಗಳಿಗೆ ಬೀಜಗಳನ್ನು ನಾಟಿತು. ಪ್ರಜಾತಂತ್ರ, ವ್ಯಕ್ತಿವಿಶಿಷ್ಟತೆ, ಮೂಢನಂಬಿಕೆಗಳ ಬಗ್ಗೆ ಜಿಗುಪ್ಸೆ, ಭೌತಿಕ ದೃಷ್ಟಿ, ಏಕೇಶ್ವರೋಪಾಸನೆ, ಸ್ತ್ರೀಯರ ಬಗ್ಗೆ ಗೌರವ—ಜೀವನದಲ್ಲಿ ಅಣುಅಣುವಿನಲ್ಲೂ ಸೇರಿಕೊಂಡ ನೀತಿ ಆಚಾರಗಳು—ಇವುಗಳನ್ನು ಕುರಿತು ಭಾರತೀಯ ಮೇಧಾವಿಗಳು ಆಲೋಚಿಸತೊಡಗಿದರು. ಬ್ರಹ್ಮಸಮಾಜ, ಥಿಯೋಸಫೀ ಸಮಾಜ ಸುಧಾರಣೆಗಳೂ, ಪ್ರೇಮಸೌಂದರ್ಯಗಳ ಆರಾಧನೆ, ಕೊನೆಗೆ ದೇಶಭಕ್ತಿ; ರಾಷ್ಟ್ರೀಯ ಭಾವಗಳೂ ಸಾಹಿತ್ಯವನ್ನು ಪ್ರಭಾವಿತಗೊಳಿಸತೊಡಗಿದುವು. ಈ ಶತಮಾನದ ಮೊದಲ ವರ್ಷಗಳ ಸಂಧಿಕಾಲದಲ್ಲಿ ತೆಲುಗು ಸಾಹಿತ್ಯದ ಮೇಲೆ ಇವೆಲ್ಲವುಗಳ ಪ್ರಭಾವ ನಿಚ್ಚಳವಾಗಿ ಕಂಡುಬರುತ್ತದೆ.

ಈ ದೆಸೆಯಲ್ಲಿ ಕಾವ್ಯವೂ ಕಥಾಸಾಹಿತ್ಯವೂ ಮಧ್ಯಮವರ್ಗದ ಅಧೀನಕ್ಕೊಳಗಾಯಿತು. ಸಂಪ್ರದಾಯ ಸಾಹಿತ್ಯ ಪ್ರಮಾಣಗಳು ಕ್ರಮ ಕ್ರಮವಾಗಿ ಹಿಂದುಳಿಯ ತೊಡಗಿದುವು. ಪಾಂಡಿತ್ಯ ತನ್ನ ಪ್ರಾಮುಖ್ಯವನ್ನು ಕಳೆದುಕೊಂಡಿತು. ಭಾಷೆಯ ವಿಷಯದಲ್ಲೂ ನೂತನ ದೃಷ್ಟಿ ತಲೆ ಎತ್ತಿತು. ಗಿಡುಗು ರಾಮಮೂರ್ತಿಯವರು ವ್ಯಾವಹಾರಿಕ ಭಾಷಾವಾದವನ್ನು ತರುಣಜನಾಂಗದಲ್ಲಿ ಪ್ರಚಾರಗೊಳಿಸಿದರು. ಗುರುಜಾಡ ಅಪ್ಪಾರಾವು ಅವರು ಭಾಷೆಯ ಜತೆಗೆ ಇತಿವೃತ್ತಗಳಲ್ಲೂ ಸಹ—ಸಾಹಿತ್ಯದಲ್ಲಿ ಯಾವತ್ತೂ ಕಂಡರಿಯದ 'ವಾಸ್ತವಿಕತೆ'ಯನ್ನು ಪ್ರವೇಶಗೊಳಿಸಿದರು. ವೀರೇಶಲಿಂಗಂ ಪಂತಲು

ಅವರು ತಮ್ಮ ಬರವಣಿಗೆಗಳನ್ನು ಕ್ರಮ ಕ್ರಮೇಣ—ಪ್ರಜಾಜೀವನವನ್ನು ಸಂಸ್ಕರಿಸುವುದಕ್ಕಾಗಿಯೇ, ಸುಧಾರಿಸುವುದಕ್ಕಾಗಿಯೇ ಮೀಸಲಿಟ್ಟರು.

ತೆಲುಗು ಸಾಹಿತ್ಯ ಪ್ರಪಂಚದಲ್ಲಿ "ನವಯುಗ ತ್ರಿಮೂರ್ತಿ"ಗಳು ಎಂದೆನ್ನಬಹುದಾದ ಈ ಮೂವರೂ ಆಧುನಿಕ ತೆಲುಗು ಸಾಹಿತ್ಯಕ್ಕೆ ಮೂಲಪುರುಷರೇ. ಆದರೆ ಇವರು 'ವರ್ಗ ಸಾಹಿತ್ಯ'ಕ್ಕೆ ಯಾವುದೇ ರೀತಿಯ ಉಪಯೋಗಕಾರಿಗಳಾಗಲಿಲ್ಲ. ಗುರುಜಾಡ, ವೀರೇಶಲಿಂಗಂ ಅವರು ಜೀವಿಸಿರುವಾಗಲೇ ಪ್ರಾರಂಭವಾದ ರಾಷ್ಟ್ರೀಯ ಚಳವಳಿಯಿಂದ ಬಹುತೇಕ ತೆಲುಗು ಸಾಹಿತ್ಯ ಸೃಷ್ಟಿಗೊಂಡಿತು. ಆದರೂ ಅದರಲ್ಲಿ ವರ್ಗಸಾಹಿತ್ಯಕ್ಕೆ ಎಂತಹ ಸ್ಥಾನವೂ ಇದ್ದಂತೆ ಕಂಡುಬರಲಿಲ್ಲ. ರಾಷ್ಟ್ರೀಯ ಚಳವಳಿಯಿಂದ "ಮಾಕೊದ್ದೀ ತೆಲ್ಲ ದೊರತನಮು" [ನಮಗೆ ಬೇಡೀ ಬಿಳಿಯ ದೊರೆತನ] ಎಂಬ ಗೀತೆ ಹುಟ್ಟಿಕೊಂಡು ರಾಜಕೀಯ ಸಮಾರಂಭಗಳಲ್ಲಿ ಮಹತ್ತರವಾದ ಸಂಚಲನೆಯನ್ನುಂಟುಮಾಡಲಾಗಿ, ಅದಕ್ಕೆ ವ್ಯತಿರೇಕವಾಗಿ ಹುಟ್ಟಿಕೊಂಡ—"ಮಾ ಕೊದ್ದೀನಲ್ಲ ದೊರತನಮು" [ನಮಗೆ ಬೇಡೀ ಕರಿಯ ದೊರೆತನ] ಎಂಬುದು ವರ್ಗಸಾಹಿತ್ಯವಾಗಿದ್ದೂ ಸಹ ರಾಷ್ಟ್ರೀಯ ಚಳವಳಿಗೆ ವಿರುದ್ಧವಾಗಿಯೂ, ಭಾರತೀಯರ ಪಾರತಂತ್ರ್ಯಕ್ಕೆ ಸಂಕೇತವಾಗಿಯೂ ಉಳಿದುಕೊಂಡು—ಕೇಳುಗರ ಮನಸ್ಸಿನಲ್ಲಿ ಅಸಹ್ಯವನ್ನುಂಟುಮಾಡಿತು.

ರಾಷ್ಟ್ರೀಯ ಚಳುವಳಿಕಾಲದಲ್ಲಿ ವರ್ಗ ವಿಭೇದಗಳಿಗಿಂತ—ಕುಲಮತಭೇದಗಳು ಮೇಧಾವಿಗಳನ್ನು ಅತಿಯಾಗಿ ಬಾಧಿಸತೊಡಗಿದುವು. ಇದಕ್ಕೆ ಬೇಕಾದ ಬುನಾದಿ-ಗಾಂಧೀಬೋಧನೆಗಳಲ್ಲಿ ಅವರಿಗೆ ಲಭ್ಯವಾಯಿತು. ಅಸ್ಪೃಶ್ಯತೆ, ಮತವೈಷಮ್ಯಗಳು ಕೇವಲ ಸಾಮಾಜಿಕ ಅವಲಕ್ಷಣಗಳಲ್ಲ; ಅವುಗಳಿಗೂ ಭಾರತೀಯರ ಪಾರತಂತ್ರ್ಯಕ್ಕೂ ನೇರ ಸಂಬಂಧವಿದೆ.

ರಾಷ್ಟ್ರೀಯ ಚಳುವಳಿ—ಮೇಧಾಮಿಗಳಲ್ಲಿ ಅತಿ ವಿಚಿತ್ರವಾದ ಒಡಕನ್ನುಂಟು ಮಾಡಿತು. ಅವು ವರ್ಗವೈರುಧ್ಯಗಳು ಮಾತ್ರವಲ್ಲ. ಆ ಕಾಲಕ್ಕಾಗಲೇ ಸಮಾಜ ಸುಧಾರಣೆಯಲ್ಲಿ ಮುಳುಗಿ ತೇಲುತ್ತಿದ್ದ ಮೇಧಾವಿಗಳು—ರಾಷ್ಟ್ರೀಯ ಚಳವಳಿಯ ಬಗ್ಗೆ ಅಸಹನೆಯನ್ನು ಪ್ರಕಟಿಸಲಾರಂಭಿಸಿದರು. ಅವರ ದೃಷ್ಟಿಯಲ್ಲಿ—ಭಾರತೀಯರು ಮೊದಲು ತಮ್ಮ ಮೂಢತ್ವವನ್ನು ತೊರೆದು, ಸಭ್ಯತೆಯನ್ನು ಕಲಿಯಬೇಕು. ಟೆರರಿಸ್ಟರು (Terrorist) ಹೇಗೆ ತಾನೆ ದೇಶಭಕ್ತರಾದಾರು ? ನಿನ್ನೆಯ ತನಕ ಸಮಾಜಕ್ಕೆ ಗೆದ್ದಲುಗಳಂತಿದ್ದವರು—ಸ್ವಾತಂತ್ರ್ಯದ ಹೆಸರಿನಲ್ಲಿ ಇಂದು ನಾಯಕರಾಗಿ ಕುಳಿತುಬಿಡುತ್ತಾರೆಯೇ ? ವೀರೇಶಲಿಂಗಂ ಅವರದು ಹೆಚ್ಚುಕಡಿಮೆ ಇದೇ ದೃಷ್ಟಿಕೋನವಾಗಿತ್ತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅವರಲ್ಲಿ ಆ ಕಾಲದಲ್ಲಿ ರಾಜಕೀಯ ದೃಷ್ಟಿ ಎಂಬುದು ಎಷ್ಟುಮಾತ್ರಕ್ಕೂ ಇರಲಿಲ್ಲ. ಅಷ್ಟೇ ಅಲ್ಲದೆ, ತಾವು ವರ್ಷಗಳಿಂದಲೂ ಕೃಷಿಮಾಡಿ ಒಂದು ರೂಪಕ್ಕೆ ತರುತ್ತಿದ್ದ 'ಸುಧಾರಣಾ ಚಳವಳಿ'—ಈ ರಾಜಕೀಯ ಬಿರುಗಾಳಿಯಲ್ಲಿ ಹೇಳಹೆಸರಿಲ್ಲದಂತಾಗುವ ಸ್ಥಿತಿ ತಲೆ ಎತ್ತಿತು.

ಇನ್ನು ಎರಡನೆಯ ರೀತಿಯ ಮನಸ್ಸತ್ವ 'ರಿನ್ಯೆವಲಿಸ್ಟ್'ರದು. ರಾಷ್ಟ್ರೀಯ ಭಾವನೆ

ಗಳ ಮರೆಯಲ್ಲಿ—ಇವರು ಶತಶತಮಾನಗಳ ಹಿಂದಕ್ಕೆ ಹೋಗಿ—ಗತದಲ್ಲಿ ತಮ್ಮ ಉಜ್ವಲ ಭವಿಷ್ಯದ್ದರ್ಶನದ ಪ್ರಯತ್ನದಲ್ಲಿ ಮಗ್ನರಾದರು.

ಈ ಧೋರಣೆಯಲ್ಲಿ ಸಹಸ್ರಾರು ಯುವಕರು ಕ್ರಾಪಿಂಗ್‌ಗಳನ್ನು ಬೋಳಿಸಿಕೊಂಡು ಬಿಟ್ಟರು. ಕೆಲವರು ಸಂಸ್ಕೃತಾಭ್ಯಾಸ ಪ್ರಾರಂಭಿಸಿ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಶರಣು ಹೊಡೆದರು. ಕವಿಗಳು ಚರಿತ್ರೆಗೆ ಸಂಬಂಧಿಸಿದ ಹಳೆಯ ಪುಟಗಳನ್ನು ತಿರುವಿ ಹಾಕಿ ಆಯಾ ಕಾಲದ ಪರಿಸ್ಥಿತಿಗಳನ್ನು ಆಕಾಶಕ್ಕೆ ಊದಿ ಹಿಡಿದರು. "ಏದುರಾ ಇಟುವಂಟಿ ಭೂದೇವಿಯೆಂದು !.... ಪೊಗಡರಾ ನೀ ತಲ್ಲಿ ಭೂಮಿ ಭಾರತಿನಿ !" [ಇಲ್ಲಯಾ ಇದರಂಥ ಭೂದೇವಿ ಎಲ್ಲಿಯೂ !.... ಹೊಗಳಯಾ ನಿನ್ನ ತಾಯಭೂಮಿ–ಭಾರತಿಯ]–ಎಂದು ರಾಯಪ್ರೋಲು ಹೇಳಿದ ವಾಕ್ಯಗಳು ಜನತೆಯನ್ನು ಉತ್ತೇಜನಗೊಳಿಸಿದ್ದಿರಬಹುದು ; ಆದರೆ, ಭಾರತದೇಶದ ಹೀನಸ್ಥಿತಿಯನ್ನಾಗಲೀ ರಾಷ್ಟ್ರೀಯ ಚಳುವಳಿಯ ತತ್‌ಕ್ಷಣದ ಕರ್ತವ್ಯವೇನು ಎಂದಾಗಲೀ—ಆ ವಾಕ್ಯಗಳು ವ್ಯಕ್ತಪಡಿಸಲಿಲ್ಲ; ಅಷ್ಟೇ ಅಲ್ಲ; ಆ ಹೀನ ಸ್ಥಿತಿಯನ್ನು ಮುಚ್ಚಿಹಾಕಿದವು.

ರಾಜಕೀಯ ಚಳವಳಿಯಲ್ಲಿ ಮತಶಕ್ತಿಗಳು 'ಸಹ–ವಾಸ' [Co-Existance] ನಡೆಸಿದ ಹಾಗೆಯೇ ಅಂದಿನ ತೆಲುಗು ಸಾಹಿತ್ಯದಲ್ಲಿಯೂ ಸಹ ಪಾಶ್ಚಾತ್ಯ ಪ್ರಜ್ಞಾ ಸ್ವಾಮ್ಯಭಾವ ಗಳೂ, ದೇಶೀ ಜಮೀಂದಾರೀ ಸಂಸ್ಕೃತಿ ಛಾಯೆಗಳೂ, ಮತಾವೇಶಗಳೂ, ಗಾಂಧೀದೃಷ್ಟಿ ಕೋನವೂ ಒಂದನ್ನೊಂದು ಭುಜತಟ್ಟಿಕೊಂಡವು. ನಂಡೂರು ಸುಬ್ಬಾರಾವು ಅವರ 'ಯೆಂಕಿ' ಹಾಡುಗಳು ; ಕವಿ ಕೊಂಡಲ ವೆಂಕಟರಾವು ಅವರ ಗೀತೆಗಳಂಥ ಜಾನಪದ (pastoralist) ಭಾವಗಳಿಗೆ ಸಾಹಿತ್ಯ ಗೌರವ ದೊರೆಕಿಸಿಕೊಂಡಿತು. ಅವರಿಬ್ಬರೂ ಗ್ರಾಮಜೀವನ ನಡೆಸಿದವರಲ್ಲ. ಕ್ರಮೇಣ 'ಯೆಂಕಿ' ಜಾನಪದ ಲಕ್ಷಣಗಳನ್ನು ಕಳಚಿ ಕೊಂಡು ಭಾವಗೀತೆಯ ಮಿಸ್ಟಿಸಿಸಂಗೊಳಗಾಯಿತು.

ತೆಲುಗು ಸಾಹಿತಿಗಳನ್ನು ಗ್ರಾಮೀಣ ಜೀವನವು ಆಕರ್ಷಿಸಿದ್ದಕ್ಕೆ ಮುಖ್ಯಕಾರಣ–ಗಾಂಧೀಚಳವಳಿ ಇರಬಹುದು. ಗ್ರಾಮಜೀವನದ ಕುರಿತು ಕೊಂಚ ಮಟ್ಟಿಗೆ ವಾಸ್ತವಿಕವಾಗಿಯೂ, ಕೊಂಚ ಮಟ್ಟಿಗೆ 'ರಸಸ್ಫೋರಕ'ವಾಗಿಯೂ ಕಥೆಗಳು ಹುಟ್ಟಿ ಕೊಂಡುವು. ಗ್ರಾಮೀಣ ವಾತಾವರಣವನ್ನು ಚೆನ್ನಾಗಿ ಬಲ್ಲಂಥ ಸಾಹಿತಿಗಳು ಬರೆದ ಕಥೆಗಳು ಹಲವು ನಿಜಕ್ಕೂ ಚೆನ್ನಾಗಿವೆ. ಆದರೆ ಗ್ರಾಮಜೀವನದ ಚಿತ್ರಣದಂತೆಯೇ ವಿಶ್ಲೇಷಣೆಯಾಗಲೀ ವರ್ಗದೃಷ್ಟಿಯಾಗಲಿ ಅವುಗಳಲ್ಲಿಲ್ಲ.

ಯುದ್ಧಕಾಲದ ತನಕ ಸೃಷ್ಟಿಯಾದ ಸಾಹಿತ್ಯದಲ್ಲಿ ವರ್ಗದೃಷ್ಟಿ ಪೂರ್ತಿಯಾಗಿ ಲೋಪವಾಗಲು ಅನೇಕ ಕಾರಣಗಳುಂಟು. ಅಂಥ ಸಂಪ್ರದಾಯವೆಂಬುದು ಸಾಹಿತ್ಯದಲ್ಲಿಲ್ಲ. ಕಡ ತಂದುಕೊಂಡ ವಿದೇಶ ಪ್ರಭಾವಗಳಲ್ಲೂ ಸಹ ಅಂಥದು (ವರ್ಗ ದೃಷ್ಟಿ ಕೋನ) ಇರಲಿಲ್ಲ. ಆಂಧ್ರಪ್ರದೇಶದಲ್ಲಿ ಕಮ್ಯೂನಿಸ್ಟ್ ಪಾರ್ಟಿ ಅವತರಿಸಿ, ಮಾರ್ಕ್ಸಿಸಂನ ಅಧ್ಯಯನ ಪ್ರಾರಂಭವಾಯಿತು. ಆದರೆ ಸಾಹಿತಿಬಳಗ ಆ ಅಧ್ಯಯನದ ಬಗ್ಗೆ ಆಸಕ್ತಿ ತೋರಿಸಲಿಲ್ಲ. ತಾವು ರಾಷ್ಟ್ರೀಯ ಚಳುವಳಿಯಲ್ಲಿ ಅಂತರ್ಭಾಗವೆಂದು ಕಮ್ಯೂ

ನಿಸ್ಟರು ಭಾವಿಸಿದರೂ ಅವರ ಬಗ್ಗೆ ಆ ಚಳವಳಿಯಲ್ಲಿ ಅಪೇಕ್ಷ್ಯೇ ಅಪಪ್ರಚಾರ ನಡೆದು ಬಿಟ್ಟಿತು. ಕೊನೆಗೆ ಡಿಪ್ರೆಷನ್ ಹೇಗೆ ಬಂತು ಎಂಬ ಸಮಸ್ಯೆಯು ಒಗೆಗಾದರೂ ತೆಲುಗು ಸಾಹಿತಿಗಳು ಯೋಚಿಸಲಿಲ್ಲ. ಆದರೆ ಅದೇ ಕಾಲದಲ್ಲಿ ಬೆಂಗಾಲೀ ಸಾಹಿತಿಗಳು ಆ ತಾರ್ಕಿಕ ಭೌತಿಕವಾದಗಳ ಕುರಿತು ವಿಶದವಾಗಿ ಅರಿವು ಮಾಡಿಕೊಂಡರು. ತೆಲುಗಿನಲ್ಲಿ ಮಾತ್ರ ಮಧ್ಯಮವರ್ಗದವರ ಸಂಕಷ್ಟಗಳನ್ನು ಕುರಿತು ಹಲಕೆಲವು ದಯನೀಯವಾದ ರಚನೆಗಳು ಹೊರಬಿದ್ದುವಷ್ಟೆ.

ಡಿಪ್ರೆಷನ್ ತರುವಾಯ ಒಂದು 'ಪುಷ್ಕರ' ಕಾಲಕ್ಕೂ ಮಿಕ್ಕಿ ಪ್ರತಿ ವರ್ಷವೂ ಸಮಾವೇಶಗಳನ್ನು, ಸಮ್ಮೇಳನಗಳನ್ನು ನಡೆಸಿದ 'ನವ್ಯ ಸಾಹಿತ್ಯ ಪರಿಷತ್ತು' ಸಮ್ಮೇಳನಗಳಲ್ಲಿ ವರ್ಗ ಸಾಹಿತ್ಯದ ಪ್ರಸಕ್ತಿಯಾಗಲೀ, 'ಜನತಾ ಸಾಹಿತ್ಯ'ದ ನಿನಾದವಾಗಲೀ ಕೇಳಿಬರಲೇ ಇಲ್ಲ. ತೆಲುಗು ಸಾಹಿತ್ಯ ಕ್ಷೇತ್ರದಲ್ಲಿ ಅಂಥ ಭಾವನೆಗಳ ಪದಾರ್ಪಣೆ ಯಾದುದು—ಯುದ್ಧ ಮಧ್ಯಕಾಲದಲ್ಲಿ—ಹಿಟ್ಲರ್ ರಷ್ಯಾದ ಮೇಲೆ ದಂಡಯಾತ್ರೆ ನಡೆಸಿದ ಬಳಿಕವಷ್ಟೆ. ಕಮ್ಯುನಿಸ್ಟ್ ಪಾರ್ಟಿ ತೆಲುಗಿನಲ್ಲಿ "ಅಭ್ಯುದಯ ರಚಯಿತರ ಸಂಘ" (ಪ್ರಗತಿಶೀಲ ಸಾಹಿತೀ ಸಂಘ) "ಪ್ರಜಾ ನಾಟ್ಯ ಮಂಡಳಿ"ಗಳನ್ನು ನಡೆಸಿದರು.

ಆ ಹೊತ್ತಿಗಾಗಲೇ ತೆಲುಗಿನಲ್ಲಿ ಕೆಲವರು "ಅಗ್ರಗಾಮಿ"ಸಾಹಿತಿಗಳು ತಾತ್ವಿಕ ದೃಷ್ಟಿ ಕೋನಗಳನ್ನು, ಫ್ರಾಯ್ಡ್ ಸಿದ್ಧಾಂತಗಳನ್ನು ಆಧಾರ ಮಾಡಿಕೊಂಡು ಕಥೆಗಳನ್ನೂ ಕಾದಂಬರಿಗಳನ್ನೂ ಬರೆಯಲಾರಂಭಿಸಿಬಿಟ್ಟಿದ್ದರು. ಇವರು ಪ್ರಗತಿಶೀಲ ಸಾಹಿತಿ ಗಳೊಂದಿಗೆ ಬೆರೆಯಲಿಲ್ಲ. ಇವರಲ್ಲಿ ಪ್ರಮುಖರು–ತ್ರಿಪುರನೇನಿ ಗೋಪಿಚಂದ್ ಹಾಗೂ ಬುಚ್ಚಿಬಾಬು ಮುಂತಾದವರು. [ಕೊಂಚ ಕಾಲದ ಹಿಂದೆ, ತೆಲುಗು ಪ್ರಗತಿಶೀಲ ಲೇಖಕರಲ್ಲಿ ಪ್ರಮುಖರೆಂಬುದಾಗಿ ಬುಚ್ಚಿಬಾಬು ಅವರ ಹೆಸರನ್ನೂ ಪಾಲಗುಮ್ಮಿ ಪದ್ಮರಾಜು ಅವರ ಹೆಸರನ್ನೂ ಹೇಳಿತು–'ಸೋವಿಯತ್ ಲಿಟರೇಚರ್' ಪತ್ರಿಕೆ. ನನಗೆ ತಿಳಿದ ಮಟ್ಟಿಗೆ ಈ ಇಬ್ಬರೂ ಯಾವೊತ್ತೂ ಪ್ರಗತಿಶೀಲ ಲೇಖಕರಲ್ಲ. ಇಬ್ಬರೂ ಸಾಮರಸೆಟ್ ಮಾಮ್‌ರಂಥ ಲೇಖಕರ ಪ್ರಭಾವಕ್ಕೊಳಗಾದವರು] ಗೋಪಿಚಂದ್ ಅವರಿಗೆ ಮಾರ್ಕ್ಸಿಸ್ಟ್ ದೃಷ್ಟಿ ಗೊತ್ತಿತ್ತು; ಆದರೆ ಅವರು ಎಂ. ಎನ್. ರಾಯ್‌ರ ತಾತ್ವಿಕ ಮಾರ್ಗವನ್ನನುಸರಿಸಿ ಕಾಲಕ್ರಮೇಣ ಇತರ ತಾತ್ವಿಕ ಸಿದ್ಧಾಂತಗಳ ಅನ್ವೇಷಣೆಯಲ್ಲಿ ತೊಡಗಿದರಷ್ಟೆ.

ಪ್ರಗತಿಶೀಲ ಲೇಖಕರ ಸಂಘ ನನ್ನ ದೃಷ್ಟಿಯಲ್ಲಿ ಎರಡು ತೆರನ ವಿಜಯಗಳನ್ನು ಸಾಧಿಸಿದೆ. ಒಂದು—ಅಲ್ಲಿಯತನಕ ನಡೆದ ಸಾಹಿತ್ಯ ಚಳವಳಿಗಳಿಂದ ಸ್ಫೂರ್ತಿ ಪ್ರೇರಣೆಗಳನ್ನು ಹೊಂದದಿರುವ ಅನೇಕರು ರಚನಾ ವ್ಯಾಸಂಗಗಳಿಗೆ ತೊಡಗಿ ಆ ಮುಂಚೆ ಸಾಹಿತ್ಯದಲ್ಲಿ ಚಿತ್ರಿತಗೊಳ್ಳದಂಥ ಜೀವನವನ್ನು ಚಿತ್ರಿಸಿದರು. ಪ್ರಗತಿಶೀಲ ರಚನೆ ಎಂದರೇನು? ಜನತಾ ಸಾಹಿತ್ಯ ಹೇಗಿರಬೇಕು? —ಎಂಬ ಪ್ರಶ್ನೆಗಳು ಹುಟ್ಟಿ ಕೊಂಚ ಆರೋಗ್ಯ ಕರವಾದ ಚರ್ಚೆಗಳು ಜರುಗಿದುವು. ಬಹುಮಟ್ಟಿಗೆ ಲೇಖಕರೆಲ್ಲ ಮಧ್ಯಮವರ್ಗ ದವರೇ ಆದರೂ ಅವರು ಮಧ್ಯಮ ತರಗತಿಯ ಮೌಲ್ಯಗಳನ್ನು ಕೊಂಚ ಮಟ್ಟಿಗೆ ಚಿತ್ರಿಸಿದರಷ್ಟೆ "ಪ್ರಜಾ ನಾಟ್ಯ ಮಂಡಳಿ" ನಾಟಕಗಳು "ಬುರ್ರಕಥೆ" [ತಂದಾನ ತಾನ

ಕಥೆ] ಮತ್ತು 'ಬೀದಿಭಾಗವತ'ಗಳು ಎಂದೂ ಯಾವ ರಾಜಕೀಯ ಚಳವಳಿಯೂ ಉಂಟು ಮಾಡದಷ್ಟು ಚೈತನ್ಯವನ್ನುಂಟುಮಾಡಿದುವು. ಇವುಗಳನ್ನು ಬರೆದವರೂ ಪ್ರದರ್ಶಿಸಿದವರೂ ಮಾರ್ಕ್ಸಿಸಮ್ ಮೂಲಸೂತ್ರಗಳನ್ನು ಅರಿತವರಾಗಿದ್ದರು. ಆದರೆ ಅವರು ಕಮ್ಯುನಿಸ್ಟ್ ಕೇಡರ್‌ಗಳಲ್ಲ. ಆದರೆ ಅವರ ಸಾಂಸ್ಕೃತಿಕ ಕಾರ್ಯಕ್ರಮಗಳ ಮೇಲೆ ಕಮ್ಯೂನಿಸ್ಟ್ ಪಾರ್ಟಿಯ ಉಸ್ತುವಾರಿಕೆ ಸ್ವಲ್ಪಮಟ್ಟಿಗೆ ಇರುತ್ತಿತ್ತು.

ಪ್ರಗತಿಶೀಲ ಸಾಹಿತ್ಯ ಚಳವಳಿ ಸಾಧಿಸಿದ ಎರಡನೆಯ ವಿಜಯ—ಭೂಮಿಯ ಮೇಲೆ ಕಾಲೂರದೆ, ಆಕಾಶದಲ್ಲಿ ವಿಹರಿಸುತ್ತಿದ್ದ ಕೃತಿಗಳಿಗೆ ಕಾಲದೋಷನನ್ನು ನಿರೂಪಿಸಲಾಯಿತು. ಅದರೊಂದಿಗೆ ಪ್ರಗತಿಶೀಲ ಸಾಹಿತ್ಯ ಪ್ರಭಾವದಿಂದಾಗಿ ಚಳವಳಿಯೊಂದಿಗೆ ಯಾವುದೇ ರೀತಿಯ ಸಂಬಂಧವೂ ಇಲ್ಲದಂಥ ಲೇಖಕರೂ, ಮಾರ್ಕ್ಸಿಸಮ್ ಹೆಸರೂ ಕೇಳಿರದಂಥವರೂ ಸಹ ಅನೇಕ ಆಸ್ವಾದಯೋಗ್ಯ ಪ್ರಗತಿಶೀಲ ಕೃತಿಗಳನ್ನು ರಚಿಸಿದರು. (1) ಇದರಿಂದಾಗಿ ಒಂದು ಭಿನ್ನಾಭಿಪ್ರಾಯ ಕಮ್ಯೂನಿಸ್ಟ್ ವರ್ಗಗಳಲ್ಲೇ ತಲೆ ಎತ್ತಿತು. ಪ್ರಗತಿಶೀಲ ಲೇಖಕನಿಗೆ ಮಾರ್ಕ್ಸಿಸಮ್ ತಿಳಿದಿರುವುದು ಅಷ್ಟು ಮುಖ್ಯವಲ್ಲ; (2) ಜೀವನವನ್ನು ವಾಸ್ತವವಾಗಿ ಚಿತ್ರಿಸಬಲ್ಲ ಶಕ್ತಿ ಇದ್ದರೆ ಸಾಕು ಜೀವನ ವಾಸ್ತವಿಕತೆಯೂ ಸಹ ವರ್ಗದೃಷ್ಟಿಕೋಣವನ್ನನುಸರಿಸಿ ಭಿನ್ನವಾಗಿರುತ್ತದೆ ಎಂಬ ವಿಷಯ ಅವರಿಗೆ ಮನವರಿಕೆಯಾಗಲಿಲ್ಲ.

ಪ್ರಗತಿಶೀಲ ಸಾಹಿತ್ಯ ಚಳವಳಿಯಲ್ಲಿ ವರ್ಗ ಸಂಘರ್ಷಣೆ ವಿವರವಾಗಿ ಚಿತ್ರಿತಗೊಳ್ಳಲಿಲ್ಲ. ಅದರಲ್ಲೂ ಮುಖ್ಯವಾಗಿ "ಪ್ರಜಾ ನಾಟ್ಯ ಮಂಡಳಿ" ಪ್ರದರ್ಶನಗಳಲ್ಲಿ ಜಮೀನ್‌ದಾರೀ ವ್ಯತಿರೇಕತೆಗಳೂ, ಇಂಪೀರಿಯಲಿಸಮ್ ಬಗ್ಗೆ ವ್ಯತಿರೇಕತೆಗಳೂ ಅಗ್ರಸ್ಥಾನವನ್ನು ವಹಿಸಿದುವು. ಆ ಪ್ರದರ್ಶಗಳಲ್ಲಿ ಜಮೀನ್‌ದಾರರು ಮುಂತಾದವರು ವ್ಯಕ್ತಿಗತವಾಗಿಯೂ ಸಹ ದುರ್ಮಾರ್ಗರು ಎಂಬಂತೆ ಚಿತ್ರಿತಗೊಂಡಿದ್ದರಿಂದ ಎಲ್ಲ ವರ್ಗದವರೂ ತೃಪ್ತಿಗೊಂಡರೆಂಬುದೇನೋ ನಿಜ. ಆದರೆ ನಿಜಕ್ಕೂ ಅದು ದೌರ್ಬಲ್ಯವಷ್ಟೆ. ಜಮೀನ್‌ದಾರ ವ್ಯಕ್ತಿಗತವಾಗಿ ಎಷ್ಟೇ ಒಳ್ಳೆಯವನಾದರೂ ರೈತರ ಬಗ್ಗೆ ಕಾರ್ಕೋಟಕನೇ. ಈ ವರ್ಗಸ್ವಭಾವವನ್ನು ಅಲ್ಲಿ ಸ್ಪಷ್ಟವಾಗಿ ನಿರೂಪಿಸಿದ ಹಾಗೆ ಕಂಡು ಬರುವುದಿಲ್ಲ.

ಮತ್ತಿನ್ನು ಎರಡು ಅಂಶಗಳನ್ನು ಪ್ರಗತಿಶೀಲ ಸಾಹಿತ್ಯ ಚಳವಳಿಯು ತಾಕಲಿಲ್ಲ. ಒಂದು—ದೇಶ ವಿಮೋಚನಾ ಭಾವಗಳು ; ಎರಡು—ವಿಪ್ಲವ ಭಾವಗಳು. ಇದಕ್ಕೆ ಕಾರಣವಿಲ್ಲದಿಲ್ಲ. ದೇಶ ವಿಮೋಚನೆ ವಿಧಿವತ್ತಾಗಿ ನಡೆದೇ ನಡೆಯುತ್ತದೆಂತಲೂ, ನೆಹ್ರೂ ನಾಯಕತ್ವದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಬೂರ್ಜ್ವಾ ಪ್ರಜಾಪ್ರಭುತ್ವವನ್ನು ಸ್ಥಾಪಿಸುತ್ತದೆಂತಲೂ, ಅನಂತರ ಸೋಷಲಿಸ್ಟ್ ವ್ಯವಸ್ಥೆ ನೆಲೆಗೊಳ್ಳಲು ಏನೂ ಅಂಥ ಅಡ್ಡಿ ಆತಂಕಗಳಿರುವುದಿಲ್ಲವೆಂದು ಕಮ್ಯೂನಿಷ್ಟರು ನಂಬಿಕೊಂಡರು.

ತೆಲಂಗಾಣಾ ರೈತವಿಪ್ಲವ ಪ್ರಾರಂಭವಾಗುವ ತನಕ ವಿಪ್ಲವದ ಆವಶ್ಯಕತೆಯ ಅರಿವು ಯಾರಿಗೂ ತಟ್ಟಿರಲಿಲ್ಲ. ಆ ಚಳವಳಿಯನ್ನು ಬಲಪಡಿಸುತ್ತಾ ಬಂದ ಪ್ರಗತಿಶೀಲ ಗೀತೆಗಳನ್ನು ಕಂಡು ಪ್ರತ್ಯಕ್ಷವಾಗಿ ವಿಪ್ಲವ ನಡೆಸಿದವರು ನಕ್ಕರೆಂದು ತಿಳಿದು ಬಂತು. ಅವರು

ಸ್ವತಃ ಬರೆದು ಹಾಡಿಕೊಂಡ ಹಾಡುಗಳು ಸಂಪೂರ್ಣ ಭಿನ್ನವಾಗಿರುವ ಮಾತು ನಿಜ.

ಆ ಸಮಯದಲ್ಲಿ ಕಮ್ಯೂನಿಸ್ಟ್ ಪಾರ್ಟಿ ಅಜ್ಞಾತವಾಸಕ್ಕೆ ಹೊರಟುಹೋಗಿ ಪೋಲೀಸರು ಕಮ್ಯೂನಿಷ್ಟರನ್ನು ಬೇಟೆಯಾಡುವುದು ನಡೆದ ಕಾರಣದಿಂದಾಗಿ ಪ್ರಗತಿಶೀಲ ಸಾಹಿತ್ಯ ಚಳವಳಿ ತನ್ನ ಕಾಲುಗಳ ಮೇಲೆ ತಾನೇ ನಿಲ್ಲಬೇಕಾಯಿತು. ಅದು ಅಷ್ಟೊಂದು ಜಯಪ್ರದವಾಗಿ ಸಾಗಲಿಲ್ಲ. ಪುನಃ ಕಮ್ಯೂನಿಷ್ಟ ಪಾರ್ಟಿ 'ಲೀಗಲ್' ಆಗಿ ಕೆಲಸಮಾಡಲು ಪ್ರಾರಂಭಿಸದಾಗ್ಯೂ—ಪ್ರಗತಿಶೀಲ ಸಾಹಿತ್ಯ ಚಳವಳಿ ಕ್ರಮೇಣ ಕ್ಷೀಣಗೊಂಡುಬಿಟ್ಟಿತು. ಅನೇಕ ಲೇಖಕರು ತಮ್ಮ ಕಮಿಟ್‌ಮೆಂಟ್‌ಗೆ ಕಾಲಿದೋಷ ಹಿಡಿದ ಹಾಗೆ ಭಾವಿಸಿದರು. "ಪ್ರಜಾ ನಾಟ್ಯಮಂಡಳಿ" ಸದಸ್ಯರು ಸಿನಿಮಾ ರಂಗವನ್ನು ಪ್ರವೇಶಿಸುವ ಪ್ರಯತ್ನಗಳಲ್ಲಿ ಮಗ್ನರಾದರು. ಅನೇಕರು ಪ್ರವೇಶಿಸಿಯೂ ಬಿಟ್ಟರು; ಇಂದಿಗೂ ಅದೇ ರಂಗದಲ್ಲಿ ವಿಜಯವಂತರಾಗಿ ಕೆಲಸಮಾಡುತ್ತಲೂ ಇದ್ದಾರೆ!

ಒಟ್ಟಿನಲ್ಲಿ ಪ್ರಗತಿಶೀಲ ಸಾಹಿತ್ಯ ಚಳವಳಿ ಮಧ್ಯಮವರ್ಗದ ಮೇಧಾವಿಗಳಲ್ಲಿ ಯುದ್ಧಾನಂತರದ ಕಾಲದಲ್ಲಿ ಉಂಟಾದ ಚೈತನ್ಯವನ್ನು ಮಾತ್ರವೇ ಪ್ರತಿಬಿಂಬಿಸತೊಡಗಿತು. ಇದರ ಪ್ರಭಾವದಿಂದಾಗಿ ಕಲಾವಿದರ ಅಂತಸ್ತು ವಿಸ್ತರಿಸಿತು. ಇತಿವೃತ್ತಗಳು ವಾಸ್ತವ ಜೀವನಕ್ಕೆ ಮತ್ತಿನ್ನಷ್ಟು ಹತ್ತಿರವಾದುವು. ಯುದ್ಧಕ್ಕೆ ಮೊದಲು ತೆಲುಗಿನಲ್ಲಿ ಹೊರಹೊಮ್ಮಿದ ಕಾಲ್ಪನಿಕ ಸಾಹಿತ್ಯಕ್ಕೂ ಯುದ್ಧಾನಂತರ ಹೊರಹೊಮ್ಮಿದ ಸಾಹಿತ್ಯಕ್ಕೂ ಮೌಲಿಕವಾದ ವ್ಯತ್ಯಾಸ ಇದೆ ಎಂಬುದರಲ್ಲಿ ಸಂದೇಹವೇ ಇಲ್ಲ. ಇದಕ್ಕೆ ಒಂದಿಷ್ಟಾದರೂ ಪ್ರಗತಿಶೀಲ ಸಾಹಿತ್ಯ ಚಳವಳಿಯು ಕಾರಣವೆಂದು ಹೇಳಬೇಕಾಗುತ್ತದೆ. ನಾಟಕ ಸಾಹಿತ್ಯದಲ್ಲುಂಟಾದ ಬದಲಾವಣೆಗೆ "ಪ್ರಜಾ ನಾಟ್ಯಮಂಡಲಿ"ಯ ಪ್ರಭಾವ ಕಾರಣವೆಂಬುದು ನಿರ್ವಿವಾದ ಅಂಶ. ಯುದ್ಧಾನಂತರ ಕಾಲದಲ್ಲಿ ನೂರರ ಸಂಖ್ಯೆಯಲ್ಲಿ, ಸಾವಿರ ಸಂಖ್ಯೆಯಲ್ಲಿ ಪ್ರಗತಿಶೀಲ ಏಕಾಂಕಗಳು, ನಾಟಕಗಳು ಬಂದಿವೆ. ಕಾಲ್ಪನಿಕ ಸಾಹಿತ್ಯಕ್ಕಿಂತ ಈ ನಾಟಕ ಸಾಹಿತ್ಯದಲ್ಲಿ ವರ್ಗ ಸ್ವಭಾವ ಹೆಚ್ಚು ಸ್ಫುಟವಾಗಿ ತೋರಿಬರುತ್ತದೆ.

ಆದರೆ ಸಾಹಿತ್ಯ ಪ್ರೇಕ್ಷಕರನ್ನು ಚೈತನ್ಯವಂತರನ್ನಾಗಿ ಮಾಡಿದ್ದು ಕಂಡುಬರುವುದಿಲ್ಲ. ಈ ನಾಟಕಗಳಲ್ಲಿ ಅಭಿವ್ಯಕ್ತಿಗೊಂಡ ಪ್ರಗತಿಶೀಲ ಭಾವಗಳು—ಹಲ್ಲು ಕಳೆದ ಹಾವಿನಂಥವು. ಅವು ಸಮಾಜದಲ್ಲಿನ ಪ್ರಗತಿಶೀಲ ವಿರೋಧೀ ವರ್ಗಗಳನ್ನು ಕಿಂಚಿತ್ತೂ ಚಿಂತೆಗೀಡು ಮಾಡಲಾರದಂಥವು, 'ನಿರಪಾಯ'ವಾದುವುಗಳು. ಅವುಗಳಲ್ಲಿ ಹೊಸ ಸತ್ಯಗಳಾದರೂ ಇಲ್ಲ. ಭಯಂಕರವಾದ ದಾರಿದ್ರ್ಯ, ನಿರುದ್ಯೋಗ, ಸಮಾಜದಲ್ಲಿ ಕೆಲವರ ಜೀವನದ ಮೇಲೆ ಮತ್ತೆ ಕೆಲವರಿಗಿರುವ ಅಧಿಕಾರ, ಸಾಮಾಜಿಕ ದುರನ್ಯಾಯಗಳು, ನಿರಾಸೆ, ನಿಸ್ಪೃಹತೆ, ದೇಹಗಳನ್ನು ಮಾರಿಕೊಳ್ಳುವುದು, ರೋದನಗಳು, ಆತ್ಮಹತ್ಯೆಗಳು—ಈ ಇವುಗಳ ಹಿಂದಿರುವ ವೈರುಧ್ಯಗಳನ್ನು ಸಾಹಿತ್ಯ ಸೂಚಿಸಲಾರದೆ, ಸ್ಪರ್ಶಿಸಲೂ ಕೂಡಾ ಆಗದೆ ಇರುವಾಗ—ಶುಷ್ಕ ವಿಷಾದ ಗಾಥೆಗಳಲ್ಲದೆ ಏನು ತಾನೇ ಉಳಿಯುತ್ತವೆ?

ಯುದ್ಧಾನಂತರ ಜೀವನದಲ್ಲಿ ಪ್ರಪಂಚದ ಸ್ವರೂಪ ಸ್ವಭಾವಗಳು ಊಹಿಸಲಾರದಷ್ಟು

ಬದಲಾಯಿಸಿವೆ. ವಿಶ್ವದ ಶಾಂತಿಮಹಾಸಭೆಗಳ ಪ್ರಾಮುಖ್ಯವೂ ಸಹ ಮರೆಯಾಗಿದೆ. ಪ್ರಪಂಚದಲ್ಲೆಲ್ಲಾ ವಿಮೋಚನಾ ಚಳವಳಿಗಳ ಸಂಘರ್ಷಣೆ ಬೆಳೆದುಬಿಟ್ಟದೆ. ಹೊಸ ವಲಸೆ ವಿಧಾನಗಳು (neo colonialism) ಜಾರಿಗೆ ಬಂದಿವೆ. ರಷ್ಯಾ ಮಹತ್ತರ ಶಕ್ತಿಯಾಗಿ ತಯಾರುಗೊಂಡಿದೆ. ಆದರೆ ಕಮ್ಯೂನಿಸ್ಟ್ ಜಗತ್ತಿನಲ್ಲಿ ಛಿದ್ರಗಳು, ಸೀಳುಗಳು ಏರ್ಪಟ್ಟಿವೆ.

ಲೇಖಕರು ಹೊಸ ಬಗೆಯ ಅಧ್ಯಯನ ನಡೆಸಲು ಅನೇಕ ಅವಕಾಶಗಳು ಏರ್ಪಟ್ಟಿವೆ. ಆದರೆ ಅಧ್ಯಯನ ಮಾತ್ರ ಸಮರ್ಥವಾಗಿ ನಡೆಯುತ್ತಿಲ್ಲ. ರಾಷ್ಟ್ರೀಯ ಕಮ್ಯೂನಿಸ್ಟ್ ದೃಷ್ಟಿಗಳಲ್ಲಿ ಕವಲುಗಳುಂಟಾಗಿವೆ, ಛಿದ್ರಗಳುಂಟಾಗಿವೆ, ದೇಶದಲ್ಲಿ ಹೊಸ ವರ್ಗೀಕರಣಗಳು ನಡೆದಿವೆ. ಸರಿಸುಮಾರು ಎಲ್ಲ ಸಮಸ್ಯೆಗಳಿಗೆ—ಅಂತರ ರಾಷ್ಟ್ರೀಯ ಸ್ವರೂಪ ಬಂದುಬಿಟ್ಟದೆ. ರಾಜಕೀಯ ಗುಂಪುಗಳ ಘರ್ಷಣೆಗಳ ಹಿಂದೆ ಸಾಮಾಜಿಕವರ್ಗ ಸಂಘರ್ಷಣೆ ಇದೆಯೋ ಇಲ್ಲವೋ ಊಹಿಸುವುದೂ ಕಷ್ಟಸಾಧ್ಯವಾಗಿದೆ.

ಇಂಥ ಪರಿಸ್ಥಿತಿಯಲ್ಲಿ ಆಂಧ್ರದಲ್ಲಿ ಕ್ರಾಂತಿಕಾರೀ ಸಾಹಿತ್ಯ ಚಳವಳಿ ಹುಟ್ಟಿಕೊಂಡಿತು. ನಕ್ಸಲೀಯರ ಹೋರಾಟಗಳ ಹಿಂದೆ ವಿಪ್ಲವ ಚೈತನ್ಯ ಇದೆ ಎಂಬ ನಂಬಿಕೆಯಿಂದ ಕೆಲವು ಜನ ಲೇಖಕರು ದೇಶದಲ್ಲಿ ಕ್ರಾಂತಿಕಾರೀ ಭಾವ ಚೈತನ್ಯವನ್ನು ಬೆಳೆಸಲು ಉದ್ಯುಕ್ತರಾದರು. ಕಾಲು ಶತಮಾನದ ಹಿಂದೆ ನಡೆದ ಪ್ರಗತಿಶೀಲ ಸಾಹಿತ್ಯ ಚಳುವಳಿಯಂತೆಯೇ ಇದೂ ಸಹಾ ಹೊಸ ಲೇಖಕರನ್ನು, ಹೊಸತಾದ ಸಾಹಿತ್ಯ ಚೈತನ್ಯವನ್ನು ಬೆಳಕಿಗೆ ತಂದಿತು. ವಿಪ್ಲವ ಸಾಹಿತ್ಯ ಎಷ್ಟರ ಮಟ್ಟಿಗೆ ವಿಜಯವಂತವಾಗಿದೆ ಎಂದು ನಿರ್ಣಯಿಸುವ ಮುನ್ನವೇ ಅದರ ಮೇಲೆ ನಿಂದಾಪ್ರಚಾರವೂ ಅಪಪ್ರಚಾರವೂ ಪ್ರಭುತ್ವದ ನಿಷೇಧಗಳೂ ಮುಟ್ಟುಗೋಲುಗಳೂ, ವಿಪ್ಲವಕಾರಿ ಬರಹಗಾರರ ಬಂಧನಗಳೂ ನಡೆದವು. ಆದರೆ ಈ ಚಳುವಳಿ ಬಲವಾಗಿ ನಾಲ್ಕು ಕಾಲವಾದರೂ ನಡೆಯುವುದರೊಳಗೇನೇ ವಿಪ್ಲವ ರಾಜಕೀಯ ಪಕ್ಷಗಳ ಮಧ್ಯೆಯಿರುವ ವೈರುಧ್ಯಗಳು–ವಿಪ್ಲವಕಾರಿ ಬರಹಗಾರರ ಸಂಘ ವ್ಯವಸ್ಥೆಯೊಳಕ್ಕೆ ನುಗ್ಗಿ ಅದು ಛಿದ್ರಗೊಳ್ಳಲು ಅನುವಾಯಿತು. ತುರ್ತು ಪರಿಸ್ಥಿತಿ ಘೋಷಿಸಲ್ಪಡುತ್ತಿರುವಂತೆಯೇ ಅನೇಕ ವಿಪ್ಲವಕಾರಿ ಬರಹಗಾರರು ಬಂಧಿಸಲ್ಪಟ್ಟರು. ದೇಶದ ಆಂತರಿಕ ಭದ್ರತೆಗೆ ವಿಪ್ಲವಕಾರಿ ಬರಹಗಾರರು ಅಡ್ಡಿಯಾಗಿದ್ದರು ಎಂದು ಸರಕಾರ ಕೆಲವರಿಗೆ ಉತ್ತರಿಸಿತು ಎಂದುಕೊಳ್ಳಬೇಕು.

ವಿಪ್ಲವ ಗೀತೆಗಳನ್ನು ಬರೆದವರೆಲ್ಲರೂ ಕೊನೆಯವರೆಗೂ ವರ್ಗ ಚೈತನ್ಯವುಳ್ಳವರೆಂದು ಹೇಳುವಂತಿಲ್ಲ. ಆದರೆ ಅವರು ಆ ವರ್ಗದವರಿಗೆ ಸಂಪೂರ್ಣ ಸಹಾನುಭೂತಿ ಪರರಾಗಿದ್ದಾರೆ ಎಂಬುದರಲ್ಲಿ ಸಂದೇಹವಿಲ್ಲ- ವಿಪ್ಲವ ಸಾಹಿತ್ಯವನ್ನು ಸೃಷ್ಟಿಸುವುದರಿಂದ ಅವರಿಗೆ ಬಂದೆರಗುವ ಕೀರ್ತಿಯಾಗಲೀ, ಹಣವಾಗಲೀ ಇಲ್ಲದಂಥ ಕಾಲದಲ್ಲಿ ಅವರು ಅಂಥ ರಚನೆಗಳನ್ನು ಮಾಡಿದರು. ಪರಿಸ್ಥಿತಿಗಳು ವಿಪ್ಲವಕ್ಕೆ ಅನುಕೂಲಕರವಾಗಿವೆಯೋ ಇಲ್ಲವೋ ಸಂಪೂರ್ಣವಾಗಿ ತಿಳಿದುಕೊಳ್ಳದೆಯೇ ವಿಪ್ಲವದಲ್ಲಿ ಪಾಲುಗೊಂಡು ಅನೇಕ ಜನ

ಯುವಕರು ಆಹುತಿಯಾದರು. ಅವರ ಬಗ್ಗೆ ಸಹಾನುಭೂತಿ ತೋರಿಸುವುದೇನೂ ಅಸ್ವಾಭಾವಿಕವಲ್ಲ.

ಪ್ರಸ್ತುತ "ವಿಪ್ಲವ ಸಾಹಿತ್ಯ ಚಳವಳಿ" ಎಂಬುದಿಲ್ಲ. ಆದರೆ ಅದು ಮಾಯವಾಯಿತೆಂದುಕೊಳ್ಳುವ ಅಗತ್ಯವಿಲ್ಲ. ಜಗತ್ತಿನ ಭವಿಷ್ಯ ವಿಪ್ಲವಗಳ ಮೇಲೆ ಆಧಾರಗೊಂಡಿರುವಷ್ಟು ಕಾಲವೂ ವಿಪ್ಲವ ಸಾಹಿತ್ಯಕ್ಕೆ ಭವಿಷ್ಯ ಇದ್ದೇ ಇರುತ್ತದೆ. ಆದರೆ ವಿಪ್ಲವ ಸಾಹಿತ್ಯ ಚಳವಳಿ ಯಾವ ರೂಪದಲ್ಲಿ ಪುನಃ ತಲೆ ಎತ್ತುತ್ತದೆ; ಅದು ಏನೆಂಥ ವಿಜಯಗಳನ್ನು ಸಾಧಿಸುತ್ತದೆ ಎಂಬ ಪ್ರಶ್ನೆಗಳಿಗೆ ಉತ್ತರಗಳು ಲೀಲಾಮಾತ್ರವಾಗಿಯಾದರೂ ಈಗ ಹೊಳೆಯುತ್ತಿಲ್ಲ. ವಿಪ್ಲವ ಸಾಹಿತ್ಯ ಬೀಜಗಳು ಸಾಹಿತ್ಯಕ್ಷೇತ್ರದಲ್ಲಿ ಖಂಡಿತವಾಗಿಯೂ ಬಿದ್ದಿವೆ. ಅವುಗಳ ಪ್ರಭಾವ ಸಾಹಿತ್ಯದ ಮೇಲೆ ಯಾವ ರೂಪದಲ್ಲಿ ತಲೆ ದೋರುತ್ತದೋ ಕಾಲಕ್ರಮೇಣದಲ್ಲಿ ಗೊತ್ತಾಗುತ್ತದಷ್ಟೆ.

---

ಡಾ|| ಕೈಲಾಸಪತಿ
ಮತ್ತು ಶ್ರೀಮತಿ
ಚಿತ್ರಲೇಖ
ಮೌನಗುರು

# ಆಧುನಿಕ ತಮಿಳು ಸಾಹಿತ್ಯ: ವರ್ಗ ತಳಪಾಯ

ಆಧುನಿಕ ತಮಿಳು ಸಾಹಿತ್ಯದ ಮುಖ್ಯ ಗುಣಗಳನ್ನು ವಿವರಿಸುವವರು, ಅದು ಸಾಮಾನ್ಯವಾಗಿ ಜನ ಸಾಮಾನ್ಯರನ್ನು ಅವಲಂಬಿಸಿರುವ ಸಾಹಿತ್ಯವಾಗಿಯೂ ಇದೆ ಎಂದು ಹೇಳುವರು. ದೇವರುಗಳನ್ನೂ, ಅರಸುಗಳನ್ನೂ, ಪ್ರಭುಗಳನ್ನೂ ಮಠಾಧಿಪತಿ ಗಳನ್ನು ವಿಷಯವಾಗಿಟ್ಟುಕೊಂಡು, ಪ್ರಭುಗಳು, ಧರ್ಮಗುರುಗಳು ಮುಂತಾದವರನ್ನು ಅವಲಂಬಿಸಿ ಸಾಹಿತ್ಯವು ರೂಪುಗೊಳ್ಳುತ್ತಿದ್ದ ಗತಕಾಲವನ್ನು ಎಣಿಸಿನೋಡುವಾಗ, ಇಪ್ಪತ್ತನೆಯ ಶತಮಾನದ ತಮಿಳು ಸಾಹಿತ್ಯವು ಹೆಚ್ಚಿನ ಮಟ್ಟಿಗೆ ಧಾರ್ಮಿಕ ಒಲವಿಲ್ಲದ ಸಮಾಜದ ಹಲವು ಹಂತಗಳಿಗೆ ಸೇರಿದ ಓದುಗರ ಸಲುವಾಗಿ ರಚಿತವಾಗಿರುವ ಸಾಹಿತ್ಯ ವಾಗಿ ಪರಿಣಮಿಸಿರುವುದು ಸತ್ಯವೆ. ಅನಿವಾರ್ಯವಾಗಿಯೆ ಆಧುನಿಕ ತಮಿಳು ಸಾಹಿತ್ಯವೂ ಪ್ರಜಾಪ್ರಭುತ್ವದ ಧೋರಣೆಗಳಿಗೆ ಒಲಿದು ಹೋಗಿದೆ. ಬರೆಹಗಾರರೂ, ವಿಮರ್ಶಕರೂ ಸಮಾಜದ ಕೆಳಹಂತಗಳಿಗೆ ಸೇರಿದವರೆಂಬುದೂ ಅಲ್ಲಗಳೆಯಲಾರದ ವಿಷಯವೆ. ಆದರೂ ಸೂಕ್ಷ್ಮವಾಗಿ ನೋಡಿದರೆ, ಆಧುನಿಕ ತಮಿಳು ಸಾಹಿತ್ಯದ ವರ್ಗ ವೈಶಿಷ್ಟ್ಯಗಳೂ, ಗತಿಯೂ ವಿವಾದಸ್ಪಾದವಾಗಿಯೆ ಇರುವುದು ಗೋಚರವಾಗುತ್ತಿದೆ.

ಇಂದಿನ ತಮಿಳು ಸಾಹಿತ್ಯವು ಹಲವಾರು ಸಾಮಾಜಿಕ ಹಾಗೂ ಸಾಹಿತ್ಯಿಕ ದೃಷ್ಟಿ ಕೋನಗಳಿಂದ ಬಾಧಿಸಲ್ಪಟ್ಟಿದೆ. ಸಾಹಿತಿಗಳನ್ನು ಉತ್ತೇಜಿಸುವಂತಹ ಬರೆಯುವ ಅವಶ್ಯಕತೆಯೂ ಕೂಡ ಇದರಿಂದಾಗಿ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಸ್ತವಾಗಿರುತ್ತದೆ. ಈ ವ್ಯತ್ಯಾಸಗಳನ್ನೂ ಬಹುಮುಖ ಮನೋಧರ್ಮಗಳನ್ನೂ ಸಮಾಜ ಶಾಸ್ತ್ರದ ದೃಷ್ಟಿಯಿಂದ ಪರೀಕ್ಷಿಸಿದರೆ ಹೊರತು ಆಧುನಿಕ ತಮಿಳು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕೆಲವು ಸಾಮಾನ್ಯ ಸೂತ್ರಗಳನ್ನು ರಚಿಸಿ ವಿಷಯನಿಷ್ಕರ್ಷೆ ಮಾಡುವುದು ಕಷ್ಟಸಾಧ್ಯ. ಆದುದರಿಂದಲೆ ಆಧುನಿಕ ತಮಿಳು ಸಾಹಿತ್ಯದ ವರ್ಗ ಆಧಾರಗಳು ಯಾವುವು, ಅವು ಹೇಗೆ ಕಾರ್ಯಗತವಾಗಿವೆ ಎಂದು ಶೋಧಿಸುವುದು ಒಂದು ವಾಸ್ತವ (objective) ಮೌಲ್ಯಮಾಪನಕ್ಕೆ ಆಧಾರವಾದೀತು ಎನ್ನಬಹುದು.

ತಮಿಳು ಸಾಹಿತಿಗಳನ್ನು ವರ್ಗಾಧಾರದ ದೃಷ್ಟಿಯಿಂದ ನೋಡಿದಾಗ, ಸಾಮಾನ್ಯ ವಾಗಿ ಹೆಚ್ಚಿನ ಬರೆಹಗಾರರು ಕೆಳಮಧ್ಯಮ ದರ್ಜೆಗೆ ಸೇರಿದವರೆಂದೂ, ಮಾಸಿಕ ವೇತನ ಪಡೆಯುವ ಉದ್ಯೋಗಿಗಳೆಂದೂ ಹೇಳಬಹುದು. ವೈದ್ಯರಾಗಿಯೋ ಅಥವಾ ಯಂತ್ರಜ್ಞ (Engineer)ರಾಗಿಯೋ ಕಾರ್ಯನಿರ್ವಹಿಸುವ ಉಚ್ಚ ಮಧ್ಯಮ ದರ್ಜೆಗೆ ಸೇರಿದ ಬರೆಹಗಾರರೂ ಒಬ್ಬಿಬ್ಬರು ಇರುವರೆಂಬುದನ್ನೂ ಇಲ್ಲಿ ಗಮನಿಸಬೇಕು. ಆದರೂ

ಬರೆವಣಿಗೆಯನ್ನೆ ವೃತ್ತಿಯಾಗಿ ಅವಲಂಬಿಸಿ ಬಾಳುವ ಸಾಹಿತಿಗಳು ಅಥವಾ ಬರೆವಣಿಗೆಯ ಮೂಲಕ ದೊರೆಯುವ ವರಮಾನವನ್ನೆ ಆದಾಯವಾಗಿಟ್ಟುಕೊಂಡಿರುವ ಸಾಹಿತಿಗಳು ಇಲ್ಲವೆಂದೇ ಹೇಳಬಹುದು. ಬೇಕಾದಲ್ಲಿ, ತಮಿಳು ನಾಡಿನ ಮಟ್ಟಿಗೆ ಜಯಕಾಂತನನ್ನು ಇದಕ್ಕೆ ಹೊರತಾಗಿಟ್ಟು ಕೊಳ್ಳಬಹುದು. ಉಪಾಧ್ಯಾಯರುಗಳು, ಪತ್ರಿಕಾಸಂಪಾದಕರು, ಆಕಾಶವಾಣಿಯ ಕಾರ್ಯಕ್ರಮಗಳನ್ನು ನಿರೂಪಿಸುವವರು, ಗುಮಾಸ್ತರು, ಗಣಕರು, ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರು ಎಂದು ಮುಂತಾಗಿ ಹಲವು ತರದ ವೃತ್ತಿಗಳಲ್ಲಿರುವವರನ್ನೂ ಇಂದಿನ ತಮಿಳು ಸಾಹಿತಿಗಳ ಮಧ್ಯೆ ನಾವು ಕಾಣುತ್ತೇವೆ. ಇವರಲ್ಲಿ ಬಹುಸಂಖ್ಯಾಕರು ತಮ್ಮ ವೃತ್ತಿಯ ಬಲದಿಂದ—ಉಪಾಧ್ಯಾಯರಾಗಿಯೋ, ಆಕಾಶವಾಣಿಯ ಕಾರ್ಯಕ್ರಮಗಳ ನಿರೂಪಕರಾಗಿಯೋ ಇರುವುದರಿಂದ ಸ್ವಾಭಾವಿಕವಾಗಿಯೇ ಸಾಹಿತ್ಯಕ್ಷೇತ್ರದೊಂದಿಗೆ ಹೆಣೆಯಲ್ಪಟ್ಟಿದ್ದಾರೆನ್ನಬಹುದು. ಆದರೂ ಇತ್ತೀಚೆಗೆ ಯಂತ್ರಶಾಸ್ತ್ರ, ವೈದ್ಯಶಾಸ್ತ್ರ ಮುಂತಾದ ಕ್ಷೇತ್ರಗಳಿಂದಲೂ ಕೆಲವರು ಸಾಹಿತ್ಯರಂಗವನ್ನು ಪ್ರವೇಶಿಸಿರುವರೆಂಬುದು ಗಮನಾರ್ಹ.

ಬರೆಹಗಾರರ ವೃತ್ತಿಗಳ ಆಧಾರದ ಮೇಲೆ ಅವರನ್ನು ಸಾಮಾನ್ಯವಾಗಿ ಮಧ್ಯತರ ದರ್ಜೆಯವರೆಂದು ವರ್ಗೀಕರಿಸಿದರೂ, ಆ ವರ್ಗದೊಳಗೂ ಕೆಲಕೆಲವು ಛಾಯೆಯ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ವಿಶ್ವವಿದ್ಯಾನಿಲಯಗಳ ಪದವೀಧರರು, ಪದವೀಧರರಲ್ಲದವರು, ಇಂಗ್ಲಿಷ್ ಅಥವಾ ಬೇರೆ ವಿದೇಶೀ ಭಾಷೆಗಳನ್ನು ತಿಳಿದವರು, ಇಂಗ್ಲಿಷ್ ಭಾಷೆಯ ಪರಿಜ್ಞಾನ ಇಲ್ಲದವರು ಎಂದು ಈ ಸಾಮಾನ್ಯ ವರ್ಗದೊಳಗೂ ಬೇರೆ ಬೇರೆಯ ಗುಂಪುಗಳನ್ನು ಕಾಣಬಹುದಾಗಿದೆ. ಶ್ರೀಲಂಕಾದ ತಮಿಳು ಲೇಖಕರನ್ನು ನಿದರ್ಶನವಾಗಿ ತೆಗೆದುಕೊಂಡು ನೋಡಿದಾಗ, ಈ ಅಂಶವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದಾಗಿದೆ. ಇಲಂಗೈಯರ್‌ಕೋನ್, ಸಿ. ವೈತ್ತಿಲಿಂಗಂ ಮುಂತಾದವರು ಇಂಗ್ಲಿಷ್ ಕಲಿತ ತಮಿಳು ಲೇಖಕರಾಗಿದ್ದರು. ಇಳಂಕೀರನ್, ಡಾನಿಯಲ್, ಡೊಮಿನಿಕ್‌ಜೀವಾ ಮುಂತಾದವರು ಇಂಗ್ಲಿಷ್ ಭಾಷೆ ತಿಳಿಯದವರು. ೧೯೬೦ನೆಯ ಇಸವಿಯಿಂದ ವಿಶ್ವವಿದ್ಯಾನಿಲಯಗಳ ಮಟ್ಟದಲ್ಲೂ ಮಾತೃಭಾಷಾ ಶಿಕ್ಷಣವನ್ನು ಆಚರಣೆಗೆ ತರಲಾಯಿತಾಗಿ, ಆದರ ಪರಿಣಾಮವಾಗಿ ಹೊರಬಂದ ಸಾಹಿತಿಗಳೂ ತಾಯ್ನುಡಿಯ ಪರಿಜ್ಞಾನವನ್ನೇ ಆಧಾರವಾಗಿ ಕೊಂಡವರೆಂದರೆ ಅತಿಶಯೋಕ್ತಿಯಾಗದು ; ಆದರೆ ಇವರಲ್ಲಿ ಹಲವರು ಪಧವೀಧರರೂ ಹೌದು.

ಸಾಮಾನ್ಯವಾಗಿ ನಮ್ಮ ಇಂದಿನ ತಮಿಳು ಲೇಖಕರು ಮಧ್ಯತರ ದರ್ಜೆಯವರಿಂದಲೇ ಹುಟ್ಟಿಕೊಳ್ಳುತ್ತಾರೆ. ಸಾಮಾನ್ಯ ಕಾರ್ಮಿಕ, ರೈತ ವರ್ಗಗಳವರಿಂದ ಏಕೆ ಸಾಹಿತಿಗಳು ರೂಪುಗೊಳ್ಳುವುದಿಲ್ಲ ಎನ್ನುವುದು ಕುತೂಹಲಕಾರಿಯಾದ, ಸಂಶೋಧನಾರ್ಹ ಅಂಶವೇ ಹೌದು. ಇದಕ್ಕೆ ಎರಡು ಕಾರಣಗಳನ್ನು ಮುಂದೊಡ್ಡಬಹುದೆಂದನಿಸುತ್ತದೆ. ಒಂದು, ಬರೆಯುವ ಸಾಮಾರ್ಥ್ಯವನ್ನು ಗಳಿಸಿಕೊಳ್ಳಲು ವಿದ್ಯಾರ್ಜನೆ ಸ್ವಲ್ಪಮಟ್ಟಿಗಾದರೂ ಅಗತ್ಯ. ಈ ವಿದ್ಯಾರ್ಜನೆ ನಮ್ಮ ಸಾಮಾಜಿಕ ಕಟ್ಟನಲ್ಲಿ ಸಂಪತ್ಸಂದರ್ಭಗಳಿದ್ದವರಿಗಷ್ಟೇ

ಮಾಸಲಾಗಿದೆ. ಕೂಲಿಗೆಲಸಮಾಡುವ ಕಾರ್ಮಿಕನಿಗೋ, ಹೊಲದಲ್ಲಿ ದುಡಿಯುವ ಬೇಸಾಯಗಾರನಿಗೋ ಅದು ಕೈಗೆಟುಕದ ಹಣ್ಣಾಗಿಯೆ ಉಳಿದುಬಿಡುತ್ತದೆ. ಕಳೆದ ಮೂರು ದಶಕಗಳಿಂದ ಶ್ರೀಲಂಕಾದಲ್ಲಿ ಕಡ್ಡಾಯ ಉಚಿತ ಶಿಕ್ಷಣ ಜಾರಿಯಲ್ಲಿರುವುದರ ಪರಿಣಾಮವಾಗಿ ಶೈಕ್ಷಣಿಕ ಸಂದರ್ಭಗಳು ಇನ್ನಷ್ಟು ಪ್ರಜಾಯುತ್ತುಗೊಂಡಿದ್ದರೂ, ಆರ್ಥಿಕ ಅಡಚಣೆಗಳಿಂದಾಗಿ, ಹಿಂದುಳಿದ ವರ್ಗದವರು ಇಂದಿಗೂ ಉಚ್ಚ ಶಿಕ್ಷಣ ಪಡೆಯುವುದು ವಿರಳವೇ ಆಗಿದೆ. ಕಲೆ, ಸಾಹಿತ್ಯ ಅಭಿಲಾಷೆಯನ್ನು ಹೆಚ್ಚಿಸಲು ಬೇಕಾದ ಪರಿಸರ ಸೌಕರ್ಯಗಳೂ ಇವರಿಗೆ ಕಡಮೆ ಎಂದೇ ಹೇಳಬೇಕು. ಆದರೆ ರೈತಮನೆತನದಲ್ಲಿ ಹುಟ್ಟಿದ್ದರೂ, ಹಣದ ಅನುಕೂಲವಿದ್ದವರು ವಿದ್ಯೆ ಕಲಿತು ಮುಂದಕ್ಕೆ ಬಂದರು. ಇಂತಹವರೇ ಸಾಹಿತಿಗಳಾಗಿಯೂ ಬೆಳೆದರು ಎಂದು ಹೇಳಬಹುದು. ಅದಕಾರಣ, ಶೈಕ್ಷಣಿಕ ಸಂದರ್ಭವೆಂಬ ಸಾಧಕವು ನಮ್ಮ ಲೇಖಕರನ್ನು ವರ್ಗೀಕರಿಸಿ ಸೀಮಾರೇಖೆಗಳನ್ನು ಸೃಷ್ಟಿಸಿತು ಎಂದೇ ಹೇಳಬೇಕು.

ಮತ್ತೆ ನಮ್ಮಲ್ಲಿ, ಕಾರ್ಮಿಕ–ರೈತ ಚಳುವಳಿಗಳು ತತ್ತ್ವಾರ್ಥ ಶುದ್ಧಿಯ–ಪ್ರಬಲ–ಸಂಸ್ಥೆಗಳಾಗಿ ಬೆಳೆಯದೇ ಹೋದದ್ದೂ, ಸಮಾಜದ ಕೆಳಮಟ್ಟದಿಂದ ಲೇಖಕರು ಹುಟ್ಟಿಕೊಳ್ಳದೇ ಹೋದುದಕ್ಕೆ ಕಾರಣವೆನ್ನಬಹುದು. ಏಕೆಂದರೆ, ಯಾವುದೇ ಚಳುವಳಿಯೂ ಸಂಸ್ಥಾರೂಪದಲ್ಲಿ ಬಲಹೊಂದಿ ಬೆಳೆಯುವುದರಿಂದಲೆ ಆ ಚಳುವಳಿಗೆ ತನ್ನದೇ ಆದ ಸಾಹಿತ್ಯ ಆಗತ್ಯ ಎಂಬ ಅಂಶವು ಚೆನ್ನಾಗಿ ಅರಿವಿಗೆ ಬರುತ್ತದೆ. ಉದಾಹರಣೆಗೆ, ಬೊಲ್ಶೆವಿಕ್ ಪಕ್ಷದ ಪ್ರಬಲ ಬೆಳವಣಿಗೆಯ ಆರಂಭದಲ್ಲೆ, ಲೆನಿನ್, ಪಕ್ಷಸಾಹಿತ್ಯದ ಬಗ್ಗೆ ಪ್ರಸ್ತಾಪಿಸಿದ್ದರು. ಇಂತಹದೊಂದು ಪರಿಸ್ಥಿತಿ ಇಲ್ಲದಿದ್ದುದೇ ಸರಿಯಾದ ವಾಮಪಂಥೀಯ ಸಾಹಿತ್ಯದ ಬೆಳವಣಿಗೆಗೆ ಅಡಿಗಲ್ಲಾಗಿಯೂ, ಕೊರತೆಗೆ ಮೂಲಕಾರಣವಾಗಿಯೂ ಇದ್ದುಬಂದಿದೆ. ಈ ಒಂದು ಹಿನ್ನೆಲೆಯಲ್ಲಿ ನಮ್ಮ ಇಂದಿನ ತಮಿಳು ಸಾಹಿತ್ಯದ ವರ್ಗಸ್ವರೂಪವನ್ನು ದೃಷ್ಟಿಸುವುದು ಸಮಂಜಸ. ಏಕೆಂದರೆ, ಬರೆಹಗಾರರ ವರ್ಗವಿಂಗಡಣೆಯೆ ಎಲ್ಲದಕ್ಕೂ ಮೂಲವಾಗಿ, ಮೂಲಕ್ಕೂ ಮೂಲವಾಗಿ ಬೆಳಗುತ್ತಿದೆ ಎನ್ನಬಹುದು,

ಹೀಗೆ ಸಾಹಿತಿಗಳ ವರ್ಗೀಕರಣವು 'ಮಧ್ಯತರವರ್ಗ'ವೆಂಬ ಒಂದು ಸಾಮಾನ್ಯ ಗೆರೆಯೊಳಗೆ ಅಡಕವಾಗಿರುವ ಕಾರಣ, ಈ ಲೇಖಕರು ಓದುಗರಾಗಿ ಆ ವರ್ಗದವರನ್ನೆ ಆರಿಸಿಕೊಳ್ಳುವ ಪರಿಸ್ಥಿತಿ ತರ್ಕರೀತಿಯಾಗಿಯೆ ಉದ್ಭವಿಸುತ್ತದೆ ಎನ್ನಬಹುದು. ಆದರೂ ಬರೆಹಗಾರರ ಸಾಹಿತ್ಯದೃಷ್ಟಿ, ಬುದ್ಧಿಶಕ್ತಿ ಇವುಗಳಿಗನುಗುಣವಾಗಿ, ಈ ಮಧ್ಯತರವರ್ಗದೊಳಗೇ ಅವರುಗಳ ಓದುಗರ ಆರಿಸುವಿಕೆ ಬೇರೆ ಬೇರೆ ಗುಣಾಂಶಗಳನ್ನು ಹೊಂದಿದ್ದಾಗಿದೆ. ಕ. ನಾ. ಸುಬ್ರಮಣಿಯಂ, ಇಂದಿರಾ ಪಾರ್ಥಸಾರಥಿ, ನೀಲ ಪದ್ಮನಾಭನ್, ಅಶೋಕ ಮಿತ್ತಿರನ್ ಮುಂತಾದವರು ಮಧ್ಯತರವರ್ಗದ ಬುದ್ಧಿಜೀವಿಗಳನ್ನು ತಮ್ಮ ಆದರ್ಶ ಓದುಗರಾಗಿ ಕೊಳ್ಳುತ್ತಾರೆ. ಇವರುಗಳು ವಿಶಾಲವ್ಯಾಪ್ತಿಯಿಂದ ಓದುಗ ಬಳಗವನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಬದಲಾಗಿ, ಓದುವವರು ಅತ್ಯಲ್ಪ ಸಂಖ್ಯೆಯವರೇ ಆಗಿದ್ದರೂ, ಉತ್ಸಾಹ, ಆಸಕ್ತಿ, ರಸಿಕತೆಯೊಡನೆ ಓದಿದರೆ ಅದೇ ಬರಹದ

ಸತ್ಫಲವೆಂದು ಈ ಲೇಖಕರು ಬಗೆಯುವರು. ಇಂತಹವರು ಪ್ರಜ್ಞಾಪೂರ್ವಕವಾಗಿ ತಮ್ಮ ಓದುಗರ ಬಗೆಗೆ ನಿರ್ಣಯದೊಂದಿಗೆ ಬರೆಯುವಂತಹವರು ಎನ್ನಬಹುದು. "ಪಾರಂಪರ್ಯವಾಗಿ ಹುಟ್ಟುವ ಓದುಗರಲ್ಲಿ ಯಾವನೋ ಒಬ್ಬನ ಸಲುವಾಗಿ ಬರೆದುಕೊಂಡಿರುವುದಾಗಿಯೆ ಗ್ರಹಿಸಿದ್ದೇನೆ ಎಂದು ಹೇಳಿದ ಕಿರುಗತೆಗಳ ಲೇಖಕ ಪುದುಮೈಪ್ಪಿತ್ತನಿಂದಾದಿಯಾಗಿ, ಇಂದಿನ ನವ್ಯಕವಿಗಳವರೆಗೂ ಈ ಭಾವನೆಯು ಮುಖ್ಯತ್ವ ಪಡೆದಿರುವುದನ್ನು ಕಾಣುತ್ತೇವೆ. ಇವರಿಂದ ಭಿನ್ನವಾದ ಮತ್ತೊಂದು ಬಗೆಯ ಸಾಹಿತಿಗಳೂ ತಮ್ಮ ಓದುಗರನ್ನು ಪೂರ್ವಭಾವಿಯಾಗಿಯೆ ಆರಿಸಿಕೊಂಡು ಬರೆಯುವವರು ಎಂದು ಪರಿಗಣಿಸಬಹುದಾಗಿದೆ. ಈ ತಮಿಳುನಾಡಿನಿಂದ ಹೊರಬೀಳುವ ಕಿರುಸಂಚಿಕೆಗಳಾದ 'ಶಿಖರಂ', 'ಶೆಮ್ಮಲರ್', 'ಮನಿದನ್' ಇವುಗಳಲ್ಲಿ ಬರೆಯುವವರು, ಮತ್ತು ಕು. ಚಿನ್ನಪ್ಪ ಭಾರತಿ, ಎ. ತೆ. ಸುಬ್ಬೈಯನ್, ತಣಿಗೈಚ್ಚೆಲ್ವನ್, ಶ್ರೀಲಂಕಾದಲ್ಲಿ ಜೆ. ಯೋಗನಾಥನ್, ಬೆನಡಿಕ್ಟ್ ಬಾಲನ್, ನೀರ್ವೈ ಪೊನ್ನೈಯನ್, ಎಂ. ಎ. ರಹ್ಮಾನ್ ಇವರುಗಳನ್ನು ಇದಕ್ಕೆ ನಿದರ್ಶನವಾಗಿ ಹೆಸರಿಸಬಹುದು. ಇವರುಗಳ ಸಾಹಿತ್ಯದೃಷ್ಟಿಯು ಮೇಲೆ ನಾವು ಪ್ರಸ್ತಾಪಿಸಿರುವ ಸಣ್ಣ ಪಂಗಡದ ಲೇಖಕರ ದೃಷ್ಟಿಗೆ ಭಿನ್ನವಾದುದು. ಇವರುಗಳು, ಸಾಹಿತ್ಯವು ವಿಶಾಲವ್ಯಾಪಿಯಾದ ಜನಸಾಮಾನ್ಯರ ಸಲುವಾಗಿ ಸೃಷ್ಟಿಗೊಳ್ಳಬೇಕೆಂದು ಬಗೆಯುವವರು. ಇವರುಗಳು, ಕಳೆದುಕೊಳ್ಳಲು ಏನೂ ಇಲ್ಲದ, ದರಿದ್ರಜನರಿಗಾಗಿ ಬರೆಯುವುದಾಗಿ ಹೇಳುವವರು. ಆದರೆ ನಡೆವಳಿಕೆಯಲ್ಲಿ ಇಂತಹ ಧೋರಣೆಯನ್ನು ಸ್ವೀಕರಿಸುವ ವಾಚಕರ ಸಂಖ್ಯೆ ಇನ್ನೂ ಅಲ್ಪವಾಗಿದೆ. ಸೀಮಿತ ಪ್ರಮಾಣದ್ದೆ ಆಗಿರುವುದರಿಂದ, ಈ ಓದುಗರ ಬಳಗವೂ ಸಣ್ಣದೇ ಆಗಿದೆ. ಜೊತೆಗೆ, ಇವರುಗಳ ಉದ್ದೇಶಿಸಿ ಬರೆಯುವಂತಹ ಬೇಸಾಯಗಾರರೂ, ಕಾರ್ಮಿಕರೂ ಓದುಬರಹ ತಿಳಿಯದವರೂ ಸಾಹಿತ್ಯಾಭಿಲಾಷೆ ಇಲ್ಲದವರೂ ಆಗಿರುವರಾದ ಕಾರಣ, ವಿದ್ಯಾವಂತ ಮಧ್ಯತರವರ್ಗದೊಳಗೆ ಪ್ರಗತಿಶೀಲರಾದ ಕೆಲವರನ್ನೆ ವಾಸ್ತವವಾಗಿ ಈ ಲೇಖಕರ ಬರೆಹಗಳು ಆಶ್ರಯಿಸಿ ನಿಂತಿವೆ ಎನ್ನಬಹುದು.

ಮತ್ತೊಂದು ವರ್ಗದವರು ಜನರಂಜನೆಗಾಗಿ ಬರೆಯುವವರು. ಇವರುಗಳು ಮಾರಾಟದ ದೃಷ್ಟಿಯಿಂದ ಸಾಹಿತ್ಯವನ್ನು ನೋಡುವವರು. ತಮಿಳುನಾಡಿನ ಬಹುಸಂಖ್ಯಾತ ಧಾರಾವಾಹಿ ಕಾದಂಬರಿಗಳ ಲೇಖಕರು, ಜನಪ್ರಿಯಸಾಪ್ತಾಹಿಕಗಳಲ್ಲಿ ಕಿರುಗತೆಗಳನ್ನು ಬರೆಯುವವರು, ಹಲವಾರು ಕೃತಕನಾಮಗಳಲ್ಲಿ ಬರೆಯುವವರು ಮುಂತಾದ ಲೇಖಕರನ್ನು ಜನರಂಜಕ ಸಾಹಿತಿಗಳು ಎನ್ನಬಹುದು. ಅಖಿಲನ್, ಆರ್. ವಿ., ಬಿ ಎಂ. ಕಣ್ಣನ್, ಕಿ. ರಾಜೇಂದಿರನ್, ನಾ. ಪಾರ್ಥಸಾರಥಿ, ಮಣಿಯನ್ ಮುಂತಾದವರು ತಮ್ಮ ಸೃಷ್ಟಿಗಳು ಹಲವು ತೆರನಾದ ಓದುಗರನ್ನು ಮುಟ್ಟಬೇಕೆನ್ನುವ ಗುರಿಯೊಂದಿಗೆ ಬರೆಯುತ್ತಾರೆ. "ಒಂದೆರಡು ವರ್ಷಗಳ ಗ್ರಂಥಪರಿಚಯು" ಇದ್ದವರಿಂದಾದಿಯಾಗಿ ಯಾರೂ ಓದಬಹುದಾದಂತಹವಾಗಿಯೂ, ಅಂತಹ ಓದುಗರ ಮನವೊಲಿಸುವಂತಹವಾಗಿಯೂ ತಮ್ಮ ಸೃಷ್ಟಿಗಳು ಇರಬೇಕೆಂದು ಈ ಲೇಖಕರು ಬಯಸುತ್ತಾರೆ. ಈ ಕಾರಣದಿಂದಾಗಿ ಇವರುಗಳ ಓದುಗಬಳಗವನ್ನು ಇಂತಹದೆಂದು ವರ್ಗೀಕರಿಸುವುದು ಅಸಾಧ್ಯ. ಆದರೆ ಹಲವರು

ಓದಿ ಮೆಚ್ಚಬೇಕು ಎಂಬ ಬಯಕೆ ಇವರುಗಳ ಬರೆಹಗಳಲ್ಲಿ ಅಂತರ್ಗತವಾಗಿರುವುದನ್ನು ಗಮನಿಸಬಹುದಾಗಿದೆ.

ಓದುಗರನ್ನು ವರ್ಗೀಕರಿಸಿ ಆರಿಸಿಕೊಂಡುದರ ಪರಿಣಾಮವಾಗಿ ಅವರುಗಳ ಕೃತಿಗಳ ವಿಷಯ, ಅದನ್ನು ಅಳವಡಿಸಿಕೊಳ್ಳುವ ರೀತಿ, ಅದರ ಸ್ವರೂಪ ಎಂಬ ಮೂರು ಅಂಶಗಳಲ್ಲೂ ವ್ಯತ್ಯಾಸಗಳು ಉಂಟಾಗಿರುವುದನ್ನು ಗಮನಿಸಬಹುದು. ಇಲ್ಲಿ ನಾವು ಉಲ್ಲೇಖಿಸಿರುವ ಮೂರು ಬಗೆಯ ಲೇಖಕರ ಪೈಕಿ, ಮೊದಲ ವರ್ಗದವರು ತಮ್ಮ ಕೃತಿಗಳ ವಸ್ತುವಾಗಿ ಆರಿಸಿಕೊಳ್ಳುವ ವಿಷಯಗಳು ಸೀಮಿತಗೊಂಡುವಲ್ಲ. ಯಾವ ವಿಷಯವನ್ನೆ ತೆಗೆದುಕೊಂಡರೂ, ಆಯಾ ವಿಷಯವನ್ನು ಗ್ರಹಿಸುವ ರೀತಿಯಲ್ಲೂ, ಅಳವಡಿಸಿಕೊಳ್ಳುವ ವಿಧದಲ್ಲೂ ಮಾತ್ರ ಬೇರೆಯಾಗುತ್ತಾರೆ. ಉದಾಹರಣೆಗೆ, 'ಪ್ರೇಮ'ವನ್ನೆ ತೆಗೆದುಕೊಂಡರೆ, ಆ ವಿಷಯವನ್ನು ಅಖಿಲನ್ ಅಳವಡಿಸಿಕೊಳ್ಳುವುದಕ್ಕೂ ಜಾನಕಿ ರಾಮನ್ ಅಳವಡಿಸಿಕೊಳ್ಳುವುದಕ್ಕೂ ನಡುವೆ ಎಷ್ಟೋ ವ್ಯತ್ಯಾಸಗಳುಂಟು. ಜಾನಕಿರಾಮನ್ ಅಂತಹವರು ಹೆಚ್ಚಿನ ಕಲಾವಂತಿಕೆ, ಶೋಭೆ, ನಾಜೂಕು ಮುಂತಾದ ಅಂಶಗಳನ್ನು ಬಳಸುತ್ತಾರೆ; ಅಖಿಲನ್ ಅಂತಹವರು ಮನೋರಥೀಯ ಕಲ್ಪನಾವಿಲಾಸ, ಅತಿಶಯೋಕ್ತಿ ಮುಂತಾದ ರೀತಿಗಳನ್ನು ಬಳಸುತ್ತಾರೆ. ಸಂಕ್ಷೇಪವಾಗಿ ಹೇಳುವುದಾದರೆ ಇವರುಗಳನ್ನು ಕಲಾವಾದಿಗಳು ಎಂದು ಕರೆಯಬಹುದು.

ಎರಡನೆಯ ಪಂಗಡದವರು ಜೀವನದಲ್ಲಿ ಸಮಸ್ಯೆಗಳನ್ನು ಎದುರಿಸಿ ಹೋರಾಡುವ ಜನರಿಗಾಗಿಯೂ, ಜನರನ್ನು ಕುರಿತೂ ಬರೆಯುವುದಾಗಿ ಹೇಳಿಕೊಳ್ಳುವವರು. ಈ ಕಾರಣದಿಂದಾಗಿ ಇವರುಗಳು ಬರೆಯಲೆಂದು ಆರಿಸಿಕೊಳ್ಳುವ ಸಮಸ್ಯೆಗಳು ಸಾಮಾಜಿಕ ಕೆಡುಕುಗಳು, ಸಂಕಷ್ಟಗಳು, ಅಡಚಣೆಗಳು ಮುಂತಾದವಾಗಿರುತ್ತವೆ. ಇವರುಗಳ ಬರೆಹಗಳಲ್ಲಿ ಸಾಮಾಜಿಕ ವಾಸ್ತವಿಕತೆಯೊಡನೆ ಹೆಣೆದ ವಿಷಯನಿರೂಪಣೆಯ ಗುಣವನ್ನು ಕಾಣಬಹುದು. ಕು. ಚಿನ್ನಪ್ಪ ಭಾರತಿ ಬರೆದು ಈಚೆಗೆ ಹೊರಬಿದ್ದ 'ದಾಗಂ', ಟಿ. ಶೆಲ್ವರಾಜನ 'ಮಲರುಂ ಶರುಗುಂ', ಗಣೇಶಲಿಂಗನ್, ಕೇ. ಡಾನಿಯಲ್ ಮುಂತಾದವರ ಕಾದಂಬರಿಗಳು—ಇವುಗಳನ್ನು ಇದಕ್ಕೆ ನಿದರ್ಶನಗಳಾಗಿ ಹೆಸರಿಸಬಹುದು. ಇವರುಗಳು ಬಳಸುವ ರೂಪಗಳೂ ಹೆಚ್ಚು ಸಮಸ್ಯಾತ್ಮಕವಾಗಿ ಇಲ್ಲದಿರುವುದನ್ನು ಕಾಣಬಹುದು.

ಆದರೆ, ಯಶಸ್ವೀ ಮಾರಾಟವನ್ನು ಗಮನದಲ್ಲಿಟ್ಟುಕೊಂಡು ಅದರ ಸಲುವಾಗಿ ಹಲವು ತೆರನಾದ ಓದುಗರನ್ನೂ ಆಕರ್ಷಿಸಬೇಕೆಂಬ ಉದ್ದೇಶದೊಂದಿಗೆ ಬರೆಯುವ ಲೇಖಕರ ಕೃತಿಗಳ ಅತಿಶಯೋಕ್ತಿಭರಿತವಾದ, ಓದುಗನನ್ನು ಸ್ವಪ್ನಲೋಕಕ್ಕೆ ಕರೆದೊಯ್ಯುವಂತಹ ಕಲ್ಪನಾಸಾಮರ್ಥ್ಯದಿಂದ ಕೂಡಿದ ಬರೆಹಗಳಾಗಿವೆ. ಘಟನಾಸ್ವಾರಸ್ಯವೂ, ಮುಂದೆ ಏನಾಗುವುದೋ ಎಂಬ ಅಚ್ಚರಿ, ಔತ್ಸುಕ್ಯಗಳನ್ನು ಕೆರಳಿಸುವುದೂ ಇಂತಹ ಸಾಹಿತ್ಯ ಕೃತಿಗಳ ಮೂಲ ಉದ್ದೇಶವಾಗಿರುವುದನ್ನು ನೋಡಬಹುದು.

ಸಾಮಾನ್ಯವಾಗಿ ನಮ್ಮ ತಮಿಳು ಲೇಖಕರು ಒಂದೇ ವರ್ಗದವರಾಗಿದ್ದರೂ, ಆ ವರ್ಗದೊಳಗೂ ಧೋರಣೆಗಳಿಂದ ಬೇರ್ಪಟ್ಟವರು, ಬರೆವಣಿಗೆಯ ದೃಷ್ಟಿಕೋನದಿಂದ

ಬೇರ್ಪಟ್ಟವರು ಎಂದು ಸಣ್ಣ ಪುಟ್ಟ ವ್ಯತ್ಯಾಸಗಳಿಂದ ಕೂಡಿದ ಗುಂಪುಗಳನ್ನು ಗುರುತಿಸ ಬಹುದಾಗಿದೆ. ಸಾಮಾನ್ಯವಾಗಿ ಹೇಳುವುದಾದರೆ, ಈ ಬರೆಹಗಾರರನ್ನು ಜೀವನದಲ್ಲೂ ಜನಸಾಮಾನ್ಯರಲ್ಲೂ ವಿಶ್ವಾಸ ಮೂಡಿಸಿಕೊಂಡು, ಅದರ ಉದ್ಧಾರಕಾಗಿ ಬರೆಯುವುದೇ ಸಾಹಿತ್ಯ ಎಂದು ಸಾರುವ ಒಂದು ತತ್ತ್ವವನ್ನು ಅನುಸರಿಸುವವರು, ಅಂತಹ ತತ್ತ್ವ ವನ್ನು ಅನುಸರಿಸದವರು ಅಥವಾ ಒಪ್ಪದವರು ಎಂದು ಎರಡು ಪಂಗಡಗಳಾಗಿ ವಿಂಗಡಿ ಸಬಹುದು. ಇದನ್ನು ಇನ್ನೂ ವಿವರವಾಗಿಯೂ ವಿಶದವಾಗಿಯೂ ಪರೀಕ್ಷಿಸಿದಲ್ಲಿ ತತ್ತ್ವಾ ನುಯಾಯಿಗಳಾದ ಅಥವಾ committed ಲೇಖಕರು ಎಂದು ನಾವು ಗುರುತಿಸುವ ಪಂಗಡದವರು, ದೇಶದಲ್ಲಿ ಈಗಿರುವ ಸಾಮಾಜಿಕ ಕಟ್ಟು, ರಾಜಕೀಯ ಪದ್ಧತಿ ಇವು ಬದಲಾಗಬೇಕು, ಅಂತಹ ಬದಲಾವಣೆಯನ್ನು ಬೆಳೆಯುತ್ತಿರುವ ವರ್ಗಬೋಧನೆ ಪಡೆದ ಕಾರ್ಮಿಕವರ್ಗವೇ ಜಾರಿಗೆ ತರುತ್ತದೆ ಎನ್ನುವ ಸ್ಪಷ್ಟ ಅಭಿಮತದೊಂದಿಗೂ, ಅಂತಹ ಬದಲಾವಣೆಯನ್ನು ಉಂಟುಮಾಡುವಲ್ಲಿ ಸಾಹಿತಿಗೆ ಒಂದು ಪಾಲುಂಟು, ಆ ಪಾಲನ್ನು ಒದಗಿಸುವ ಸಲುವಾಗಿಯೇ ಅವನು ಬರೆಯಬೇಕು ಎಂಬ ಜ್ಞಾನದಿಂದಲೂ ಬರೆಯು ವವರು ಎನ್ನಬಹುದು. ತಮಿಳು ನಾಡಿನಲ್ಲಿ ಇಂತಹ ಬರೆಹಗಾರರು ಯುವಜನಾಂಗ ದವರೇ ಹೆಚ್ಚಿನವರಾಗಿರುವರು.

ಕು. ಚಿನ್ನಪ್ಪ ಭಾರತಿ, ಎ. ಕೆ. ಸುಬ್ಬೈಯನ್, ಇನ್ಕುಲಾಬ್, ತಣಿಗೈಚ್ಚೆಲ್ವನ್ ಮುಂತಾದವರು ಈಚೆಗೆ ತಾನೆ ಬರೆಯಲು ಶುರುಮಾಡಿದವರು. ಕಳೆದ ವರ್ಷ ಹೊರಬಂದ 'ದಾಗಂ' ಎನ್ನುವ ತನ್ನ ಕಾದಂಬರಿಯ ಮುನ್ನುಡಿಯಲ್ಲಿ ಕು. ಚಿನ್ನಪ್ಪ ಭಾರತಿ ಹೀಗೆಂದು ಹೇಳುವರು :

"ಯುಗಯುಗಗಳಿಂದ ಮನುಷ್ಯಾಭಿಮಾನವನ್ನು ಕಚ್ಚಿಹಿಡಿದು ಬಂದಿರುವ, ಮನುಷ್ಯನ ಸಾಮರ್ಥ್ಯದ ಮೂರ್ತಿಯನ್ನು ಪುಡಿಮಾಡುತ್ತ ಬಂದಿರುವ, ದೋಚುವಿಕೆ, ಸ್ವಾರ್ಥ, ಹೊಟ್ಟೆಕಿಚ್ಚು, ಒಗ್ಗಟ್ಟಿಲ್ಲದಿರುವುದು, ಹೆದರುಬುರುಕತನ, ಮೂಢನಂಬಿಕೆ ಮುಂತಾದ ವುಗಳಲ್ಲಿ ಸಿಲುಕಿ ನರಳುವ ಈ ಜನಸಾಮಾನ್ಯರೇ ಕ್ರಾಂತಿಕಾರಿಯಾದ, ವರ್ಗಭೇದ ವಿಲ್ಲದ ಸಮಾಜವನ್ನು ಸೃಷ್ಟಿಸಲಿರುವ ಕಥಾನಾಯಕರುಗಳು. ಅವರುಗಳಲ್ಲಿ ಜೀವನದ ಮೇಲೆ ನಂಬುಗೆಯನ್ನು, ಅವಿಶ್ರಾಂತವಾಗಿ ಹೋರಾಡುವ ತ್ಯಾಗಮನೋಭಾವವನ್ನೂ ಹುಟ್ಟಿಸುವ ಕರ್ತವ್ಯ ಪ್ರಧಾನವಾಗಿ ಸಾಹಿತಿಯದೇ ಆಗಿದೆ."

ಇದೇ ರೀತಿಯ ಒಂದು ಹೇಳಿಕೆಯನ್ನು, ತತ್ತ್ವ ಪ್ರಕಟಣೆಯನ್ನು ಎ. ಕೆ. ಸುಬ್ಬೈಯನ 'ಮುರ್ಟೈಯಿಡ' ಕವನ ಸಂಗ್ರಹದಲ್ಲೂ ಕಾಣಬಹುದು. ದುಡಿಯುವ ಜನಸಾಮಾನ್ಯ ರಿಗಾಗಿಯೇ ತನ್ನ ಕವನಗಳು ಎಂದು ಹೇಳುವ ಸುಬ್ಬೈಯನ್ ಹೀಗೆಂದು ಪ್ರಕಟಣೆ ಮಾಡುವರು :

"....ನಾನು ಅವರುಗಳ ಬಗ್ಗೆ ಯೋಚಿಸುತ್ತೇನೆ....
ಅವರುಗಳಿಗಾಗಿ ಕಂಬನಿಗರೆಯುತ್ತೇನೆ
ಅವರುಗಳಿಗಾಗಿ ಬರೆಯುತ್ತೇನೆ.

ನನ್ನ ಬರೆಹಗಳಿಗೆ ಒಂದು ಛಾಯೆ, ಒಂದು ಲಕ್ಷ್ಯ, ಒಂದು ವರ್ಗೈಕ್ಯ ಇವಿಷ್ಟೂ ಉಂಟು.

ಹೇಗೆ ಹೋರಾಟವು ಜೀವನದ ಜೀವವಾಗಿರುತ್ತದೊ ....ಹೇಗೆ ರಾಜಕೀಯವು ನಾಗರಿಕತೆಯ ಆವಶ್ಯಕತೆಯಾಗಿರುತ್ತದೋ—ಹಾಗೆಯೇ ಪ್ರಚಾರವು ಸಾಹಿತ್ಯದ ಲಕ್ಷ್ಯವಾಗಿ ಇರುತ್ತದೆ. ಆದರೆ ತಮಿಳುನಾಡಿನ ಶ್ರೇಷ್ಠ ಸಾಹಿತಿಗಳೆಂದು ಪರಿಗಣಿಸಲ್ಪಡುವ ಹಿರಿಯ ಲೇಖಕರಲ್ಲಿ ಸಾಮಾನ್ಯವಾಗಿ ಈ ತತ್ತ್ವೈಕ್ಯತೆ ಇಲ್ಲವೆಂಬುದನ್ನು ಒಪ್ಪಬಹುದು. ಆರಂಭದಲ್ಲಿ ವಿಂದನ್, ಅನಂತರ ಜಯಕಾಂತನ್ ಮೊದಲಾದವರು ಕಷ್ಟಜೀವೀ ದಲಿತ ಜನರಿಗಾಗಿ ಬರೆಯಬೇಕೆಂಬ ಆಕಾಂಕ್ಷೆಯನ್ನು ಕೈ ಹಿಡಿದಿದ್ದರೂ, ಅದು ನಾವು ಮೇಲೆ ಪ್ರಸ್ತಾಪಿಸಿದ ಯುವಜನಾಂಗದವರ ತತ್ತ್ವೈಕ್ಯತೆಯ ಹಾಗೆ ವೈವಿಧ್ಯವುಳ್ಳದ್ದಾಗಿ ಇರಲಿಲ್ಲ. ಜಯಕಾಂತನ್ ಹಿಂದೊಮ್ಮೆ ಕೈಬರಹದ ಪತ್ರಿಕೆಯಲ್ಲಿ ತನ್ನ ಬರವಣಿಗೆಯ ಉದ್ದೇಶ ಏನೆಂಬುದನ್ನು ಕುರಿತು ಈ ರೀತಿ ಬರೆದಿದ್ದರು :

"ಲೇಖಕನು ಸೋಮಾರಿಯೋ ಬೇಜವಾಬ್ದಾರನೋ ಅಲ್ಲ. ಅವನು ಲೌಕಿಕ ಸುಖಗಳನ್ನು ಅಥವಾ ಅಲ್ಪ ಸೌಕರ್ಯಗಳನ್ನು ಅನುಭವಿಸಿಕೊಂಡು ತನಗೆ ತಾನೇ ತನ್ನ ಮನಸ್ಸಿನ ಚಾಪಲ್ಯಕ್ಕಾಗಿ ಬಾಳುವ ಮನೋಮೈಥುನಗಾರನಲ್ಲ. ರಾಜಕೀಯವಾದಿಯೂ, ವಿಜ್ಞಾನಿಯೂ, ಕಲೆಗಾರನೂ ಈ ಜಗತ್ತನ್ನು ನಿರ್ಮಿಸುತ್ತಾರೆ. ಇದರ ಗುಣವನ್ನು ಬದಲಾಯಿಸಿ ಬೆಳೆಸುತ್ತಾರೆ. ಅವರುಗಳ ಈ ಹೋರಾಟದಲ್ಲಿ ನಾನು ನನ್ನ ಕರ್ತವ್ಯವನ್ನು ಮಾಡುತ್ತೇನೆ. ಇದನ್ನು ಒಪ್ಪದಿದ್ದರೆ ನಾನು ಬಾಳುವ ಕಾಲಕ್ಕೂ ನನ್ನ ಒಡಹುಟ್ಟಿದವರಿಗೂ ನಾನು ದ್ರೋಹವೆಸಗಿದವನಾಗುವೆನು."

ಜಯಕಾಂತನ ಈ ಹೇಳಿಕೆಯನ್ನು ಮೇಲೆ ನಾವು ಉದ್ಧರಿಸಿರುವ ಮುನ್ನುಡಿಗಳೊಂದಿಗೆ ಹೋಲಿಸಿ ನೋಡುವಾಗ ಭಿನ್ನಾಭಿಪ್ರಾಯವು ಸ್ಪಷ್ಟವಾಗಿಯೆ ಗೋಚರವಾಗುತ್ತದೆಯಲ್ಲವೆ ? ಕು. ಅಳಗಿರಿಸ್ವಾಮಿಯೂ—ಮನುಷ್ಯತ್ವವೂ, ಪರಿಣಾಮಾಕಾಂಕ್ಷೆಯೂ, ಸ್ವತಂತ್ರ ಜೀವನವೂ ಮಾತ್ರ ತನ್ನನ್ನು ಬರೆಯಲು ಪ್ರೇರೇಪಿಸಿದುದಾಗಿ, ತನ್ನ ಬರೆಹಕ್ಕೆ ಮೂಲವಾಗಿರುವುದಾಗಿ ಹೇಳುವರು. ಒಟ್ಟನಲ್ಲಿ ಮಾನವ ಸ್ನೇಹದ ಆಧಾರದ ಮೇಲೆ ಈ ಬಹುಸಂಖ್ಯಾಕ ಲೇಖಕರು ತಮ್ಮ ಬರವಣಿಗೆಯನ್ನು ಅರ್ಪಿಸುವುದಾಗಿ ಹೇಳಿರುವರಾದರೂ, ದೃಢವಾದ ಒಂದು ತತ್ತ್ವವನ್ನು ಆಶ್ರಯಿಸುವ ಗುಣವನ್ನು ಮೇಲೆ ಪ್ರಸ್ತಾಪಿಸಲಾಗಿರುವ ಯುವಜನಾಂಗದವರಲ್ಲೆ ನಾವು ಉತ್ಕೃಷ್ಟಪ್ರಮಾಣದಲ್ಲಿ ಕಾಣುವುದು ಸಾಧ್ಯವೆನಿಸಿದೆ. ಆದರೆ ಶ್ರೀಲಂಕಾದ ತಮಿಳು ಸಾಹಿತ್ಯವನ್ನೂ ಲೇಖಕರನ್ನೂ ಸಂಬಂಧಿಸಿದ ಮಟ್ಟಿಗೆ ಈ ಪರಿಸ್ಥಿತಿಯು ವ್ಯತ್ಯಸ್ತಗೊಂಡಿದೆ ಎನ್ನುವುದನ್ನು ನಾವು ಒತ್ತಿ ಹೇಳಲೇಬೇಕು. ಶ್ರೀಲಂಕಾದ ಅಗ್ರಗಣ್ಯ ಲೇಖಕರಾಗಿಯೂ, ಪ್ರಬಲ ಬರಹಗಾರರಾಗಿಯೂ ಮೆರೆಯುವವರು ತತ್ತ್ವೈಕ್ಯವುಳ್ಳ ಸಾಹಿತಿಗಳೇ. ಇಳಂಕೀರನ್, ಕೇ. ಡಾನಿಯಲ್, ನೀರ್ವೈ ಪೊನ್ನೈಯನ್, ಜೆ. ಯೋಗನಾಥನ್, ಬೆನಡಿಕ್ಟ್ ಬಾಲನ್, ಎಂ. ವಿ. ರಹ್ಮಾನ್, ಪಿ. ಸುತಂತಿರ ರಾಜಾ, ಪಿ. ಮೌನಗುರು ಮುಂತಾದವರು ಕೆಲಕೆಲವು ಭೇದ

ಗಳಿಂದ ಕೂಡಿದವರಿದ್ದರೂ ಮೂಲತಃ ವಾಮಪಂಥೀಯ ಲೇಖಕರೇ. ಇವರಲ್ಲಿ ಯುವ ಜನಾಂಗದವರು, ಹಿರಿಯ ತಲೆಮಾರಿನವರು ಎಲ್ಲರೂ ಸೇರಿರುವರು. ಶ್ರೀಲಂಕಾದ ಪ್ರಧಾನ ಸಾಹಿತ್ಯಚಲನವು ವಾಮಪಂಥೀಯ ಚಳುವಳಿಯೊಡನೆ ಸಂಪರ್ಕ ಬೆಳಿಸಿಕೊಂಡು ಬೆಳೆದದ್ದನ್ನು ಇದಕ್ಕೆ ಮುಖ್ಯಕಾರಣವಾಗಿ ಇಟ್ಟುಕೊಳ್ಳಬಹುದು. ತಮಿಳುನಾಡಿಗೂ ಶ್ರೀಲಂಕೆಗೂ ನಡುವಿನ ವ್ಯತ್ಯಾಸವು ಇಲ್ಲಿ ಪ್ರಾಸಂಗಿಕವಾಗಿಯಷ್ಟೇ ಪ್ರಸ್ತಾಪಿಸಲ್ಪಟ್ಟದ್ದರೂ ಅದು ಮುಖ್ಯವಾದ ವ್ಯತ್ಯಾಸವೇನೋ ಹೌದು.

ಸಮಾಜದ ಬದಲಾವಣೆಯಲ್ಲಿ ಲೇಖಕನ ಪಾತ್ರವನ್ನು ವಹಿಸಿಕೊಂಡು ಸಮಾಜಸ್ವಾಮ್ಯ ಪದ್ಧತಿಯನ್ನು ಜಾರಿಗೆ ತರುವ ಸಲುವಾಗಿ ಬರೆಯುತ್ತಿದ್ದೇವೆ ಎಂಬ ದೃಢ ನಿರ್ಧಾರದೊಡನೆ ಬರೆಯುವ ಈ ತತ್ತ್ವೈಕ್ಯವುಳ್ಳ ಲೇಖಕರ ಕೃತಿಗಳಲ್ಲಿ, ಅವರುಗಳ ತತ್ತ್ವಪ್ರಕಟಣೆ ಹೇಗೆ ಪ್ರತಿಬಿಂಬಿತವಾಗಿದೆ ಎಂದು ನೋಡುವುದು ಫಲಕಾರಿಯದೀತು. ಇದರಲ್ಲಿ ಎರಡು ವಿಷಯಗಳನ್ನು ಗಮನಿಸಬಹುದೆಂದು ನಮಗನಿಸುತ್ತದೆ. ಒಂದು, ಅವರುಗಳ ಕೃತಿಗಳ ವಸ್ತುವಿನ ಪ್ರಶ್ನೆಗೆ ಸಂಬಂಧಿಸಿದ್ದು. ಎರಡನೆಯದಾಗಿ, ಆ ವಸ್ತುವನ್ನು ಅಳವಡಿಸಿಕೊಳ್ಳುವ ರೀತಿಯೂ ಸ್ವರೂಪವೂ. ಉದಾಹರಣೆಗೆ : ಒಂದೆರಡು ಕೃತಿಗಳನ್ನು ಪರೀಕ್ಷಿಸುವುದು ಲೇಸು. 'ದಾಗಂ,' 'ಮಲರುಂ ಶರುಗು', 'ತೇನೀರ್' ಮೊದಲಾದ ತಮಿಳುನಾಡಿನ ಕಾದಂಬರಿಗಳೂ ಸರಿ, 'ಪಂಚಮರ್,' 'ಪೋರ್ಕ್ಕೋಲಂ', 'ಶೊಂದಕ್ಕಾರನ್', 'ಮಜ್ಜಿಕ್ಕರಿ' ಮುಂತಾದ ಶ್ರೀಲಂಕಾದ ತಮಿಳುಕಾದಂಬರಿಗಳೂ ಸರಿ, ಸಂತಸ್ತ ಜನರ ಜೀವನಸಮಸ್ಯೆಯನ್ನು ವರ್ಗದೃಷ್ಟಿಕೋನದಿಂದ ಪರಿಶೀಲಿಸುವಂತಹವಾಗಿಯೂ, ನಿರೂಪಿಸುವಂತಹವಾಗಿಯೂ ಇವೆ. ತಂಜಾವೂರಿನ ರೈತರುಗಳ ಹೋರಾಟದ ಬೆಳವಣಿಗೆಯನ್ನು 'ದಾಗಂ' ಕಾದಂಬರಿಯೂ, ಶ್ರೀಲಂಕಾದ ಉತ್ತರ ಭಾಗದಲ್ಲಿ ಸಂತ್ರಸ್ತ ಕೀಳು ಜಾತಿ ಜನರ ಹೋರಾಟವನ್ನು 'ಪಂಚಮರ್' ಕಾದಂಬರಿಯೂ ಶ್ರೀಲಂಕಾದ ಮಲೆನಾಡಿನ ತೋಟದಾಳುಗಳ ದುಃಖದ ಜೀವನವನ್ನೂ, ಆ ಬಾಳಿನಡಿ ಅವರು ನಡೆಸುವ ಹೋರಾಟವನ್ನೂ 'ಶೊಂದಕ್ಕಾರ'ನೂ ಎತ್ತಿ ತೋರಿಸುತ್ತವೆ, ನಯವಾಗಿ ಚಿತ್ರಿಸುತ್ತವೆ. ಇವು ಕ್ರಾಂತಿಕಾರಕ ಕಾದಂಬರಿಗಳು.

ಆದರೆ ಈ ಕಾದಂಬರಿ ಬರುವ ಪಾತ್ರಗಳಲ್ಲಿ ಪ್ರಗತಿಪರತೆಯನ್ನೊಳಗೊಂಡ ಪಾತ್ರಗಳಾಗಿ ಬರುವವುಗಳಲ್ಲಿ ಸಾಮಾನ್ಯವಾದ ಒಂದು ಅಂಶವನ್ನು ಗಮನಿಸಬಹುದು. ಕ್ರಾಂತಿಕಾರಕವಾದ ಮತ್ತು ಹೋರಾಟದ ಮನೋಭಾವದಿಂದ ಪ್ರಗತಿಪಥದಲ್ಲಿ ಸಾಗುತ್ತಿರುವಂತೆ ಚಿತ್ರಿಸಲ್ಪಟ್ಟವರುಗಳು ಬಹುಪಾಲು ಒಂದು ರೀತಿ ವಿದ್ಯೆ ಕಲಿತ ಮೇಲು ಜಾತಿಗೆ ಸೇರಿದವರುಗಳಾಗಿರುವುದು ಗಮನಾರ್ಹವಾದ ಸ್ವಾರಸ್ಯಕರ ಅಂಶ ; ಮತ್ತು ಸಾಮಾನ್ಯವಾಗಿ ಈ ಪಾತ್ರಗಳು ಅಪರಿಪೂರ್ಣವಾಗಿದ್ದು ಬೆಳವಣಿಗೆ ಹೊಂದದ, ಇದ್ದಕ್ಕಿದ್ದಂತೆ ಪ್ರಗತಿಪರತೆಯನ್ನು ಹೊಂದಿದ ಪಾತ್ರಗಳಾಗಿಯೇ ಪರಿಚಯಮಾಡಿಕೊಡಲ್ಪಡುತ್ತವೆ.

'ದಾಗಂ' ನಲ್ಲಿ ಬರುವ ಗೆಳೆಯರ ಸಂಬಂಧವನ್ನು ತಂಜಾವೂರಿನವರಾಗಿ ಕಾಣಲು

ಸಾಧ್ಯವಿಲ್ಲವಾಗಿದೆ. ಅದೇ ರೀತಿ 'ಸಂಬಂಧಂ'ನ ಅಭಿಪ್ರಾಯಗಳಿಂದಲೂ, ನಡವಳಿಕೆ ಗಳಿಂದಲೂ ತೀವ್ರತರ ಕ್ರಾಂತಿಕಾರಕ ಮನೋಭಾವವನ್ನೊಳಗೊಂಡವನಾಗಿ ಬೆಳೆದು ಹೋರಾಟಕ್ಕೆ ನಾಯಕತ್ವ ವಹಿಸುವ ಕಂದನ್, ಗೌಂಡರ್ ಎಂಬ ಜಾಗೃತ ಮೇಲು ಜಾತಿಯ ಕುಟುಂಬಕ್ಕೆ ಸೇರಿದವನು. ಅಂತೆಯೇ 'ಪಂಚಮರ್'ನಲ್ಲಿ ಬರುವ ಎಯ್ಯಾ ಣ್ಣನ್ ಎಂಬ ಪಾತ್ರವೂ ದಲಿತವರ್ಗದ ಜನರಿಗಾಗಿಯೂ, ಬಡಜನರಿಗಾಗಿಯೂ ಮಾತಾಡಿದರೂ, ಹೋರಾಡಿದರೂ ಅದು ಮೇಲುಜಾತಿಗೆ ಸೇರಿದ ಪಾತ್ರವೇ. ಅದೇ ರೀತಿ ಜೆ. ಗಣೇಶಲಿಂಗಂ ಅವರ 'ಪೋರ್‌ಕ್ಕೋಲಂ'ನಲ್ಲಿ ಬರುವ ಕಂದಸ್ವಾಮಿ ಎಂಬ ಪಾತ್ರ ವನ್ನು ಉದಾಹರಿಸಬಹುದು. ನಾವು ಉದಾಹರಣೆಗೆ ತೆಗೆದುಕೊಂಡಂತೆ ಕಾದಂಬರಿ ಗಳಲ್ಲಿ ಬೆಸೆಯುವುದು ಸಾಧ್ಯವಿಲ್ಲವಾದರೂ ಇಂದಿರಾ–ಪಾರ್ಥಸಾರಥಿ ಅವರ 'ಕುರುದಿಪ್ಪು' ನಲ್' ಕೂಡ ಪ್ರಗತಿಪರ ಪಾತ್ರದ ಅಚ್ಚಿಳಿಸುವಷ್ಟರಮಟ್ಟಿಗೆ ಈ ಗುಣವನ್ನೇ ಒಳ ಗೊಂಡುದಾಗಿದೆ. ಅದರಲ್ಲಿ ಬರುವ ಗೋಪಾಲ್ ಕಾಲೇಜಿನಲ್ಲಿ ಸಮತವಾದವನ್ನೋದಿ ಕೊಂಡುಬಂದು ಕ್ರಾಂತಿಯ ಮಾತಾಡುವ ಒಬ್ಬನಾಗಿಯೇ ಕಾಣಲ್ಪಡುತ್ತಾನೆ.

ಎಲ್ಲ ಕಾದಂಬರಿ ಒಂದೇ ರೀತಿ ಇಲ್ಲವಾದರೂ—ಅವುಗಳಲ್ಲಿ ಕಂಡುಬರುವ ಸಾಮಾನ್ಯಗುಣ ಮಾತ್ರ ಈ ಶೋಷಣೆಯನ್ನು ಕುರಿತದ್ದೇ ಆಗಿರುತ್ತದೆ. ನಾವು ಮೇಲೆ ಕಂಡ ಈ 'committed writerಗಳು ಪಾತ್ರಗಳನ್ನು ಈ ರೀತಿಯಾಗಿ ಸೃಷ್ಟಿಸಿದ ಕಾರಣವಾದರೂ ಏನು ? ಲೇಖಕರ ವರ್ಗವ್ಯವಸ್ಥೆಯೇ ಇದಕ್ಕೆ ಕಾರಣವಾಗಿರ ಬೇಕು. ಕಾದಂಬರಿ ಮತ್ತು ಸಣ್ಣ ಕಥೆಗಳಲ್ಲಿ ಬರುವ ಪ್ರಗತಿಪರ ಪಾತ್ರಗಳನ್ನು ತಮ್ಮ ಕುಂಚದಲ್ಲಿ ಮೂಡಿಸಲೆತ್ನಿಸುವಾಗ ಈ ಸ್ಥಿತಿ ಬಂದೊದಗುತ್ತದೆಯೆನ್ನಬಹುದು. ಅಷ್ಟೇ ಅಲ್ಲ; ಈ ಲೇಖಕರುಗಳಲ್ಲನೇಕರು ಪ್ರಗತಿಯೊಡನೆ ಏಗಲಾರದಿರುವುದು ಮತ್ತು ರಾಜಕೀಯ ಚಳುವಳಿಯ ಪರವಾಗಿಲ್ಲದಿರುವುದೂ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಮತ್ತೊಂದು ವಿಷಯವನ್ನು ಈ ಸಂದರ್ಭದಲ್ಲಿ ಪ್ರಸ್ತಾಪಿಸುವುದೊಳ್ಳೆಯದು. ಅದೇ ನೆಂದರೆ : ನಮ್ಮ ಬಹಳಷ್ಟುಲೇಖಕರುಗಳು ಬಾಳಿನ ಕಗ್ಗತ್ತಲಿನಿಂದ ಕೂಡಿದ ಭಾಗಗಳನ್ನು ಎತ್ತಿ ತೋರಿಸುತ್ತೇವೆ, ಈ ದುಃಖಜೀವಿಗಳಿಗಾಗಿ ಬರೆಯುತ್ತೇವೆ ಎಂದು ಉದ್ದೇಶಿಸು ವಾಗ ಅವರುಗಳ ಬರವಣಿಗೆಯಲ್ಲಿ ಬಹುಮಟ್ಟಿಗೆ ಕೇವಲ ಮಾನವೀಯ ದೃಷ್ಟಿ ಮತ್ತು ಸುಧಾರಿತ ಮನೋಭಾವವೇ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಪುದುಮೈಪ್ಪಿತ್ತನ್ ಅವರಿಂದ ಹಿಡಿದು ಈ ಬಗೆಯ ಇಂದಿನ ಲೇಖಕರುಗಳ ವರೆಗೆ ವಿವಿಧಸ್ವರೂಪಗಳಲ್ಲಿ ಇದೇ ಮುಂದುವರಿದುಕೊಂಡು ಬರುತ್ತಿರುವುದನ್ನು ಕಾಣಬಹುದು. ಈ ಕಾರಣದಿಂದಾಗಿ ಇವರುಗಳ ಬರೆಹಗಳು ಸಮಾಜದಲ್ಲಿ ಅನುಕಂಪೆಗೊಳಗಾದ ಪಾತ್ರಗಳಾಗಿರುವವರುಗಳ ಕಥೆಯಾಗಿಯೇ ಕಾಣಲ್ಪಡುತ್ತವೆ. ಬಾಲ ವಿಧವೆಯರು, ಫುಟ್‌ಪಾತ್ ವಾಸಿಗಳು, ಭಿಕ್ಷುಕರು, ಅವಿವಾಹಿತ ಸ್ತ್ರೀಯರು, ಬಡ ಗುಮಾಸ್ತರು, ವೇಶ್ಯೆಯರು, ಉಪಾಧ್ಯಾಯ ರುಗಳು ಎಂದು ಮುಂತಾಗಿ ಕನಿಕರಕ್ಕೆ ಪಾತ್ರರಾದ, ಕನಿಕರವನ್ನುಂಟುಮಾಡುವ ಜನರೇ ಈ ಕಥೆಗಳ ಪಾತ್ರಗಳು. ಈ ಪಾತ್ರಗಳ ದುಃಸ್ಥಿತಿಯನ್ನು ತಮ್ಮ ಲೇಖನಶೈಲಿ

ಯಿಂದ ನೈಜವಾಗಿ ಫೋಟೋ ಹಿಡಿದು ಓದುಗನ ಮನಸ್ಸಿನಲ್ಲಿ ಒಂದು ರೀತಿಯ ಪಶ್ಚಾತ್ತಾಪದ ಭಾವನನ್ನೇರ್ಪಡಿಸುತ್ತಾರೆ ಈ ಲೇಖಕರು. ಬಹುವಾಗಿ ಸಣ್ಣ ಕಥೆಗಳೇ ಈ ರೀತಿ ಹೆಣೆಯಲ್ಪಡುತ್ತವೆ. ಪುದುಮೈಪಿತ್ತನ್, ವಿಂದನ್ ಮುಂತಾದವರ ಸಣ್ಣಕಥೆಗಳ ಸಾಮಾನ್ಯಗುಣ ಇದು. ಜಯಕಾಂತನ್ ಅವರ ಆರಂಭಕಾಲದ ಕೃತಿಗಳಲ್ಲೂ ಈ ಅಂಶವನ್ನು ಕಾಣಬಹುದು. ಇದನ್ನೇ ಹೋಲುವ ವಿಂದನ್ ಅವರ ಕಿರುಗಥಾ ಸಂಕಲನವೊಂದಕ್ಕೆ ಮುನ್ನುಡಿ ಬರೆದ ಕಲ್ಕಿ ಅವರು "ವಿಂದನ್ ಅವರ ಕಥೆಗಳನ್ನೋದುವುದೆಂದರೆ ನನಗೆ ಯಾವಾಗಲೂ ಮನಸಿನಲ್ಲಿ ಭಯವುಂಟಾಗುತ್ತದೆ. ಓದಿದರೆ ಮನಸ್ಸಿನಲ್ಲಿ ಯಾವ ವಿಧವಾದ ಸಂಕಟಗಳುಂಟಾಗುವವೋ, ಯಾವ ರೀತಿಯ ವೇದನೆಗಳಿಗೆ ಒಳಗಾಗಬೇಕೋ ಎಂಬ ಭಯ!" ಎಂದಿದ್ದಾರೆ.

ಹೀಗೆ, ಓದಿದರೆ ಮನಸ್ಸನ್ನು ಯಾವ ರೀತಿ ಕದಡಿಬಿಡುವುದೋ ಎಂಬ ಭಯದಿಂದಲೇ ಪುಸ್ತಕವನ್ನು ಹಿಡಿಯುವಂತೆ ಮಾಡುವ ಒಂದು ಪ್ರಜ್ಞೆಯನ್ನು ಇವರುಗಳು ತಮ್ಮ ಲೇಖನದ ಬಲದಿಂದ ಏರ್ಪಡಿಸಿದರು. ಈ ಜಳ್ಳು ಪಾತ್ರಗಳನ್ನು ಲೇಖಕರುಗಳು ತಮ್ಮ ಕಥಾಪಾತ್ರವನ್ನಾಗಿ ತೆಗೆದುಕೊಳ್ಳುವಲ್ಲಿ ಒಂದು ಬಗೆಯ ಸಂಧಿಗ್ಧತೆ ಕಂಡುಬರುತ್ತದೆ. ಈ ಬಗೆಯ ಪಾತ್ರಗಳು ಯಾವ ಗುಂಪಿಗೂ ಸೇರದ, ಯಾವ ಪಂಥವನ್ನೂ ಪ್ರತಿನಿಧಿಸಲಾಗದ ಪಾತ್ರಗಳು. ಅಂದ ಮೇಲೆ ಇವು ಯಾವ ಮಟ್ಟದಲ್ಲಿ ಲೇಖಕನ ತತ್ತ್ವಪ್ರತಿಪಾದನೆಯನ್ನು ಪ್ರತಿಬಿಂಬಿಸಲು ಸಾಧ್ಯ ? ಇದು ಆಳವಾಗಿ ಆಲೋಚಿಸಬೇಕಾದ ಪ್ರಶ್ನೆ.

'ಕಿರುಗತೆ'ಯೆಂಬ ಮಾಧ್ಯಮವೂ ಸಹ ಈ ರೀತಿಯ ಪಾತ್ರಗಳನ್ನು ಚಿತ್ರಿಸುವುದಕ್ಕೆ ಆಸ್ಪದ ನೀಡುತ್ತದೆಯೆನ್ನಬಹುದು. 'ದಲಿತರ ಧ್ವನಿಯಾಗಿಯೇ ಕಿರುಗತೆ ಇರುವುದು' ಎಂಬುದಕ್ಕಾಗಿ ಹೆಣೆದ ಅದರ ಉದ್ದೇಶಿತ ಗುಣವಾಗಿಯೂ ಈ ನಿಲುವು ಬಂದು ಬೆರೆಯುತ್ತದೆ. ಏನೇ ಆದರೂ ಈ ಜಳ್ಳು ಪಾತ್ರಗಳನ್ನು ಚಿತ್ರಿಸುವುದೂ, ಅವುಗಳನ್ನು ಮರುಕ ಹುಟ್ಟುವಂತೆ ತೋರಿಸುವುದೂ ಆಲೋಚಿತ ದೃಷ್ಟಿಕೋನಕ್ಕೆ ಸೀಮಿತವಾಗಿ ವಿರೋಧಾಭಾಸಕ್ಕೆ ಎಡೆ ಮಾಡಿಕೊಡುತ್ತದೆ. ಆಧುನಿಕ ತಮಿಳುಸಾಹಿತ್ಯವು ಸರಿಯಾದ ರೀತಿ ಮುನ್ನಡೆದು ಮುತುವರ್ಜಿಯಿಂದ ಬೆಳೆಸಲ್ಪಡದಿರುವುದೇ ಈ ಬಗೆಯ ದಾರಿತಪ್ಪುವಿಕೆಗಳಿಗೆ ಮೂಲಕಾರಣ ಎಂದು ಹೇಳಬಹುದು.

ಈ ನಿಬಂಧದ ಆರಂಭದಲ್ಲಿ ಲೇಖಕರುಗಳ ವರ್ಗಸ್ಥಿತಿಯನ್ನು ಕುರಿತು ನೋಡಿದಾಗ ಸಾಮಾನ್ಯವಾಗಿ ಅವರುಗಳು ಮಧ್ಯಮ ವರ್ಗಕ್ಕೆ ಸೇರಿದವರುಗಳೆಂದು ಗುರುತಿಸಿದೆವು. ಮತ್ತು ಸಾಮಾನ್ಯವಾದ ಈ ವರ್ಗಭೇದದೊಳಗಿನ ವಿದ್ಯೆಯಿಂದಲೂ, ಆರ್ಥಿಕ ಪರಿಸ್ಥಿತಿಯಿಂದಲೂ ಕಂಡುಬರುವ ವ್ಯತ್ಯಾಸಗಳನ್ನು ಕುರಿತೂ ಗಮನಿಸಿದೆವು. ಇವುಗಳೊಡನೆ ಸೇರಿಸಿದ ಇನ್ನೊಂದು ಅಂಶ—ಅದೇ ಲೇಖಕರುಗಳ ಜಾತಿಗೂ ಅವರುಗಳ ಬರವಣಿಗೆಯ ವರ್ಗಗುಣಾಂಶಕ್ಕೂ ನಡುವೆ ಇರುವ ಅಂತರವನ್ನು ಗಮನಿಸಬೇಕಾದುದು. ತಮಿಳುನಾಡಿನ ಲೇಖಕರನ್ನು ಸಾಮಾನ್ಯವಾಗಿ ಜಾತಿಯ ಆಧಾರದ ಮೇಲೆ ಎರಡು ಭಾಗವಾಗಿ ವಿಂಗಡಿಸಬಹುದು. ಬ್ರಾಹ್ಮಣರು, ಬ್ರಾಹ್ಮಣರಲ್ಲದವರು ಎಂಬ ವಿಭಾಗದಲ್ಲಿ ಇವರೆಲ್ಲರನ್ನು

ಅಡಕಮಾಡಿಬಿಡಬಹುದು. ಕ. ನ. ಸುಬ್ರಮಣಿಯಮ್, ತಿ. ಜಾನಕಿರಾಮನ್, ಸಿ. ಸು. ಚೆಲ್ಲಪ್ಪಾ, ಲಾ. ಚ. ರಾಮಾಮೃತಂ, ಚಿದಂಬರ ಸುಬ್ರಮಣಿಯನ್ ಮುಂತಾದವರು ಮೊದಲ ವಿಭಾಗಕ್ಕೆ ಸೇರುತ್ತಾರೆ. ಇವರುಗಳ ಬರವಣಿಗೆಯಲ್ಲಿ ಕಲೆಯನ್ನು ಕುರಿತ ಪರಿಶುದ್ಧತಾವಾದವು ಕಾಣಲ್ಪಡುತ್ತದೆ. ಇವರುಗಳನ್ನುಳಿದು ಬ್ರಾಹ್ಮಣರಲ್ಲದ ಲೇಖಕರನ್ನು ಮತ್ತೆ ಎರಡು ಬಗೆಯಾಗಿ ವಿಭಾಗಿಸಬಹುದು. ಪ್ರಬಲವಾದ ಜನರಂಜಕ ಲೇಖಕರು ಒಂದು ಭಾಗದವರು. ಇವರುಗಳು ನಾವು ಮುಂಚೆ ಕಂಡಂತೆ ಮಾರಾಟಕ್ಕೆ ಮನಸ್ಸಗೊಟ್ಟು ತಾವು ಬರೆಯಲು ತೆಗೆದುಕೊಳ್ಳುವ ವಿಷಯಕ್ಕೆ ಯಾವುದೇ ವಿಧವಾದ ಎಲ್ಲೆಗಟ್ಟನ್ನೂ ಹಾಕಿಕೊಳ್ಳದೆ ಬರೆಯುವರು. ಉಳಿದವರು ಸಾಮಾಜಿಕಪ್ರಜ್ಞೆಯಿಂದ ಬರೆಯುವವರು. ನಾವು ಮುಂಚೆ ಕಂಡ ತತ್ತ್ವಸಮರ್ಥನೆಯೊಡನೆ ಬರೆಯುವ ಲೇಖಕರನ್ನು ಈ ವಿಭಾಗಕ್ಕೆ ಸೇರಿಸಬಹುದು.

ಆದರೆ ಲಂಕಾ (ಸಿಂಹಳ)ದಲ್ಲೇ ತಮಿಳು ನಾಡಿಗಿಂತಲೂ ಮಿಗಿಲಾಗಿ ಜಾತಿಗೂ ಬರೆಹದ ವರ್ಗವ್ಯವಸ್ಥೆಗೂ ಇರುವ ಸಾಮ್ಯ ಸ್ಪಷ್ಟವಾಗಿ ಗೋಚರಿಸುತ್ತದೆ. ಲಂಕಾದಲ್ಲಿ ಪ್ರಧಾನ ಪ್ರಬಲ ಲೇಖಕರಾಗಿರುವವರುಗಳು ಮೇಲುಜಾತಿಗೆ ಸೇರದವರುಗಳೇ. ಈ ಲೇಖಕರುಗಳು ಮೇಲುಜಾತಿಯವರಲ್ಲವಾದ್ದರಿಂದ ಆರ್ಥಿಕ ಪರಿಸ್ಥಿತಿಯಲ್ಲಿಯೂ ಅವರುಗಳು ಕೆಳಮಟ್ಟಕ್ಕೆ ಸೇರಿದವರುಗಳೇ ಆಗಿದ್ದಾರೆ. ಈ ಪರಿಸ್ಥಿತಿ ಅವರುಗಳನ್ನು ಸಾಮಾಜಿಕ ಪ್ರಜ್ಞೆಯ ಆಧಾರದ ಮೇಲೆ ಒಂದು ರೀತಿ ಪ್ರಗತಿಪರ ಸಾಹಿತ್ಯಿಕ ತತ್ತ್ವಗಳನ್ನು ಮುಂದಿಡಲು ಪ್ರಚೋದಿಸುತ್ತದಯೆನ್ನಬಹುದು. ಹೀಗಾಗಿ ಇವರೊಳಗೆ ಎಸ್. ಪೊನ್ನುದುರೈ ಅವರಂಥಾ ಹುಲಿನಡಿಗೆಯವರೂ ಇಲ್ಲದಿಲ್ಲವೆಂಬುದನ್ನು ನೆನಪಿಡಬೇಕು. ಲೆನಿನ್ ಮಹಾಶಯನು ಪದೇ ಪದೇ ಒತ್ತಿ ಹೇಳಿದಂತೆ ಶ್ರಮಜೀವಿಗಳ ವರ್ಗಕ್ಕೆ ಸೇರಿದ ಪ್ರತಿಯೊಬ್ಬರೂ ಸ್ವಾಭಾವಿಕವಾಗಿಯೇ ತಮ್ಮ ವರ್ಗಪ್ರಜ್ಞೆಯನ್ನು, ಸ್ಥೈರ್ಯವನ್ನು ಹೊಂದಿಬಿಡುವುದಿಲ್ಲ. ಹೋರಾಟದ ಮತ್ತು ಚಳುವಳಿಯ ಮಾರ್ಗದರ್ಶನ ಅತ್ಯಗತ್ಯ. ತಮಿಳುನಾಡಿನಲ್ಲಾಗಲೀ ಶ್ರೀಲಂಕಾದಲ್ಲಾಗಲೀ ಶೋಷಿತ ಸಾಮಾಜಿಕ ವ್ಯವಸ್ಥೆಗಳಿಂದ ಲೇಖನಪ್ರಪಂಚವನ್ನು ಪ್ರವೇಶಿಸಿದ ಕೆಲವರು ದಿನಗಳೆದಂತೆ ಮೇಲ್‌ಜಾತಿ ಪ್ರೇಮಿಗಳಾಗಿ ಪರಿವರ್ತಿತರಾಗುವುದಕ್ಕೆ ಇದೇ ಪ್ರಧಾನಕಾರಣವೆನ್ನಬಹುದು.

ಇದರ ಜೊತೆಗೇ ಇನ್ನೊಂದು ವಿಷಯವನ್ನು ಇಲ್ಲಿ ಪ್ರಸ್ತಾಪಿಸುವುದಗತ್ಯ. ಲೇಖಕರುಗಳ ವರ್ಗವ್ಯವಸ್ಥೆಗೂ, ಮತವು ಬರೆಹದ ಮೇಲೆ ಬೀರುವ ಪ್ರಭಾವಕ್ಕೂ ಮತ್ತು ಬರೆಹದ ವಸ್ತುಸ್ಥಿತಿಗೂ ನಡುವೆ ಇರುವ ಸಂಬಂಧ ಸಂಶೋಧನಾರ್ಹ. ಪ್ರಗತಿಶೀಲ ಬರೆಹಗಾರರೆನಿಸಿಕೊಳ್ಳಲ್ಪಡುವವರುಗಳ ಮತ್ತು ಸಾಮಾಜಿಕ ಪ್ರಜ್ಞಾತತ್ತ್ವ ಪ್ರತಿಪಾದಕರುಗಳ ಬರೆಹಗಳಲ್ಲಿ ಧರ್ಮದ ಪ್ರಭಾವ ಬಹುಪಾಲು ಇಲ್ಲವೆಂದೇ ಹೇಳಿಬಿಡಬಹುದು. ಅವರುಗಳ ಬರೆಹದ ಸಾಮಾನ್ಯ ಲಕ್ಷಣವನ್ನು ಕುರಿತು ಹೇಳುವುದಾದರೆ—ಜನಜೀವನದಲ್ಲಿ ಮತವು ಯಾವ ಬಗೆಯ ಪಾತ್ರವಹಿಸುವುದೋ ಅದನ್ನೇ ಹಿನ್ನೆಲೆಯಲ್ಲಿ ನಿಂತು ನೋಡುತ್ತಾರೆ; ತಮ್ಮ ಬರೆಹದಲ್ಲಿ ಅದಕ್ಕೇ ಎಡೆಕೊಡುತ್ತಾರೆ. ಆದರೆ ಬರೆಹವನ್ನು ಒಂದು

ಯೋಗವಾಗಿಯೂ, ತಪಸ್ಸಾಗಿಯೂ ಅಭ್ಯಸಿಸುವುದಾಗಿ ಹೇಳಿಕೊಳ್ಳುವ ಲೇಖಕರುಗಳಲ್ಲಿ ಅವರ ಧಾರ್ಮಿಕ ನಂಬುಗೆಗಳು, ಧಾರ್ಮಿಕ ತತ್ತ್ವಗಳು ಮುಂತಾದವು ಹೆಚ್ಚು ಪ್ರಭಾವ ಬೀರಿರುವುದನ್ನು ಕಾಣಬಹುದು. ಇಲ್ಲಿ ಮತ್ತೆ ಕಿ. ನಾ. ಸುಬ್ರಮಣಿಯನ್, ಪಿ. ಜಾನಕಿ ರಾಮನ್, ನ. ಪಿಚ್ಚಮೂರ್ತಿ, ಮೌನಿ, ವಾ. ಸ. ರಾಮಾಮೃತಂ ಎಂಬ ಅದೇ ಹೆಸರುಗಳನ್ನೇ ಹೇಳಬೇಕಾಗಿದೆ. ಸಂಸ್ಕೃತವಿದ್ಯಾಭ್ಯಾಸ, ವೇದಾಂಗ ತತ್ತ್ವಜ್ಞಾನ, ಇವುಗಳ ದೆಸೆಯಿಂದ ಇವರುಗಳ ಕಾದಂಬರಿಗಳಲ್ಲೋ, ಕಿರುಗತಗಳಲ್ಲೋ ದೈವ ನಂಬಿಕೆ, ವೇದಾಂತವಿಚಾರ ಮುಂತಾದುವು ಶೃತಿಯಾಗಿ ಬೆರೆಯುವುದನ್ನು ಕಾಣ ಬಹುದು. ಇದಕ್ಕೆ ಕ. ನಾ. ಸು. ಅವರ 'ಪೊಯ್‌ತ್ತೇವು' ಕಾದಂಬರಿಯಲ್ಲಿ ಬರುವ ಶರ್ಮ, ತಿ. ಜಾನಕಿರಾಮನ್ ಅವರ 'ಅನ್ಬೇ ಆರಮುದೇ—ಆನಂದಸಾಮಿ, ಅಮ್ಮಾ ವಂದಾಳ್-ಅಪ್ಪು ಮುಂತಾದ ಪಾತ್ರಗಳು ಯೋಗ್ಯ ಉದಾಹರಣೆಗಳು. ಚಿದಂಬರ ಸುಬ್ರಮಣಿಯನ್ನರ 'ಇದಯನಾದಂ' ಉಪನ್ಯಾಸದಲ್ಲಿ ಬರುವ ಕಥಾನಾಯಕ ಕೃಷ್ಣ ಭಾಗ ವತರಲ್ಲೂ ಈ ಗುಣವನ್ನು ಗುರುತಿಸಬಹುದು. ಬೀದಿಯಲ್ಲಿ ಆಟವಾಡಿ ಅಲೆದಾಡಿದ ಕಿಟ್ಟು ಎಂಬ ಸಾಮಾನ್ಯ ಹುಡುಗನ ಪಾತ್ರ ಒಂದು ಆತ್ಮದ ಯಾತ್ರೆಯೇ—'ಇದಯ ನಾದಂ' ಕಾದಂಬರಿಯ ತಿರುಳೂ ಸಹ ಅದೇ ಆಗಿದೆ. ಇದೇ ರೀತಿ ಅವರ ಇನ್ನೊಂದು ಕಾದಂಬರಿಯ 'ನಾಗಮಣಿ'ಯಲ್ಲೂ ಈ ತತ್ತ್ವವಿಚಾರವನ್ನು ಕಾಣಬಹುದು. ಅಲ್ಲಿ ಸಾತ್ತನ್ ಎಂಬ ಪಾತ್ರವು ಆ ಗುಣವನ್ನು ಪ್ರತಿಬಿಂಬಿಸುತ್ತದೆ. ಆರಂಭಕಾಲದಲ್ಲಿ ಜಯ ಕಾಂತನ್ ಅವರ ಕೆಲವು ಪಾತ್ರಗಳೂ 'ಆತ್ಮವಿಚಾರ' ಶೈಲಿಯಲ್ಲಿ ಚಿತ್ರಿಸಲ್ಪಟ್ಟವೆ.

ಈ ಧಾರ್ಮಿಕ ತತ್ತ್ವಪ್ರತಿಪಾದನೆ ಕೇವಲ ಪಾತ್ರಗಳಲ್ಲಿ ಮಾತ್ರವಲ್ಲ; ಇಡೀ ಕೃತಿ ಯನ್ನೇ ಈ ಉದ್ದೇಶಕ್ಕಾಗಿ ರಚಿಸಿರುವುದನ್ನು ಕಾಣಬಹುದು. ವಿಧಿ, ಕರ್ಮಫಲ, ದೈವಲೀಲೆ ಮುಂತಾದ ಸಿದ್ಧಾಂತಗಳು ಈ ಕೃತಿಗೆ ಹಿನ್ನೆಲೆಯಾಗಿ ಬಂದು ಬೆರೆತುಬಿಡು ತ್ತವೆ. ಸೊರಗ ಹೇಳುವ ಭಾರತೀಯ ಧಾರ್ಮಿಕ ಸಿದ್ಧಾಂತದ ಕರ್ಮಸಿದ್ಧಾಂತ ಚಿಂತ ನೆಯ ವಿಷಯವೂ, ತತ್ತ್ವದ ಪ್ರಭಾವವೂ ಇಲ್ಲಿ 'ಗಾಂಧಿವಾದ' ಎಂಬ ಹೆಸರಿನಲ್ಲಿ ಆಧುನಿಕ ರಾಜಕೀಯ—ಸಾಮಾಜಿಕ ತತ್ತ್ವದೃಷ್ಟಿಯಾಗಿಯೂ ಕೆಲಲೇಖಕರಿಂದ ಚಿತ್ರಿಸಲ್ಪಟ್ಟಿದೆ. ನಾ. ಪಾರ್ಥಸಾರಥಿ, ಅಖಿಲನ್, ರಾ. ಸು. ನಲ್ಲ ಪೆರುಮಾಳ್, ಎಂ. ಎಸ್. ಕಲ್ಯಾಣ ಸುಂದರಂರವರಂಥವರ ಉಪನ್ಯಾಸಗಳಲ್ಲಿ ಈ ಶೈಲಿಯನ್ನು ತೀಕ್ಷ್ಣವಾಗಿ ಕಾಣಬಹುದು. 'ವಳ್ಳುವಂ' ಅನ್ನು (ತಿರುಕ್ಕುರಳಿನ ತತ್ತ್ವಗಳನ್ನು) ಒಪ್ಪಿಕೊಂಡ ದಿವಂಗತ ಮು. ವರದ ರಾಜನಾರ್ ಅವರನ್ನೂ ಒಂದು ವಿಧದಲ್ಲಿ ಈ ವಿಭಾಗದೊಳಗೆ ಐಕ್ಯಗೊಳಿಸಬಹುದು. ಮತ್ತು ಆಧುನಿಕ ಕಾಲದಲ್ಲಿ ಬೆಳೆದುಬರುತ್ತಿರುವ ಕೈಗಾರಿಕೆ, ಯಂತ್ರಮಯತೆ, ನಗರ ಬಾಳ್ವೆ ಮುಂತಾದವನ್ನು ಳಿದು ಬಡ ಗ್ರಾಮಜೀವನವನ್ನೇ ಹೊಗಳುವ ಒಂದು ಸಂಪ್ರದಾ ಯವನ್ನೂ ಶಂಕರರಾಮ್, ಕು. ವೆಂಕಟರಮಣಿ ಮುಂತಾದವರಲ್ಲಿ ಹೆಚ್ಚಾಗಿ ಕಾಣ ಬಹುದು. ಶಂಕರರಾಯರ 'ಮಣ್ಣಾಸೈ', ವೆಂಕಟರಮಣಿಯವರ 'ಮುರುಗನ್ ಓರ್ ಉಳವನ್' ಮುಂತಾದ ಕಾದಂಬರಿಗಳಲ್ಲಿ ಕಂಡುಬರುವ ಈ ರೀತಿಯ ಶೈಲಿಯೂ ಒಂದು

ರೀತಿ ಹಿಂದೃಷ್ಟಿ ಎನ್ನಬಹುದು.

ಈ ಬಗೆಯ ಧಾರ್ಮಿಕ ತತ್ತ್ವಪ್ರತಿಪಾದನೆಯನ್ನಲ್ಲದೆ ಆಧುನಿಕ ಕಾಲದಲ್ಲಿ ಕಾಣಿಸಿಕೊಂಡ ಕೆಲ ತತ್ತ್ವಗಳ ಪ್ರತಿಪಾದನೆಯನ್ನೂ ಇಂದಿನ ತಮಿಳು ಸಾಹಿತ್ಯದಲ್ಲಿ ಕಾಣಬಹುದು. 'Existentialism' ಎಂಬ ಅಸ್ತಿತ್ವವಾದದಂಥ ಸಿದ್ಧಾಂತಗಳು ನಮ್ಮ ಕೆಲ ಲೇಖಕರನ್ನು ಬಾಧಿಸಿರುವುದನ್ನು ಉಲ್ಲೇಖಿಸುವುದಗತ್ಯ. ಅಸ್ತಿತ್ವವಾದವು ಮಧ್ಯಮವರ್ಗ ಕ್ಕೊಪ್ಪುವ ಒಂದು ಸಿದ್ಧಾಂತ. ಅನುಭವಗಳು ಮತ್ತು ನಡೆಯುವ ಘಟನೆಗಳನ್ನು ಮಾತ್ರವೇ ಪ್ರಧಾನವಾಗಿಟ್ಟುಕೊಂಡು ಜೀವನವನ್ನು ಬೆಳಸುವ ತತ್ತ್ವ ಇದು. ಇಂದಿರಾಪಾರ್ಥ ಸಾರಥಿ, ನೀಲ ಪದ್ಮನಾಥನ್, ಸುಂದರ ರಾಮಸಾಮಿ ಮುಂತಾದ ಕೆಲವರ ಕೃತಿಗಳನ್ನು ನಗರಜೀವನವನ್ನು ಚಿತ್ರಿಸುವ ಅಸ್ತಿತ್ವವಾದವೆಂದೇ ಹೇಳಬೇಕಾಗುತ್ತದೆ. ಇಂದಿರಾ ಪಾರ್ಥಸಾರಥಿಯವರ 'ತಂದಿರ ಭೂಮಿ'ಯಲ್ಲಿ ಬರುವ ಒಂದು ಪಾತ್ರವಾದ ಕಸ್ತೂರಿ 'ಸುಂದಂದಿರ ಭೂಮಿ'ಯ ಕಥಾನಾಯಕ ಮುಕುಂದನ್ ಇವರಿಬ್ಬರೂ ಈ ಸಿದ್ಧಾಂತದ ಜ್ವಲಂತ ಪ್ರತಿ ನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಕಾಲೇಜು ಉಪನ್ಯಾಸಕರಾದ ಇಂದಿರಾ ಪಾರ್ಥಸಾರಥಿಯರ ದೆಹಲಿಯ ಮಧ್ಯಮವರ್ಗದ ಜೀವನವೇ ಈ ಸಿದ್ಧಾಂತದ ಸ್ವೀಕಾರಕ್ಕೆ ಆಧಾರವೆನ್ನಬಹುದು.

ಇನ್ನೊಂದು ಸ್ವಾರಸ್ಯಕರವಾದ ಅಂಶವನ್ನು ಇಲ್ಲಿ ಉಲ್ಲೇಖಿಸುವುದಗತ್ಯ. ಲೇಖಕರುಗಳು ಯಾವ ವರ್ಗಕ್ಕೆ ಸೇರಿದವರುಗಳು ಮತ್ತು ಯಾವ ವರ್ಗದಮೇಲೆ ಅನುಕಂಪ ಗೊಂಡಿದ್ದಾರೆ ಎಂಬುದರ ಬಗೆಗೂ ಅವರುಗಳ ಕೃತಿಗಳಲ್ಲಿ....ಭಾಷಾಶೈಲಿ, ಸಂಭಾಷಣೆಗಳು, ವರ್ಣನೆಗಳು ಮುಂತಾದವು ವ್ಯತ್ಯಾಸ ಹೊಂದುವುದನ್ನು ಗಮನಿಸಬಹುದು. ಉದಾಹರಣೆಗೆ : ಲಾ ಚ. ರಾಮಾಮೃತಂ, ಜಾನಕಿರಾಮನ್‌ರಂಥವರ ಸಾಹಿತ್ಯಗಳಲ್ಲಿ— ನಾಜೂಕು, ಮೆರಗು, ನವ್ಯತೆ ಇವನ್ನು ಹೆಚ್ಚಾಗಿ ಬೆರಸುತ್ತಾರೆ. ಮೂಲತಃ ಕಲಾಪಕ್ಷ ಪಾತಿಗಳಾದ ಇವರುಗಳು ವಸ್ತುವನ್ನು ಬಿಟ್ಟು ಸ್ವರೂಪ ಮತ್ತು ಸಂಭಾಷಣೆಗಳಿಗೇ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಗ್ರಾಮೀಣ ನೈಜ ಸೌಂದರ್ಯವನ್ನು ಕುರಿತ ವಿಸ್ತಾರವಾದ ವರ್ಣನೆ ಅವರ ಕಾದಂಬರಿಗಳಲ್ಲಿ ಮುಖ್ಯಪಾತ್ರ ವಹಿಸುತ್ತದೆ. ಅದೇ ರೀತಿ ಪಾತ್ರಗಳನ್ನು ಪರಿಚಯಪಡಿಸುವಾಗ ಅದರಲ್ಲಿ ಒಂದು ಲಾಘವವೂ ನಾವಿನ್ಯವೂ ಸ್ಫುರಿಸುವುದನ್ನು ಗಮನಿಸಬಹುದು. ಜಾನಕಿರಾಮನ್ನರ ಮತ್ತು ಲಾ. ಚ. ರಾವ್ ಅವರ ಸ್ತ್ರೀಪಾತ್ರಗಳು ಅಸಾಧಾರಣವಾದವುಗಳಾಗಿಯೂ ಸುಂದರವಾದವುಗಳಾಗಿಯೂ, ಕಾಣಿಸಿಕೊಳ್ಳುತ್ತವೆ. ಜಾನಕಿರಾಮನ್ನರ 'ಅಮ್ಮಾವಂದಾಳ್' ಕಾದಂಬರಿಯಲ್ಲಿ ಬರುವ ಇಂದು, ಅಲಂಗಾರತ್ತಮ್ಮಾಳ್, ಲಾ. ಚ. ರಾವ್ ಅವರ ಕಿರುಗತೆಯೊಂದರಲ್ಲಿ ಬರುವ ಪೂರ್ವಾ ಮುಂತಾದ ಪಾತ್ರಗಳನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಇದಲ್ಲದೆ ನಮ್ಮ ಲೇಖಕರುಗಳ ಕೃತಿಗಳನ್ನೂ ಅವರು ಹೊರಸೂಸುವ ತತ್ತ್ವಗಳನ್ನೂ ಚಾಲ್ತಿಯಲ್ಲಿರುವ ಸಾಮಾಜಿಕ ವ್ಯವಸ್ಥೆಗಳು ಬಂಧಿಸಿಬಿಡುತ್ತವೆ. ಈ ಕಾರ್ಯ ಎರಡು ರೀತಿಯಲ್ಲಿ ನಡೆಯುತ್ತದೆ. ಒಂದು, ಪ್ರಚಾರ ಸಂಬಂಧವಾದುದು ; ಮತ್ತೊಂದು—ಅದು

ಸಾಹಿತ್ಯದ ವಸ್ತುವಿನಲ್ಲೆ ಏರ್ಪಡಿಸಿಕೊಳ್ಳುವ ಮಾರ್ಪಾಟಿಗೆ ಸಂಬಂಧಿಸಿದ್ದು.

ಚಾಲ್ತಿಯಲ್ಲಿರುವ ರಾಜಕೀಯ, ಸಾಮಾಜಿಕ ಸಂಸ್ಥೆಗಳ ಧೋರಣೆಯನ್ನು ವಿಮರ್ಶಿಸಿ ಬರೆಯುವಾಗ ಅದನ್ನು ಪ್ರಚುರಪಡಿಸುವಲ್ಲಿ ಅನೇಕ ಅಡಚಣೆಗಳುಂಟಾಗುತ್ತವೆ. ಪ್ರಗತಿ ಪರ ಚಳುವಳಿಗಳಿಗೆ ಹೆಚ್ಚಿನ ಪ್ರಚಾರವಿಲ್ಲದ ಕಾರಣ ಲೇಖಕರುಗಳು ತಮ್ಮ ಅಭಿಪ್ರಾಯ ಗಳನ್ನು ಅಭಿವ್ಯಕ್ತಗೊಳಿಸುವ ರೀತಿಯಲ್ಲಿ ಎಚ್ಚರದಿಂದಿರಬೇಕಾದ ಅಗತ್ಯವುಂಟಾಗುತ್ತದೆ. ಅದೇ ಕಾಲಕ್ಕೆ ಪುಸ್ತಕಗಳನ್ನು ಯಾವ ಪ್ರಕಟನಾಲಯದ ಮೂಲಕ ಹೊರ ತರ ಬೇಕಾಗಿದೆಯೋ ಅದರ ಅವಶ್ಯಕತೆಗಳನ್ನು ಗಮನಿಸಿ ತಮ್ಮ ಅಭಿಪ್ರಾಯಗಳನ್ನು ಮಾರ್ಪಡಿಸಿಕೊಳ್ಳಬೇಕಾದ, ಮೃದುಗೊಳಿಸಬೇಕಾದ ನಿರ್ಬಂಧವೂ ಉಂಟಾಗುತ್ತದ ಯೆನ್ನಬಹುದು.

ಇದೇ ವೇಳೆಗೆ ಆಧುನಿಕ ತಮಿಳು ಸಾಹಿತ್ಯದಲ್ಲಿ ಈ ಸಾಮಾಜಿಕ ರಾಜಕೀಯ ವ್ಯವಸ್ಥೆಗೆ ಪೂರಕವಾಗಿಯೂ ವಿರೋಧವಾಗಿಯೂ ಕಂಡುಬರುವ ಮತ್ತೆರಡು ನಡಾವಳಿ ಗಳನ್ನು ಗಮನಿಸಬಹುದು.

ನಾವು ಮೇಲೆ ಪ್ರಸ್ತಾಪಿಸಿದ ತತ್ತ್ವಪ್ರತಿಪಾದಕ ಲೇಖರುಗಳು ಚಾಲ್ತಿಯಲ್ಲಿರುವ ಈ ಸಾಮಾಜಿಕ ರಾಜಕೀಯ ವ್ಯವಸ್ಥೆಗಳನ್ನು ನಿರಾಕರಿಸುವವರುಗಳು. ನವಯುಗವನ್ನು ಕಾಣಲು ತವಕಿಸುವ ಅಪೇಕ್ಷೆಯನ್ನು ಅವರುಗಳ ಬರೆಹಗಳ ಗಮನಾರ್ಹ ಅಂಶಗಳಾಗಿ ಕಾಣಬಹುದು.

ಇದಕ್ಕೆ ವಿರುದ್ಧವಾಗಿ ಈ ರಾಜಕೀಯ ಸಾಮಾಜಿಕ ವಸ್ತುಸ್ಥಿತಿಗಳನ್ನು ಬೆಂಬಲಿಸಿ ನಿಂತು ಅವುಗಳ ಊದುಗೊಳಲಾಗಿ ತಮ್ಮ ಸಾಹಿತ್ಯಿಕ ಕೃತಿಗಳನ್ನು ರಚಿಸುವವರುಗಳೂ ಇದ್ದಾರೆ. ಇದಕ್ಕೆ ರಾ. ಸು. ನಲ್ಲಪೆರುಮಾಳ್, ನಾ. ಪಾರ್ಥಸಾರಥಿ ಇವರುಗಳನ್ನು ಸಮಕಾಲೀನ ಬರೆಹಗಾರರುಗಳಲ್ಲಿ ಪ್ರಮುಖ ನಿದರ್ಶನಗಳಾಗಿ ಉಲ್ಲೇಖಿಸಬಹುದು. ಆಧುನಿಕ ತಮಿಳು ಸಾಹಿತ್ಯವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅದರ ಮೂಲಾ ಧಾರವಾಗಿ ಈ ಎರಡು ಪ್ರಜ್ಞೆಗಳೇ ವಿವಿಧ ಕೃತಿಮಾಧ್ಯಮಗಳಲ್ಲೂ ಗುಣಧರ್ಮಗಳಲ್ಲೂ ಬೆರೆತುಬಂದಿದೆಯೆಂದು ಹೇಳಬೇಕಾಗುತ್ತದೆ.

ಕೊನೆಯದಾಗಿ ಆಧುನಿಕ ತಮಿಳು ಮಹಿಳಾಲೇಖಕರುಗಳ ಬಗ್ಗೆ ಕೊಂಚ ವಿವೇಚಿಸ ಬೇಕಾದುದಗತ್ಯ. ಚೂಡಾಮಣಿ, ರಾಜಂಕೃಷ್ಣನ್, ಅನುತ್ತಮಾ, ಲಕ್ಷ್ಮಿ, ಕೋಕಿಲಂ ಸುಬ್ಬಯ್ಯ, ಜ್ಯೋತಿರ್ಲತಾ ಗಿರಿಜಾ, ನಾ. ಬಾಲೇಶ್ವರಿ ಎಂದು ಬೆರಳಿಟ್ಟು ಎಣಿಸಬಹುದಾದ ವರುಗಳೇ ಮಹಿಳಾ ಲೇಖಕರುಗಳಾಗಿ ನಮ್ಮ ಮಧ್ಯೆ ಕಂಡುಬರುತ್ತದೆ. ಇವರೆಲ್ಲರೂ ಸುಖಮಯವೂ, ಸುಸಜ್ಜಿತವೂ ಆದ ಮಧ್ಯಮವರ್ಗಕ್ಕೆ ಸೇರಿದವರುಗಳು. ವಿದ್ಯೆಯ ಅರಿವುಳ್ಳ ಕೌಟುಂಬಿಕ ಹಿನ್ನೆಲೆಯುಳ್ಳವರುಗಳು. ಇವರುಗಳ ಕೃತಿಗಳಲ್ಲಿ ಸಾಮಾನ್ಯವಾಗಿ ಮಧ್ಯಮವರ್ಗದ ಮಹಿಳೆಯರ ಸಮಸ್ಯೆಗಳೂ, ಮಾನಸಿಕ ಅನಿಸಿಕೆಗಳೇ ಎಡೆಪಡೆದಿರು ತ್ತವೆ. ಆದರೆ ಅವು ಕೇವಲ ಭಾವನೆಗಳ ಕೊಂಡಿಗಳಾಗಿಯೂ, ಕಾಲ್ಪನಿಕ ಘಟನೆಗಳಾ ಗಿಯೂ ಸ್ವರೂಪ ತಾಳಿಬಿಡುತ್ತವೆಯೇ ವಿನಾ ಯಥಾರ್ಥಸ್ಥಿತಿಯನ್ನು ನಿರೂಪಿಸುವವು

ಗಳಾಗಿ ಅಲ್ಲ. ರಾಜಂಕೃಷ್ಣನ್ ಅವರ 'ಕುರಿಂಜಿತ್ತೇನ್', ಕೋಕಿಲಂ ಸುಬ್ಬಯ್ಯ ಅವರ 'ದೂರತ್ತು ಪ್ಪಚ್ಚೈ' ಅಂಥಾ ಒಂದೆರಡು ಉಪನ್ಯಾಸಗಳನ್ನುಳಿದು ಮಿಕ್ಕವು ಈ ಗುಂಪಿನಲ್ಲಿ ಐಕ್ಯವಾಗುತ್ತವೆ. ಮಹಿಳಾ ಲೇಖಕರುಗಳ ಜೀವನಮಟ್ಟವೂ, ವರ್ಗತಳಪಾಯವೂ, ಸಾಮಾಜಿಕ ಸಂಪ್ರದಾಯಗಳೂ, ಧಾರ್ಮಿಕ ನಂಬುಗೆಗಳೂ ಅವರು ಈ ಎಲ್ಲೆಯನ್ನು ಮೀರದಿರಲು ಕಾರಣಗಳೆನ್ನಬಹುದು. ಇಲ್ಲಿ ಮತ್ತೊಂದು ವಿಷಯವನ್ನು ಪ್ರಸ್ತಾಪಿಸಬಹುದೆಂದು ಭಾವಿಸುತ್ತೇವೆ.

ಸಾಮಾನ್ಯವಾಗಿ ಪುರುಷಲೇಖಕರುಗಳು ಮಧ್ಯಮವರ್ಗದಿಂದ ಬಂದವರುಗಳಾದರೂ ಸಮಾಜದ ಕೆಳಮಟ್ಟದಿಂದ ಬಂದು ಸಾಹಿತ್ಯಲೋಕವನ್ನು ಪ್ರವೇಶಿಸಿ ಸಂಕೋಚಪ್ರವೃತ್ತಿಯನ್ನು ಬಿಟ್ಟು ಪ್ರಕಾಶಿಸುವವರುಗಳನ್ನೂ ಕಾಣುತ್ತೇವೆ. ಈ ಗುಣ ನಮ್ಮ ಯಾವ ಮಹಿಳಾ ಲೇಖಕಿಯರಲ್ಲೂ ಕಾಣಲ್ಪಡುವುದಿಲ್ಲವೆಂಬುದು ಗಮನಾರ್ಹ. ಜ್ಯೋತಿರ್ಲತಾ ಗಿರಿಶಾ ಅವರು ವ್ಯಕ್ತಪಡಿಸಿರುವಂತೆ ನಮ್ಮ ಮಹಿಳಾಲೇಖಕರುಗಳ ಕಥೆಗಳಲ್ಲಿ "ಬಹುಮಟ್ಟಿಗೆ ಸ್ತ್ರೀಯರ ಮೂಲಭೂತ ಸಮಸ್ಯೆಗಳು ಪ್ರತಿಧ್ವನಿಸುವುದೇ ಇಲ್ಲ. ಎಲ್ಲೋ ಕೆಲವರು ಮಹಿಳೆಯರ ಸಮಸ್ಯೆಗಳನ್ನು ಕೊಂಚಮಟ್ಟಿಗೆ ಸ್ಪರ್ಧಿಸುವರಾದರೂ ಕೊನೆಯಲ್ಲಿ ಸಾಂಪ್ರದಾಯಿಕ ಪದ್ಧತಿಗಳನ್ನೂ ನಡವಳಿಕೆಗಳನ್ನೂ ನ್ಯಾಯದ ಕಟ್ಟುಪಾಡಿಗೆ ಒಳಪಡಿಸಿ ತಮ್ಮ ತೀರ್ಮಾನಗಳನ್ನು ಕೊಟ್ಟುಬಿಡುತ್ತಾರೆ." ಈ ರೀತಿ ಹೇಳುವ ಜ್ಯೋತಿರ್ಲತಾ ಗಿರಿಶಾ ಅವರು ತಮ್ಮ ಕಥೆಗಳಲ್ಲಿ ಸ್ತ್ರೀಯರ ಗುಲಾಮತನ, ಕೀಳುಪರಿಸ್ಥಿತಿ, ಅವರುಗಳ ಮನೋವ್ಯಥೆ—ಮುಂತಾದುವನ್ನು ಯಶಸ್ವಿಯಾಗಿ ಚಿತ್ರಿಸುತ್ತಾರೆ. ಹೀಗಾಗಿ ಅವರ ಸ್ತ್ರೀಪಾತ್ರಗಳು ಒಂದೊಂದೂ ಚೈತನ್ಯಪೂರ್ಣವಾಗಿಯೇ ಇವೆ.

ಜ್ಯೋತಿರ್ಲತಾ ಗಿರಿಶಾ ಅವರು ಸ್ತ್ರೀಯರಲ್ಲಿ ಒಂದು ಪಂಗಡದವರ ಒಂದಿಷ್ಟು ಸಮಸ್ಯೆಗಳನ್ನು, ಅವರ ಆಂತರಿಕಕ್ಷೋಭೆಯನ್ನು ಯಥಾರ್ಥವಾಗಿ ಅನುಕಂಪೆಯಿಂದ ಚಿತ್ರಿಸುತ್ತಾರೆ. ಆದರೆ ಅದೇ ವೇಳೆಗೆ ಅವರ ಚಿತ್ರಣಗಳಲ್ಲಿ ಒಂದು ದೊಡ್ಡ ಕೊರತೆಯೂ ಎದ್ದು ಕಾಣುತ್ತದೆ. ಅದೇನೆಂದರೆ : "ಸ್ತ್ರೀಯರ ಕಾರ್ಪಣ್ಯಕ್ಕೂ ಪುರುಷರ ಪ್ರಾಧಾನ್ಯಕ್ಕೂ ಮೂಲವಾದ ಸಾಮಾಜಿಕ ಕಾರಣವಾದರೂ ಏನು ? ಬಡತನವೂ, ನಿರುದ್ಯೋಗವೂ ಹೋಗಲಾಡಿಸಲು ಸಾಧ್ಯವಿಲ್ಲದವುಗಳೇ? ಹೇಗೆ? ಅಸಹಾಯಕ ಹೆಣ್ಣುಮಕ್ಕಳ ಮಾನಸಿಕ ಸ್ಥೈರ್ಯ, ಹೋರಾಟ ಇವುಗಳ ಮೂಲಕ ಸಾಮಾಜಿಕ ಪಿಡುಗನ್ನು ತೊಲಗಿಸಲು ಸಾಧ್ಯವೆ ? ಈ ಮುಂತಾದ ಪ್ರಶ್ನೆಗಳನ್ನು ಓದುಗರ ನಡುವೆ ಎಬ್ಬಿಸಿ ಅವರ ಚಿಂತನೆಯನ್ನು ದೀಪ್ತಗೊಳಿಸಿ, ಇದಕ್ಕೆ ಪರಿಹಾರ ಕಾಣುವ ಮಾರ್ಗವೇನೆಂಬುದನ್ನು ಗುರಿಯಿಟ್ಟು ತೋರಿಸುವ ರೀತಿಯಲ್ಲಿ ಅವರ ಬರೆಹಗಳು ರೂಪುಗೊಂಡಿಲ್ಲ."

ಈ ರೀತಿ ಜ್ಯೋತಿರ್ಲತಾ ಗಿರಿಶಾ ಅವರನ್ನು ಕುರಿತು ಮೈಥಿಲೀ ಶಿವರಾಮನ್ ಅವರು ಒಂದು ಸಂದರ್ಭದಲ್ಲಿ ಹೇಳಿರುವುದು ನಿಜಕ್ಕೂ ಒಪ್ಪತಕ್ಕುದೇ ಆಗಿದೆ. ಮೈಥಿಲೀ ಶಿವರಾಮನ್ ಅವರು ಎತ್ತಿದ ಈ ರೀತಿಯ ಪ್ರಶ್ನೆಗಳನ್ನು ಜ್ಯೋತಿರ್ಲತಾ ಅವರು ಮಾತ್ರವಲ್ಲ; ನಮ್ಮ ಯಾವ ಮಹಿಳಾಲೇಖಕರೂ ಗಮನಿಸುವುದಿಲ್ಲವೆನ್ನಬಹುದು.

ಇದುವರೆಗೆ ನಮ್ಮ ಅನ್ವೇಷಣೆಯಲ್ಲಿ ಗಮನಿಸಿದವುಗಳನ್ನು ಕುರಿತು ನೋಡುವಾಗ ಕಾದಂಬರಿಯೇ ಹೆಚ್ಚಾಗಿ ಪ್ರಗತಿಪರ ಚಿಂತನೆಗಳನ್ನು ಪ್ರತಿಬಿಂಬಿಸುವುದು ತಿಳಿದುಬರುತ್ತದೆ. ಸಮಾಜವಾದಿ ವಾಸ್ತವಿಕತೆಯ ಸಾಹಿತ್ಯಿಕ ಅನುಭವಗಳನ್ನು ಒಳತುಂಬುವಲ್ಲಿ ಉಪನ್ಯಾಸಕ್ಕೇ ಪ್ರಥಮಸ್ಥಾನ. ನಂತರ ಕವಿತೆಯೂ ಕೊನೆಯದಾಗಿ ಕಿರುಗತೆಯೂ ಈ ಅಂಶಗಳನ್ನೊಳಗೊಂಡಿರುವುದನ್ನು ಗಮನಿಸಬಹುದು. ವಿಶ್ವಸಾಹಿತ್ಯವನ್ನು ಎತ್ತಿ ನೋಡಿದಾಗಲೂ, ಆಧುನಿಕ ಯುಗದ ಅವಶ್ಯಕತೆಗಳನ್ನು ಪೂರ್ಣಗೊಳಿಸುವ ಸಾಹಿತ್ಯಿಕ ಮಾಧ್ಯಮವಾಗಿ ಕಾದಂಬರಿಯೇ ಬೆಳಗುವುದು ತಿಳಿದುಬರುತ್ತದೆ. ಒಸ್ಟ್ರೊವೆಟ್ಸ್ಕಿ, ಮ್ಯಾಕ್ಸಿಂಗಾರ್ಕಿ, ಮೈಖೇಲ್-ಷೋಲಕೋವ್‌ರಂಥಾ ಪ್ರಖ್ಯಾತ ಪ್ರಗತಿಪರ ಸಾಹಿತ್ಯಿಕ ಕರ್ತೃಗಳು ತಮ್ಮ ಅಭಿಪ್ರಾಯಗಳನ್ನು ಯಶಸ್ವಿಯಾಗಿ ಪ್ರಚುರಪಡಿಸಲು ಉಪನ್ಯಾಸಗಳನ್ನೇ ಬಳಸಿಕೊಂಡರೆಂಬುದನ್ನು ಮನಗಂಡಾಗ ಸಾಮಾಜಿಕ ಯಥಾರ್ಥ ವಸ್ತುಸ್ಥಿತಿಯ ಚಿತ್ರಣದಲ್ಲಿ ಕಾದಂಬರಿಗಳ ಮಹತ್ತರ ಪಾತ್ರವೇನೆಂಬುದರ ಅರಿವಾಗದಿರದೆ? ಮಧ್ಯಮವರ್ಗದ ಅಸ್ತಿತ್ವದೊಡನೆ ಹಾಗೂ ವೈಯಕ್ತಿಕ ವ್ಯಕ್ತಿಜಾಗೃತಿಯೊಡನೆ ಮೂಡಿಬಂದ ಕಾದಂಬರಿಯೇ ನವಯುಗದ ವಿಚಾರಗಳಿಗೆ ಆಸ್ಪದ ನೀಡುವ ಮಾಧ್ಯಮವಾಗಿ ಬೆಳಗುತ್ತಿದೆಯೆಂದು ಹೇಳಬಹುದು. ಒಟ್ಟಾರೆಯಾಗಿ ಹೇಳುವುದಾದರೆ ನಮ್ಮ ಆಧುನಿಕ ತಮಿಳು ಸಾಹಿತ್ಯವು ಜಮೀನ್‌ದಾರೀ ಯುಗದಿಂದ ಬಂಡವಾಳಶಾಹೀ ವಿನ್ಯಾಸವನ್ನು ಪ್ರತಿಬಿಂಬಿಸುವ ಸ್ಥಿತಿಗೆ ಬಂದಿದೆ. ವಿಶ್ವದೆಲ್ಲೆಲ್ಲಾ ಬೆಳೆದುಬರುತ್ತಿರುವ ಸಮಾಜವಾದಿ ಪ್ರಜ್ಞೆಯೂ ಅದರಲ್ಲಿ ಕಂಡುಬರುತ್ತದೆ ಹೀಗಾಗಿ ಇಂದಿನ ಪರಿಸ್ಥಿತಿಯಲ್ಲಿ ಕ್ರಾಂತಿಕಾರಕ ಸಾಹಿತ್ಯಗಳೂ, ಅವುಗಳಿಗಾಗಿ ಚಳುವಳಿಗಳೂ ತಮಿಳಿನಲ್ಲಿ ದುರ್ಬಲವಾಗಿಯೇ ಇವೆ. ವಿಂದನ್ ಅವರ 'ಮುಲ್ಲೈಕ್ಕೊಡಿಯಾಳ್' ಕಿರುಗಥಾ ಸಂಕಲನಕ್ಕೆ ಮುನ್ನುಡಿ ಬರೆದಾಗ ಒಂದೆಡೆಯಲ್ಲಿ ಕಲ್ಕಿಯವರು "ಕಷ್ಟಪಟ್ಟು ಅರಿಯದವನು ಶ್ರಮಜೀವಿಯ ದುಃಖವನ್ನು ಕುರಿತೂ, ಕೆಸರಿನಲ್ಲಿಳಿದು ಅರಿಯದವನು ಕೃಷಿಕನ ಕಷ್ಟವನ್ನು ಕುರಿತೂ, ಕಣ್ಣೀರಿನಲ್ಲಿ ಲೇಖನಿಯನ್ನದ್ದಿಕೊಂಡು ಏನೇ ಬರೆದರೂ ಆ ಕಥೆಗಳಲ್ಲಿ ಮತ್ತೆಲ್ಲಾ ಕಿರುಗಥಾಲಕ್ಷಣಗಳೂ ಇರಬಹುದು : (ಆದರೆ) ಅಂತರಂಗವನ್ನು ಒಳಹೊಕ್ಕು ಸ್ಪರ್ಶಿಸುವ ಹೃದಯವಂತಿಕೆ ಇರುವುದಿಲ್ಲ. ಅಂಥಾ ನೈಜ ಕ್ರಾಂತಿಪೂರ್ಣ ಕಿರುಗತೆಗಳನ್ನು ಬರೆಯುವುದಕ್ಕೆ ಬಡ ದುರ್ಬಲವರ್ಗದ ಜನರೊಡನೆಯೂ ಶ್ರಮಜೀವಿಗಳೊಡನೆಯೂ ಇದ್ದು ಪಳಗಿದವರಾಗಬೇಕು." ಎಂದಿದ್ದಾರೆ ಬೂರ್ಜುವಾ ಬರೆಹಗಾರರಾದ ಕಲ್ಕಿ ಅವರ ಈ ಅಭಿಪ್ರಾಯಗಳು ನಾವೂ ಆಲೋಚಿಸಬೇಕಾದವುಗಳೇ. ಅಂತೆಯೇ ಭರವಸೆ ನೀಡುವ ಮುಂಬರುವ ಕಾಲದ ಸಾಹಿತ್ಯಿಕ ಪರಿಸರಕ್ಕೆ ಬೇಕಾದ ಕುರುಹುಗಳು ಅಲ್ಲಲ್ಲೇ ಕಂಡುಬರುತ್ತವೆಯೆಂಬುದನ್ನೂ ಕಡೆಗಣಿಸಲಾಗದು

---

ಪಿ. ಗೋವಿಂದ ಪಿಳ್ಳೈ

# ಮಲೆಯಾಳಂ ಪ್ರಗತಿಪರ ಸಾಹಿತ್ಯದ ಪುನರುಜ್ಜೀವನ : ಒಂದು ಕಿರುನೋಟ

ಯಾವುದೇ ಸಾಹಿತ್ಯ ಚರಿತ್ರೆಯು ಇಂಥದೇ ಕಾಲ ಅಥವಾ ಇಂಥದೇ ಕೃತಿಯಿಂದ ಆರಂಭವಾಯಿತು ಅನ್ನುವುದು ಅಪಕ್ವ ಮಾತು ಅಥವಾ ತಪ್ಪು ಮಾತಾಗುತ್ತದೆ. ಈ ಮಿತಿಯನ್ನು ಮನಸ್ಸಿನಲ್ಲಿಟ್ಟುಕೊಂಡರೆ, ಒಂದು ಅಂದಾಜು ಕಾಲವನ್ನು ಮತ್ತು ಕೆಲವು ಕೃತಿಗಳನ್ನು, ಒಂದು ಕ್ರಮಬದ್ಧ ಅಧ್ಯಯನ ಕಾರಣಕ್ಕಾಗಿ ಹೆಸರಿಸಬಹುದು. ಈ ಅರ್ಥದಲ್ಲಿ 1889ನ್ನು ಮಲಯಾಳಂ ಸಾಹಿತ್ಯದ ತಿರುವುಬಿಂದು ಎಂದು ಹೇಳಬಹುದು. ಪ್ರಥಮ ಸಾಮಾಜಿಕ ಕಾದಂಬರಿ ಹಾಗೂ ಇಂದಿಗೂ ಶ್ರೇಷ್ಠ ದರ್ಜೆಯ ಕಾದಂಬರಿ ಎಂದು ಪರಿಗಣಿಸಲಾಗಿರುವ, ಶ್ರೀ ಚಂದುಮೇನನ್ ಅವರು ಬರೆದ 'ಇಂದುಲೇಖ' ಈ ವರ್ಷದಲ್ಲಿ ಪ್ರಕಟಗೊಂಡಿತು. ಸಾಹಿತ್ಯಚರಿತ್ರೆಯ ಮತ್ತೊಂದು ಮುಖ್ಯ ವರುಷ ವೆಂದರೆ 1908. ಈ ವರ್ಷ ಕುಮಾರನ್ ಅಸನ್ ಅವರ 'ವೀಣಪೂವು' (ಉದುರಿದ ಹೂ) ಕವನ ಸಂಕಲನ ಮಲಯಾಳಂನ ಆಧುನಿಕ ಕಾವ್ಯಕ್ಷೇತ್ರದ ನಾಂದಿ ಹೊತ್ತಿಗೆ ಯಾಯಿತು. 1912ರಲ್ಲಿ ಬಂಡುಕೋರ ಹಾಗೂ ಸ್ವದೇಶಾಭಿಮಾನಿ ರಾಮಕೃಷ್ಣ ಪಿಳ್ಳೆಯವರು ಬರೆದ ಕಾರ್ಲ್‌ಮಾರ್ಕ್ಸ್ ಜೀವನಚರಿತ್ರೆ ಮಲೆಯಾಳಂನಲ್ಲಿ ಪ್ರಕಟಗೊಂಡು ಅದು ಗಮನಾರ್ಹ ವರ್ಷವೆನಿಸಿತು. 1922ರಲ್ಲಿ ಕುಮಾರ ಅಸನ್ ಅವರು ಅಂತರ ಜಾತೀಯ ಮದುವೆ ಸಾರಾಂಶವಿರುವ ತಮ್ಮ ಕಾವ್ಯ 'ದುರಾವಸ್ಥೆ' ಬರೆಯುವುದರ ಮೂಲಕ, ಅವರು ರಮ್ಯವಾದ ಮತ್ತು ಅಧ್ಯಾತ್ಮವಾದದಿಂದ ಸಮಾಜವಾದದ ಕಡೆ ತಮ್ಮ ಕಾವ್ಯ ನಿಲುವನ್ನು ವಾಲಿಸಿದರು.

1937ನೇ ವರ್ಷವು ಮೇಲಿನ ಎಲ್ಲಾ ವರ್ಷಗಳಿಗಿಂತ ಹೆಚ್ಚು ಗಮನಾರ್ಹವೆಂದು ಹೇಳಬಹುದು. ಈ ಅವಧಿಯನ್ನು 'ಕೆಂಪುದಶಕ'ವೆಂದು ವರ್ಣಿಸಲಾಗಿದೆ. ಈಗಲೇ ಭಾರತದ ರಾಜಕಾರಣ ಹಾಗೂ ಸಾಹಿತ್ಯ ಕ್ಷೇತ್ರದೆರಡರಲ್ಲೂ ಎಡ ಹಾಗೂ ಸಮಾಜವಾದೀ ಚಳವಳಿ ಆಳವಾಗಿ ಬೇರೂರಿತು. ಈ ಕಾಲದಲ್ಲೆ ಭಾರತದ ಅನೇಕ ಪ್ರಾಂತ್ಯಗಳಲ್ಲಿ ರಾಷ್ಟ್ರೀಯ ಸರ್ಕಾರಗಳು ಸ್ಥಾಪಿತವಾದದ್ದು. ಸಮಾಜವಾದಿ ಮತ್ತು ಕಮ್ಯೂನಿಸ್ಟ್ ಪಕ್ಷಗಳೆರಡು ಅಸ್ತಿತ್ವಕ್ಕೆ ಬಂದುದಲ್ಲದೆ ರಾಷ್ಟ್ರಮಟ್ಟದಲ್ಲಿ ಕೆಲಸಮಾಡತೊಡಗಿದವು.

ಮ್ಯಾಕ್ಸಿಂಗಾರ್ಕಿಯವರ ಮುಂದಾಳತ್ವದಲ್ಲಿದ್ದ ವಿಶ್ವಫ್ಯಾಸಿಸ್ಟ್ ವಿರೋಧಿ ಬರಹಗಾರರ ಒಕ್ಕೂಟ ಮತ್ತು ಪ್ರೇಮ್‌ಚಂದ್ ಅವರ ಭಾರತೀಯ ಪ್ರಗತಿವಾದೀ ಲೇಖಕರ ಸಂಘಗಳ

ಸ್ಫೂರ್ತಿಯಿಂದ 1937ರಲ್ಲಿ ಕೇರಳದಲ್ಲೂ ಬರಹಗಾರರ ಒಕ್ಕೂಟವೊಂದನ್ನು ಸ್ಥಾಪಿಸಿಲಾಯಿತು. ಅದನ್ನು 'ಜೀವಿತ ಸಾಹಿತ್ಯ ಸಂಘಂ' ಎಂದು ಕರೆದರು. ಹೊಸ ಸಾಹಿತ್ಯ ಚಳುವಳಿಯನ್ನು ಧಿಕ್ಕರಿಸಿ ಬರೆಯುತ್ತಿದ್ದುದನ್ನು ವಿರೋಧಿಸಿ ಶ್ರೀ ಇ. ಎಂ. ಎಸ್. ನಂಬೂದರಿ ಪಾಡರು ಅಂದಿನ ಕಾಂಗ್ರೆಸ್‌ನ ಪ್ರಮುಖ ಪತ್ರಿಕೆಯಾದ 'ಮಾತೃಭೂಮಿ'ಯಲ್ಲಿ ಒಂದು ಅಗ್ರಲೇಖನ ಬರೆದರು. ಈ ಲೇಖನವನ್ನು ವೈಜ್ಞಾನಿಕ ರೀತಿಯಲ್ಲಿ ಮಂಡಿಸಿದ ಪ್ರಥಮ ಮಾರ್ಕ್ಸ್‌ವಾದಿ ವಿಮರ್ಶಾಲೇಖನವೆನ್ನಬಹುದು. ಆಗ್ಗೆ ಇ. ಎಂ. ಎಸ್. ಅವರು ಆಗಿನ ಕೇರಳದ ಕಾಂಗ್ರೆಸ್ ಮತ್ತು ಕಮ್ಯುನಿಸ್ಟ್ ಪಕ್ಷಗಳೆರಡರ ಪ್ರಮುಖ ವ್ಯಕ್ತಿಯಾಗಿದ್ದರು. ಅವರು ಅಂದು ಎತ್ತಿದ ಅನೇಕ ಅಂಶಗಳೂ ಇಂದಿಗೂ ಹೊಂದುವಂತಾದ್ದಾಗಿದೆ. ಇದೇ ವರ್ಷದಲ್ಲಿ ಪ್ರಥಮಬಾರಿಗೆ 'ಪಟ್ಟಬಾಕಿ' ಎಂಬ (ಬಾಕಿ ಕಂದಾಯ) ನಾಟಕ ಪ್ರಟಟಗೊಂಡುದಲ್ಲದೆ ಅದನ್ನು ರಂಗದ ಮೇಲೆ ಅಭಿನಯಿಸಲಾಯಿತು. ಈ ನಾಟಕವನ್ನು ನಿಸ್ಸಂಶಯವಾಗಿ ಪ್ರಥಮ ಸಮಾಜವಾದಿ ವಾಸ್ತವವತೆಯ ದಾರಿ ಹಿಡಿದ ಕೃತಿ ಎನ್ನಬಹುದು. (ಇದನ್ನು ಅಂದಿನ ಕಮ್ಯೂನಿಸ್ಟ್ ಪಕ್ಷದ ಮುಂದಾಳುವಾದ ಶ್ರೀ ಕೆ. ದಾಮೋದರನ್ ಬರೆದರು. ಅವರು ಇತ್ತೀಚೆಗೆ ದೆಹಲಿಯಲ್ಲಿ ಮೃತರಾದರು.) ಈ ನಾಟಕವನ್ನು ಅನೇಕ ರೈತಸಭೆಗಳಲ್ಲಿ ಅಭಿನಯಿಸಲಾಯಿತು. ಇದರಲ್ಲಿ ಭಾಗವಹಿಸಿದ ನಟವರ್ಗವು ಕಮ್ಯುನಿಸ್ಟ್ ಪಕ್ಷದ ಸ್ಥಾಪಕರೂ ಕಾರ್ಯಕರ್ತರೂ ಆಗಿದ್ದ ಪಿ. ಕೃಷ್ಣಪಿಳ್ಳೆ, ಎ. ಕೆ. ಗೋಪಾಲನ್, ಕೆ. ಎ. ಕೇರಳೀಯನ್ ಮುಂತಾದವರು. 1937ರಲ್ಲಿ ಮಹಾಕವಿ ಚಂಗಂಪುಳಕೃಷ್ಣ ಪಿಳ್ಳೆ ತಮ್ಮ ಪದ್ಯ 'ವಾಳಕ್ಕುಲ' (ಬಾಳೆಗೊನೆ)ವನ್ನು ಬರೆದು ಪ್ರಕಟಿಸಿದರು. ಇದು ಬಡ ಹರಿಜನ ಮಕ್ಕಳು ಅದು ತಮಗೆ ಸಿಗುತ್ತದೆ ಎನ್ನುವ ಆಸೆಯಿಂದ ಬಾಳೆಗೊನೆಯೊಂದರ ಸುತ್ತ ಕುಣಿಯುತ್ತಿರುವಾಗ ಭೂಒಡೆಯನು ಅವನ್ನು ತನ್ನ ಬಳಕೆಗೆ ಕಿತ್ತುಕೊಂಡು ಹೋಗುವ ಕಥೆಯಿದೆ. ಕವಿ ಕೊನೆಯಲ್ಲಿ ಈ ಹರಿಜನ ಸಂಸಾರದ ಮುಂದಿನ ಪೀಳಿಗೆಯವರು ಇಂಥ ಹೇಯಕೃತ್ಯಕ್ಕೆ ಕಾರಣರಾದವರ ಮೇಲೆ ತಮ್ಮ ಮುಯ್ಯಿ ತೀರಿಸಿಕೊಳ್ಳರೇ ಎಂದು ಕೇಳುತ್ತಾನೆ. ಈ ಕರೆಯನ್ನೇನು ಕ್ರಾಂತಿಕಾರಕ ಎಂದು ಕರೆಯಲಾಗದಿದ್ದರೂ ಇದು ಅಂದಿನ ಕಾಲದ ಆಲೋಚನಾಕ್ರಮವನ್ನು ತಿಳಿಸುತ್ತದೆ. ಮುಂದಿನ ನಲ್ವತ್ತರ ದಶಕದಲ್ಲಿ ಈ ಚಳುವಳಿ, ವಿಶ್ವದಾದ್ಯಂತ ನಡೆಯುತ್ತಿದ್ದ ಫ್ಯಾಸಿಸ್ಟ್ ವಿರೋಧಿ ಚಳುವಳಿ ಮತ್ತು ಕ್ರಾಂತಿಕಾರಿ ಚಳವಳಿಯ ಮುನ್ನಡೆಯಿಂದ ಪ್ರಭಾವಿತಗೊಂಡು ವಿಶಾಲಕ್ಷೇತ್ರದಲ್ಲಿ ಇನ್ನೂ ಮುನ್ನಡೆಯಿತು. ಇದರ ಜೊತೆಗೆ ಟ್ರಾವನ್‌ಕೂರ್ ಮತ್ತು ಕೊಚ್ಚಿನ್ ಪ್ರಾಂತ್ಯಗಳಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟ, ರಾಷ್ಟ್ರೀಯ ಸಂಗ್ರಾಮ ಮತ್ತು ಮಲಬಾರ್ ಪ್ರಾಂತ್ಯದಲ್ಲಿ ನಡೆಯುತ್ತಿದ್ದ ವರ್ಗ ಹೋರಾಟ ಈ ಚಳುವಳಿಯ ಕಾವನ್ನು ಇನ್ನೂ ಹೆಚ್ಚಿಸಿದವು. 1947ರಲ್ಲಿ ಬ್ರಿಟಿಷರು ಭಾರತವನ್ನು ಬಿಟ್ಟುಹೋದ ಹೊತ್ತಿಗೆ, ಪ್ರಗತಿವಾದೀ ಸಾಹಿತ್ಯ ಒಕ್ಕೂಟ ಶಕ್ತಿಯುತವಾಗಿ ಬೆಳೆದಿದ್ದು ಕಮ್ಯುನಿಸ್ಟ್ ಮತ್ತು ಕಮ್ಯುನಿಸ್ಟೇತರ ಶ್ರೇಷ್ಠ ಲೇಖಕರನ್ನು ತನ್ನೆಡೆಗೆ ಆಕರ್ಷಿಸಿತು. ಈ ಒಕ್ಕೂಟದ ಮೂಲಕವೇ ಇಂದಿನ ಅನೇಕ ಮಲೆಯಾಳಂನ

ಖ್ಯಾತ ಬರಹಗಾರರು ಹೊರಬಿದ್ದರು. ಅವರಲ್ಲಿ ತಗಡಿ ಶಿವಶಂಕರಪಿಳ್ಳೈ, ವೈಕಂ ಮುಹಮುದ್ ಬಷೀರ್, ಕೇಶವದೇವ್, ಎಸ್. ಕೆ. ಪೊಟ್ಟೆಕಾಡ್, ಇದಸ್ಸೆರಿ ಗೋವಿಂದನ್ ನಾಯರ್, ಚಂಗಪ್ಪುಳ ಕೃಷ್ಣಪಿಳ್ಳೆ, ಎಂ. ಪಿ. ಪಾಲ್, ಜೋಸೆಫ್ ಮುಂಡೇಸ್ಸರಿ ಮುಂತಾದವರನ್ನು ಹೆಸರಿಸಬಹುದು. ಸ್ವಾತಂತ್ರ್ಯ ಹೋರಾಟಗಾರರ ಪರವಾಗಿ ಮತ್ತು ತುಳಿತಕ್ಕೊಳಗಾದ ವರಿಗಾಗಿ ಮತ್ತು ಸಮಾಜದಲ್ಲಿ ಹೀನವರ್ಗಗಳ ಪರವಾಗಿ ಬರೆಯಲು ತಮ್ಮ ಪ್ರತಿಭೆ ಯನ್ನು ಈ ಲೇಖಕರು ಉಪಯೋಗಿಸಿದರು. ಶ್ರೀ ತಗಡಿ ಎಸ್. ಎಸ್. ಪಿಳ್ಳೈ ಅವರ 'ರಂಡಾಂಗಾಡಿ' (ಎರಡು ಬಳ್ಳ) ವರ್ಕಿಯವರ (ಸಬ್ದಕುನ್ನಕುಪ್ಪ) (ಮಾತನಾಡುವ ನೇಗಿಲು) ದೇವ್ ಅವರ 'ಒಡಾಯಿಲ್‌ನಿನ್ನು' (ಗಟಾರದೊಳಗಿಂದ) ಪೊಟ್ಟೆಕಾಡ್ ಅವರ 'ವಿಷಕನ್ನಿಕಾ' ಬಷೀರ್ ಅವರ 'ಬಾಲ್ಯ ಕಾಲಸಖಿ' ಮುಂತಾಂದ ಕೃತಿಗಳು ಮಳೆಯಾಳಂ ಸಾಹಿತ್ಯದ ರೂಪ ಮತ್ತು ವಸ್ತುವನ್ನು ಕ್ರಾಂತಿಕಾರೀ ರೀತಿಯಲ್ಲಿ ಬದಲಾಯಿಸಿದವು. ಸ್ವಾತಂತ್ರ್ಯವು ಲಕ್ಷಾಂತರ ದಲಿತರ ಜೀವನಕ್ಕೊಂದು ಬೆಳವಣಿಗೆಯನ್ನು ಮತ್ತು ಸ್ವಾತಂತ್ರ್ಯವನ್ನು ತರಬಹುದೆಂದು ಆಶಿಸಲಾಯಿತು. ಸಾಹಿತ್ಯಕ್ಷೇತ್ರದಲ್ಲೂ ಬದಲಾ ವಣೆಯನ್ನು ನಿರೀಕ್ಷಿಸಲಾಯಿತು. ಆದರೆ ಅದು ಹಾಗಾಗಲಿಲ್ಲ. ಸದ್ಯಕ್ಕೆ ನಾವು ಅತ್ತ ಹೋಗದೆ ಈ ಲೇಖನವನ್ನು ಸಾಹಿತ್ಯಕ್ಷೇತ್ರಕ್ಕೆ ಮಿತಿಗೊಳಿಸುತ್ತೇನೆ.

ಸ್ವಾತಂತ್ರ್ಯನಂತರ ಸಾಹಿತ್ಯ ಕ್ಷೇತ್ರದಲ್ಲಿ ನಡೆದ ಪ್ರಮುಖ ಘಟನೆ ಕೇರಳ ಪ್ರಗತಿ ಗಾಮೀ ಲೇಖಕರ ಸಂಘ ಒಡೆದು ಎರಡಾದದ್ದು. ಕೆಲವರು ಈ ಬೆಳವಣಿಗೆಯನ್ನು ಕಮ್ಯುನಿಸ್ಟ್ ಪಕ್ಷದ ಪಂಥೀಯ ಧೋರಣೆ ಮತ್ತು ಅದರ ದುಸ್ಸಾಹಸ ಪ್ರವೃತ್ತಿಯಿಂದ (ಅವರು ಹಾಗೆ ಕರೆಯುತ್ತಾರೆ) ಎಂದು ಹೇಳುತ್ತಾರೆ. ಈ ಪ್ರವೃತ್ತಿಯಿಂದಾಗಿ ಕಮ್ಯು ನಿಸ್ಟರು ಚಳುವಳಿಯಿಂದ ದೂರ ಉಳಿಯಬೇಕಾಯಿತು ಎಂಬುದು ಅವರ ಅಭಿಪ್ರಾಯ. ಕಮ್ಯುನಿಸ್ಟ್ ಪಾರ್ಟಿಯ ಬಿಗಿ ಕಾನೂನು ಪಾಲನೆಯು ಒಡಕಿಗೆ ಸ್ವಲ್ಪಮಟ್ಟಿಗೆ ಕಾರಣ ವಾಗಿರಲೂಬಹುದು. ಆದರೆ ಇದು ಕೇವಲ ಆಕಸ್ಮಿಕ ಮತ್ತು ತತ್‌ಕ್ಷಣದ ಗಮನಸೆಳೆದ ವಿಷಯ ಮಾತ್ರ. ಈ ಬಗ್ಗೆ ಇ. ಎಂ. ಎಸ್. ನಂಬೂದರಿಪಾಡರು ದೇಶಾಭಿಮಾನಿ ಅಧ್ಯಯನ ಬಳಗವೊಂದನ್ನು ಉದ್ದೇಶಿಸಿ 1971ರಲ್ಲಿ ಮಾತನಾಡುತ್ತಾ ಹೀಗೆ ಹೇಳಿದರು. "ಮೂವತ್ತರ ದಶಕದಿಂದ ನಾಲ್ವತ್ತರ ದಶಕದ ಕೊನೆಯರ್ಧದವರೆಗೂ ಒಂದು ಸಾಮಾನ್ಯ ಶತ್ರುವಿನತ್ತ ದುಡಿಯುವವರ್ಗ ಮತ್ತು ಕಿರು ಬೂರ್ಜ್ವಾಗಳ ಸಂಯುಕ್ತರಂಗ ರಚನೆ ಸಾಧುವಾದ ಹಾಗೂ ಸಾಧ್ಯವಾದ ಸಲಹೆಯಾಗಿತ್ತು. ಆದರೆ ಮೂವತ್ತರ ದಶಕದಲ್ಲಿ ಈ ಸಲಹೆ ಕಾರ್ಯಗತವಾಗಲಿಲ್ಲ. ಆ ಕಾಲದಲ್ಲಿ ವರ್ಗ ಅರಿವುಳ್ಳ ಕೆಲ ಲೇಖಕರು ಮಾತ್ರ ಬೆಂಬಲವಾಗಿ ನಿಂತರು. ಆ ಹಂತದಿಂದ ಮುಂದಕ್ಕೆ 'ಜೀವಿತ ಸಾಹಿತ್ಯ ಸಂಘ' ಪ್ರಗತಿಪರ ಸಾಹಿತ್ಯವನ್ನು ಮುಂದೆ ತರುವಲ್ಲಿ ಪ್ರಮುಖಪಾತ್ರ ವಹಿಸಿತು. ಅನೇಕ ಪ್ರಜಾಸತ್ತಾತ್ಮಕ ಬರಹಗಾರರ ಒಕ್ಕೂಟಗಳು ಕಮ್ಯುನಿಸ್ಟ್ ಬರಹಗಾರರ ಒಕ್ಕೂಟದೊಡನೆ ಸಹಕರಿಸಲು ಪ್ರಾರಂಭಿಸಿದವು.

ಆದರೆ 1947–48ರಲ್ಲಿ ಸನ್ನಿವೇಶ ತೀವ್ರ ಬದಲಾಯಿತು. ರಾಜಕೀಯ ಶಕ್ತಿಯು

ಇಂಡಿಯಾದ ಬೂರ್ಜ್ವಾಗಳ ಕೈಗೆ ಬಂದಾಗ, ಅದುವರೆಗೂ ಕಮ್ಯುನಿಸ್ಟರ ಜೊತೆಯಲ್ಲಿ ಸಹಕಾರ ಕೊಡುತ್ತಿದ್ದ ಅನೇಕ ಬರಹಗಾರರು ಅನೇಕ ಭ್ರಮೆಗಳಿಗೆ ಮತ್ತು ಗೊಂದಲಗಳಿಗೆ ಬಲಿಯಾದರು. ಸಾಹಿತ್ಯ ಮತ್ತು ರಾಜಕೀಯ ಕ್ಷೇತ್ರಗಳೆರಡರಲ್ಲೂ ಕಮ್ಯುನಿಸ್ಟ್ ವಿರೋಧಿ ವಾತಾವರಣವನ್ನು ನಿರ್ಮಿಸಲು ಕೆಲಸವಾಗತೊಡಗಿತು. ಸ್ವಾಭಾವಿಕವಾಗಿಯೇ ಕಮ್ಯುನಿಸ್ಟರು ಅದಕ್ಕೆ ಪ್ರತಿಕ್ರಿಯೆ ತೋರಿಸಿದರು. ಒಂದು ರೀತಿಯ ಉದ್ವೇಗ ಮತ್ತು ಸೆಣಸಾಟ ಎಲ್ಲಾ ಕಡೆ ಪ್ರಾರಂಭವಾದವು.

1947ರಲ್ಲಿ ಅಧಿಕಾರಕ್ಕೆ ಬಂದ ಪ್ರಜಾಪ್ರಭುತ್ವವಾದಿಗಳು ತಮ್ಮ ಬೂರ್ಜ್ವಾ ಗುಂಪಿಗೆ ಶ್ರಮಿಕವರ್ಗ ಬರುವುದನ್ನು ಪ್ರಯತ್ನಪೂರ್ವಕವಾಗಿ ತಡೆದರು. ಇದು ಅಪರಿಬ್ಬರ ಸೆಣಸಾಟಕ್ಕೆ ಮುಖ್ಯ ಕಾರಣವಾಯಿತು. ರಾಜಕೀಯದಲ್ಲಾದ ಈ ಬದಲಾವಣೆ ಸ್ವಾಭಾವಿಕವಾಗಿ ಸಾಹಿತ್ಯಕ್ಷೇತ್ರದಲ್ಲೂ ಕಂಡುಬಂದಿತು.

ಈ ಹೊಸ ಸಂದರ್ಭವನ್ನು ಎದುರಿಸುವಾಗ ಕಮ್ಯುನಿಸ್ಟರು ಪಂಥೀಯ ಧೋರಣೆಯನ್ನು ಅನುಸರಿಸಿದರೆ ಎನ್ನುವುದು ಯೋಚಿಸಬೇಕಾದ ಪ್ರಶ್ನೆ. ಅದರ ಜೊತೆಗೆ ಒಂದು ಮರುಪ್ರಶ್ನೆ ಹಾಕಬಹುದು. ಪಕ್ಷಕ್ಕೆ ಸ್ಪಷ್ಟಧೋರಣೆಯನ್ನು ನಿರೂಪಿಸಿದ್ದರೂ ಅದು ರಾಜಕೀಯ ಮತ್ತು ಸಾಹಿತ್ಯಕ್ಷೇತ್ರಗಳಲ್ಲಿ ನಡೆಯುತ್ತಿದ್ದ ಎರಡು ವರ್ಗಗಳ ಸೆಣಸಾಟವನ್ನು ತಡೆಯಲು ಸಾಧ್ಯವಾಯಿತೆ ? ಎಂಬುದು–ಅದರಿಂದಾಗಲಿಲ್ಲ ಅನ್ನುವುದೇ ಉತ್ತರ. ಇದು ಸಾಧ್ಯವಾಗಲಿಲ್ಲವೇಕೆಂದರೆ ಆಗಸ್ಟ್ 15 ನಂತರದ ಸ್ವಾತಂತ್ರ್ಯ ಭಾರತದಲ್ಲಿ ಎರಡು ವರ್ಗಗಳ ಆಸಕ್ತಿಗಳು ಎದುರು ಬದರಾದವು. ಆದ್ದರಿಂದಲೇ ಶ್ರಮಿಕ ವರ್ಗದ ಪ್ರತಿನಿಧಿಗಳಿಗೂ, ಇತರ ಬೂರ್ಜ್ವಾ ಪ್ರಜಾಪ್ರಭುತ್ವವಾದಿಗಳಿಗೂ ಸೆಣಸಾಟ ಅನಿವಾರ್ಯವಾಯಿತು.

ಇ. ಎಂ. ಎಸ್. ಅವರ ಈ ಮಾತನ್ನು ಸರಿಯಾದ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳದಿದ್ದರೆ ಮತ್ತೆ ಗೊಂದಲಕ್ಕೊಳಗಾಗುವ ಪರಿಸ್ಥಿತಿ ಬರುತ್ತದೆ. ಆದರೆ ಸ್ವಾತಂತ್ರ್ಯನಂತರದ ಹೊಸ ಸಂದರ್ಭ ಅದರಲ್ಲೂ ಪ್ರಸ್ತುತ ಸಂದರ್ಭ ಶ್ರಮಿಕವರ್ಗೇತರ ಹಾಗೂ ಇತರ ಪ್ರಗತಿ ಧೋರಣೆಯ ಸಾಹಿತಿಗಳನ್ನೆಲ್ಲಾ ಒಟ್ಟುಗೂಡಿಸುವ ಕಾರ್ಯ ಮಹತ್ವದ್ದಾಗಿ, ಅಗತ್ಯವಾದದ್ದಾಗಿ ಕಾಣುತ್ತದೆ.

ಈ ಒಂದು ಘಟ್ಟದಲ್ಲಿ ಪ್ರಗತಿಪರ ಲೇಖಕರ ಸಂಘದಲ್ಲಿ ಒಡಕುಂಟಾಗಿದ್ದರೂ, ರಕ್ತಮಯ ಸೆಣಸಾಟಗಳು ನಡೆದಿದ್ದರೂ, ಈ ಅವಧಿಯಲ್ಲಿ (1948–51) ಯುವ ಪ್ರತಿಭಾವಂತ ಹಾಗೂ ಕ್ರಾಂತಿಕಾರಿ ಧೋರಣೆಯ ಬರಹಗಾರರ ಒಂದು ಗುಂಪು ಹುಟ್ಟಿಕೊಂಡಿತು. ಇಂಥ ಬರಹಗಾರರಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಅನೇಕ ಕಮ್ಯುನಿಸ್ಟ್ ಪಕ್ಷಸ್ಥಾಪಕ ಜನರೂ ಇದ್ದರು. ಅವರಲ್ಲಿ ಚೆರುಕಾಟ್, ಇ. ಭಾಸ್ಕರನ್, ದಾಮೋದರನ್, ದೇವದಾಸ್, ಪ್ರೇಮ್‌ಜಿ, ಕೆ. ಪಿ. ಜಿ., ಪಾಪ್ಪುಕುಟ್ಟಿ, ವರ್ಕಿ ಮುತಾಂದವರು ತಮ್ಮ ಹೋರಾಟವನ್ನು ಬಹಳ ಧೈರ್ಯದಿಂದ ಮುಂದುವರಿಸಿದರು. ಈ ಹೋರಾಟದಲ್ಲಿ ಬಂದ ಸಾಹಿತ್ಯ ಪ್ರಾಕಾರದ ಮುಖ್ಯರನ್ನೂ ಹೆಸರಿಸಬಹುದು. ಕಾವ್ಯಕ್ಷೇತ್ರದಲ್ಲಿ ಓ. ಎನ್. ವಿ. ಕುರುಪ್, ವಾಯಲ್‌ದಾರ್ ರಾಮವರ್ಮ,

ಬಾಲನ್, ಪುಟ್ಟಿಸ್ಸೇರಿ ರಾಮಚಂದ್ರನ್, ತಿರುವೆಲ್ಲೂರ್ ಕರುಣಾಕರನ್ ಮತ್ತು ಎಂ. ಎನ್. ಕುರುಪ್ ಮುಖ್ಯರು. ಸಣ್ಣ ಕಥೆಗಾರರಲ್ಲಿ ಪಿ. ಎಂ. ಪೊಟ್ಟುಕಾಡ್, ಕಾಳಕ್ಕಾಡ, ನಾಟಕಕಾರರಾದ ಥೊಪ್ಪಿಲ್ ಭಾಸಿ, ಸದಾನಂದನ್, ಆಂಟೊನಿ, ಮುಂತಾದವರು. ಇವರೆಲ್ಲರೂ ಐವತ್ತರ ದಶಕದಲ್ಲಿ ಬಂದವರು. ಸ್ವತಂತ್ರ್ಯಾನಂತರದಲ್ಲಿ ನಡೆದ ಎರಡು ವರ್ಗಗಳ ನಡುವೆ ಆದ ರಕ್ತಮಯ ಸೆಣಸಾಟ ಇವರ ಪ್ರಭಾವಶಾಲೀ ಬರವಣಿಗೆಗೆ ಕಾರಣವಾಗಿದೆ.

ಐವತ್ತರ ದಶಕದಲ್ಲಿ ಕಾಣಿಸಿಕೊಂಡ ಇನ್ನೊಂದು ಮಹತ್ವ ಬೆಳವಣಿಗೆಯೆಂದರೆ: ಕೇರಳ ಜನತಾ ಕಲಾಶಾಲೆಯ ಸ್ಥಾಪನೆ ಮತ್ತು ಅದರಿಂದ ಅನೇಕ ನಾಟಕಗಳ ಪ್ರಯೋಗ. ಅಂತಹವುಗಳಲ್ಲಿ ಥೊಪ್ಪಿಲ್‌ಬಾಸಿ ಬರೆದ 'ನಿಂಗಲ್ ಎನ್ನೆ ಕಮ್ಯುನಿಸ್ಟಾಕಿ' (ನೀನು ನನ್ನನ್ನು ಕಮ್ಯುನಿಸ್ಟ್ ಮಾಡಿದೆ), 'ಮೂಲಧನಂ' 'ಸರ್ವೆಕಲ್ಲು' ಮುಂತಾದವು ಹೆಸರಿಸಲು ಯೋಗ್ಯ. ಕಮ್ಯುನಿಸ್ಟೇತರ ಪ್ರಗತಿಗಾಮಿ ಲೇಖಕರಲ್ಲೂ ಅನೇಕರು ಯಶಸ್ವಿ ನಾಟಕಗಳನ್ನು ಬರೆದು ಪ್ರಯೋಗಿಸಿದರು. ಚೆರುಕಾಟ್ ಬರೆದ 'ನಾವೊಲ್ಲಾ ಒನ್ನು' (ನಾವೆಲ್ಲಾ ಒಂದು) 'ಇನ್‌ಕ್ವಿಲಾಬ್‌ವುಂಟೆ ಮಕ್ಕಲ್' (ಕ್ರಾಂತಿಯ ಮಕ್ಕಳು) ಸದಾ ನಂದ ಅವರ 'ಓನಾಲ್ ಕೂಡಿ ಕಾಲಂಜ್ಞಿ' (ಅವನೂ ಒಬ್ಬ ಕಳ್ಳನಾದ) ಮುಂತಾದವು ಗಮನ ಸೆಳೆಯುತ್ತವೆ. ಕುರುಪ್, ರಾಮವರ್ಮ ಮತ್ತು ಇತರ ಯುವಕವಿಗಳು ಈ ನಾಟಕಗಳಿಗೆ ರಸಭರಿತ ಹಾಗೂ ಉತ್ತೇಜನಾಪೂರ್ಣ ಹಾಡುಗಳನ್ನು ಬರೆದರು. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಯ್ಯೂರು, ಪುನ್ನಪ್ಪರ, ವಯಲಾರ, ಕಳಿವೆಲ್ಲೂರು, ಕುನ್ನಾಂಬಿ ಮುಂತಾದ ಕಡೆ ನಡೆದ ಶ್ರಮಿಕವರ್ಗದ ಹಾಗೂ ರೈತ ವರ್ಗದ ಹೋರಾಟಗಳೇ ಇವರ ಬರವಣಿಗೆಗೆ ಸ್ಫೂರ್ತಿಯ ನೆಲೆಯಾಗಿದ್ದವು. 1948–50ರ ರಕ್ತಮಯ ಹಾಗೂ ಹುಚ್ಚು ಹಿಡಿತದ ಆಡಳಿತ ಇವರಿಗೆ ಸ್ಫೂರ್ತಿ ಮತ್ತು ಅಂತಃಶಕ್ತಿಯನ್ನು ತಂದುಕೊಟ್ಟಿತು. 'ಕಮ್ಯುನಿಸ್ಟಕಿ' ಎಂಬ ನಾಟಕ ಒಬ್ಬ ಮುಂದ ಗಾಮಿ ರೈತನೊಬ್ಬ ಕ್ರಾಂತಿಕಾರಿ ಕಮ್ಯುನಿಸ್ಟ್‌ಕಾರ್ಯಕರ್ತನಾಗಿ ಪರಿವರ್ತಿತವಾಗುವ ಕ್ರಮವನ್ನು ಹೇಳಿದೆ. 'ನಾಮೆಲ್ಲಾ ಒನ್ನು'ವು ಭೂಮಾಲೀಕನ ವಿರುದ್ಧ ಹಿಂದೂ ಮತ್ತು ಮುಸ್ಲಿಮ್ ಬಡ ರೈತರು ಒಂದಾಗಬೇಕಾಗಿರುವ ಅಗತ್ಯವನ್ನು ತಿಳಿಸುತ್ತದೆ.

ಇಂಥ ನಾಟಕಗಳನ್ನು ರಂಗದಮೇಲೆ ಅಭಿನಯಿಸುತ್ತಿದ್ದವರು ಆಗಿನ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರೇ ಆಗಿದ್ದರೂ ಅದರಲ್ಲೊಂದು ಸಂಗತಿಯು ಮುಖ್ಯವಾಗುತ್ತದೆ. ಈ ನಟವರ್ಗ ತಮ್ಮ ಶ್ರೇಷ್ಠ ಕಲೆಗಾರಿಕೆಯಿಂದ ಕಮ್ಯುನಿಸ್ಟೇತರ ಪ್ರೇಕ್ಷಕ ವರ್ಗವನ್ನು ಆಕರ್ಷಿಸುತ್ತಿತ್ತು. ಕ್ರಮೇಣ ಇಂಥ ನಾಟಕ ಸಭಾಗಳು ವೃತ್ತಿನಿರತ ಕಂಪನಿಗಳಾದದ್ದು ಉಂಟು. ಹೀಗಾದದ್ದಕ್ಕಾಗಿ ಯಾರೂ ವಿಷಾದ ಪಡಬೇಕಾಗಿಲ್ಲ. ಆದರೆ, ಬರಬರುತ್ತಾ ಈ ನಾಟಕ ಸಂಘಗಳ ಕ್ರಾಂತಿಕಾರಿ ಚಳುವಳಿಯಲ್ಲಿ ಪರಿಷ್ಕರಣವಾದ ಮತ್ತು ಸುಧಾರಣ ವಾದ ತಲೆಹಾಕತೊಡಗಿತು. ಕಿರು ಬೂರ್ಜ್ವಾ ವ್ಯಾಪಾರಿ ವೃತ್ತಿ ಕಾಣಿಸಿಕೊಂಡಿತು.

1957–58ರಲ್ಲಿ ಕಮ್ಯುನಿಸ್ಟ್ ಸರ್ಕಾರವು ಇ.ಎಂ.ಎಸ್. ನಂಬೂದಿರಿಪಾಡ್ ಮುಖ್ಯ

ಮಂತ್ರಿತ್ವದಲ್ಲಿ ಅಧಿಕಾರಕ್ಕೆ ಬಂದಿತು. ಇದು ಕಮ್ಯುನಿಸ್ಟ್ ಕಾರ್ಯಕರ್ತರಲ್ಲಿ ಅನೇಕರಿಗೆ ತಮ್ಮ ಚಟುವಟಿಕೆಯ ಬಗ್ಗೆ ತಪ್ಪು ಅಭಿಪ್ರಾಯ ಹೊಂದುವಂತಾಯಿತು. ಈಗ ತಮ್ಮ ಪಕ್ಷದ ಸರ್ಕಾರವೇ ಅಧಿಕಾರದಲ್ಲಿರುವುದರಿಂದ ರಾಜಕೀಯ ಹಾಗೂ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ತೀವ್ರತರ ವರ್ಗ ಹೋರಾಟದ ಬದಲು 'ಅಭಿವೃದ್ಧಿ ಚಟುವಟಿಕೆಗಳು' ಎಂದು ಕರೆಯುವ ಚಟುವಟಿಕೆಗಳ ಬಗ್ಗೆ ಕಾತರರಾಗಬೇಕೆಂಬುದು ಅವರ ತಪ್ಪುಭಾವನೆಯಾಗಿತ್ತು. ಆದ್ದರಿಂದಲೇ ಥೊಪ್ಪಲ್‌ಬಾಸಿ ಅವರು ರೈತರ ಹೋರಾಟದಲ್ಲಿ 'ಅಧಿಕ ಉತ್ಪಾದನೆ'ಯನ್ನು ಒತ್ತಿ ಹೇಳುವ 'ಪುತಿಯ ಭೂಮಿ ಪುತಿಯ ಆಕಾಶ' (ಹೊಸ ಭೂಮಿ ಹೊಸ ಆಕಾಶ) ಎಂಬ ನಾಟಕವನ್ನು ಬರೆದರು. ಮತ್ತು ಕೇರಳದ ಪ್ರಗತಿಪರ ಸಾಹಿತ್ಯ ಮತ್ತು ಕಲಾವಿದರ ಸಂಘ ಅದನ್ನು ಅತ್ಯುತ್ಸಾಹದಿಂದ ಅಭಿನಯಿಸಿದರು. ಇದೇ ಈ ಸಂಘವು ಹೊಂದಿದ್ದ ಧ್ಯೇಯದ ನಾಶಕ್ಕೆ ನಾಂದಿಯಾಯಿತು. ಅದರ ಚರಿತ್ರೆಯಲ್ಲಿ ಅದೊಂದು ಗುರುತಿಸುವ ಘಟ್ಟವಾಯಿತು. ಇಲ್ಲಿಂದ ಮುಂದೆ ಈ ಸಂಘವು ಅನೇಕ ಭಾವನಾತ್ಮಕ, ಹೆಚ್ಚು ಕಡಿಮೆ ಕೊನೆಯ ದಶಕ ಮಧ್ಯಯುಗದ ಬ್ರಿಟನ್ನಿನ 'ನೀತಿಬೋಧಕ' ನಾಟಕಗಳ ಮಾದರಿಯಲ್ಲಿ ಅಭಿನಯಿಸತೊಡಗಿದರು. ಈ ಸ್ವನಾಶಪ್ರಕ್ರಿಯೆ ನಾಟಕಕ್ಷೇತ್ರಕ್ಕೆ ಮಾತ್ರ ಮೀಸಲಾಗಲಿಲ್ಲ. ಭಾಸಿ ಮುಂತಾದ ಹಲವಾರು ಜನ ನಾಟಕಕ್ಷೇತ್ರವನ್ನು ಬಿಟ್ಟು ಸಿನಿಮಾಕ್ಷೇತ್ರಕ್ಕೆ ಹೋದರು. ಹೀಗೆ ಅವರುಗಳು ಮಾಡಿದ್ದು ಅವರ ಸಂಘದ ಮೊದಲ ಆದರ್ಶಗಳನ್ನು ಬಲಿಕೊಟ್ಟ ಹಾಗೆಯೇ ಎಂಬುದು ಗಮನಾರ್ಹ. ಬಾಲನ್, ಎಂ. ಎಸ್. ಕುರುಪ್, ಕೆ. ಪಿ. ಜಿ. ಮತ್ತು ಚೆರುಕಾಟ್ ಮುಂತಾದ ಅನೇಕರು ವಂಚಕರ ಈ ಹುಚ್ಚು ಅಭಿಪ್ರಾಯಕ್ಕೆ ಬಲಿಬೀಳಲಿಲ್ಲ. ಇನ್ನು ಕೆಲವರು ಆಡಳಿತವರ್ಗದ ಮತ್ತು ಇತರ ಅನೇಕ ಪ್ರತಿಗಾಮಿ ಸಂಸ್ಥೆಗಳಾದ ವಿಶ್ವವಿದ್ಯಾನಿಲಯ, ಸ್ಟುಡಿಯೋ, ಆಕಾಶವಾಣಿ ಮುಂತಾದ ಕಡೆ 'ಆಶ್ರಯ' ಪಡೆಯಲಾರಂಭಿಸಿದರು. ಓ. ಎಸ್. ಪಿ. ಕುರುಪ್ ಮತ್ತು ಪಿ. ಬಾಸ್ಕರನ್ ಮುಂತಾದ ಅನೇಕರು ತಮ್ಮ ಮೊದಲ ಪ್ರಗತಿಪರ ಚಟುವಟಿಕೆಗಳ ಬಗ್ಗೆ ಪಶ್ಚಾತ್ತಾಪ ಪಟ್ಟದ್ದು ನಾಚಿಕೆಗೇಡಿನ ವಿಷಯ. ಭಾಸಿ ಮುಂತಾದವರು ತಾವು ಮಾಡುತ್ತಿರುವುದು 'ಸೃಜನಶೀಲ ಮಾರ್ಕ್ಸ್‌ವಾದ' ಚಟುವಟಿಕೆಗಳು ಎಂದೂ ವರ್ಣಿಸಿಕೊಂಡರು.

ಹೀಗೆ ಅರವತ್ತರ ದಶಕದ ಮಧ್ಯದಲ್ಲಿ ಕೇರಳ ಪ್ರಗತಿಪರ ಸಾಹಿತ್ಯ ಮತ್ತು ಕಲಾ ಚಳುವಳಿಯಲ್ಲಿ ಅನೇಕ ಬಿರುಕುಗಳು ಕಾಣಿಸಲಾರಂಭಿಸಿದ್ದವು. ಹತ್ತಾರು ಧೀಮಂತ ಪ್ರಗತಿಪರ ಸಾಹಿತಿಗಳಿದ್ದರೂ ಈ ಅಳಿವನ್ನು ತಪ್ಪಿಸಲಾಗಲಿಲ್ಲ.

ಸ್ವಾತಂತ್ರ್ಯಾನಂತರದ ಎರಡು ದಶಕಗಳಲ್ಲಿ, ಪ್ರಜ್ಞಾಪೂರ್ವಕ ಪ್ರಗತಿಪರ ಚಳುವಳಿಯಿಂದ ಮತ್ತು ಕಮ್ಯುನಿಸ್ಟರಿಂದ ತಮ್ಮನ್ನು ಸ್ಪಷ್ಟವಾಗಿ ಬೇರ್ಪಡಿಸಿಕೊಂಡ ಎರಡು ಮಾರ್ಗಗಳು ಹುಟ್ಟಿಕೊಂಡವು. ಅವುಗಳಲ್ಲಿ ಒಂದನೆಯದು 'ಜನಪ್ರಿಯ ಲೇಖ'ಕರು ಮತ್ತು ಕಾದಂಬರಿಕಾರರು. ಉದಾಹರಣೆಗೆ, ಎಂ. ಟಿ. ವಾಸುದೇವನ್ ನಾಯರ್ ಮತ್ತು ಉರುಬ್ ಮುಖ್ಯರು. ಈ ಮಾರ್ಗವನ್ನು ಅನುಸರಿಸದವರಲ್ಲಿ ಕೆಲವು ಗಮನಾರ್ಹ

ಕವಿಗಳೂ ಇದ್ದಾರೆ. ವೆಲೊಪ್ಪಳ್ ಶ್ರೀಧರನ್, ಮೆನನ್, ವಿ. ವಿ. ಕೃಷ್ಣನಾರಿಯರ್ ತಡ್ಡೆ ಸಿ ಗೋವಿಂದನ್ ನಾಯರ್ ಮುಂತಾದವರಿದ್ದರು. ಪಟ್ಟಕವನ್ನು ಹಾದ ಬೆಳಕಿನ ವಿವಿಧ ಬಣ್ಣಗಳಂತೆ, ಇವರಲ್ಲೇ ಅನೇಕ ತಂಡಗಳನ್ನು ಗುರುತಿಸಬಹುದು. ಊಳಿಗಮಾನ್ಯ ಪದ್ಧತಿಯನ್ನು ಅದರ ಮೌಲ್ಯಗಳನ್ನು ವಿಶ್ಲೇಷಿಸುವುದು ಮತ್ತು ಹಳೆಯ ಜೀವನ ಕಳೆದುಕೊಂಡು ಹೊಸ ಜೀವನಕ್ಕೆ ಒಗ್ಗಿಸಿಕೊಳ್ಳಲಾರದವರ ದುರಂತತೆಯನ್ನು ಚಿತ್ರಿಸುವುದು ಎಂ. ಟಿ. ವಾಸುದೇವನ್‌ನಾಯರ್ ಅವರ ಅನೇಕ ಕೃತಿಗಳ ಜೀವಾಳವಾಗಿತ್ತು. ಉರುಬ್ ಅವರೂ ಇದಕ್ಕಿಂತ ಹೆಚ್ಚಿನದನ್ನೇನೂ ಸಾಧಿಸಲಿಲ್ಲ. ಮೇಲಿನ ಕವಿಗಳು ಪ್ರಜ್ಞಾಪೂರ್ವಕವಾಗಿ ಮಾರ್ಕ್ಸ್‌ವಾದವನ್ನು ಅಳವಡಿಸಿಕೊಂಡು ಬರೆದವರಲ್ಲ. ಆದರೆ ಅವರು ಶ್ರಮಿಕ ವರ್ಗ ಮತ್ತು ಪ್ರಗತಿ ಮುಂತಾದ ಶಬ್ದಗಳನ್ನು ಮಲೆಯಾಳಂ ಸಾಹಿತ್ಯದಲ್ಲಿ ಬಳಸಿದ ಮೂಲ ಪುರುಷರು. ಅವರಿಗೆ ಶ್ರಮಿಕ ವರ್ಗದ ಪ್ರಗತಿ ಬಗ್ಗೆ ಇದ್ದದ್ದು ಕೇವಲ ಗೊಂದಲಗೊಳಿಸಿದ ಅನುಕಂಪ ಮತ್ತು ಅಪೂರ್ಣ ತಿಳುವಳಿಕೆ. ನಾವು ಇಂಥ ಜನಾಂಗದೊಡನೆ ಕೆಲಸ ಮಾಡಲು ಐಕ್ಯ ಮತ್ತು ಹೋರಾಟದ ಸೂತ್ರವನ್ನು ಹಿಡಿಯಬೇಕಾಗುತ್ತದೆ.

ಪ್ರಗತಿಪರ ಸಾಹಿತ್ಯ ಚಳುವಳಿಗೆ ಕಗ್ಗತ್ತಲೆ ಕವಿದಾಗ ಕಾಣಿಸಿಕೊಂಡ ಎರಡನೇ ಸಾಹಿತ್ಯಮಾರ್ಗಿಗಳೇ 'ನವ್ಯತೆ'ಯ ಅಥವಾ 'ಹೊಸ ಹುರುಪಿನ ನವ್ಯತೆ'ಯ ಪ್ರತಿಪಾದಕರು. ಅಯ್ಯಪ್ಪ ಪಣಿಕ್ಕರ್ ಕವಿಗಳು ಮುಕುಂದ, ಕಕ್ಕನಾಡ್ ಮತ್ತು ಎಂ. ಗೋವಿಂದನ್ ಮುಂತಾದವರು ಈ ಗಬ್ಬುನಾತದ ಮತ್ತು ಅರಾಜಕತೆ ಸಾಹಿತ್ಯದ ಪ್ರಮುಖ ಪ್ರವರ್ತಕರಾಗಿದ್ದರು. ಅವರು ಹೇಳಿಕೊಳ್ಳುತ್ತಿದ್ದುದೇನೋ ತಾವು ವ್ಯವಸ್ಥೆಯನ್ನು ಪ್ರತಿಭಟಿಸುವ ಧ್ವನಿ ಎಂದು. ಆದರೆ ತಮ್ಮ ಅರಾಜಕತೆಯ ಅಮಲಿನಲ್ಲಿ ಅವರು ಮಾಡುತ್ತಿದ್ದುದು, ವ್ಯವಸ್ಥೆಯನ್ನು ಎದುರಿಸುವುದಕ್ಕಿಂತ ಹೆಚ್ಚಾಗಿ ಕ್ರಾಂತಿಕಾರಿ ಚಳುವಳಿಗೆ ನಿರಂತರ ಭಂಗ. ವ್ಯವಸ್ಥೆ ಇವರನ್ನು ನಗೆ ಮಿಶ್ರಿತ ಅಸಡ್ಡೆಯಿಂದ ನೋಡಿತು. ಇವರು ತಮ್ಮನ್ನು ನವ್ಯರು ಅಥವಾ ಆಧುನಿಕರು ಎಂದು ಕರೆದುಕೊಂಡರಲ್ಲ, ಬಹುಶಃ ಇದು ಇವರು ಹುಟ್ಟಿದ ಕಾಲನಷ್ಟೇ ಹೊರತು ಇವರ ಆದರ್ಶ ಅಥವಾ ವಿಚಾರಧಾರೆಯಂತೂ ನವ್ಯವೂ ಅಲ್ಲ ಆಧುನಿಕವೂ ಆಗಿರಲಿಲ್ಲ. 'ಕಲೆಗಾಗಿ ಕಲೆ' ಎಂಬ ಹಳೆಯ ಗೊಡ್ಡು ತತ್ವಕ್ಕೆ ಬಿದ್ದ ಕಾರಣ, ಸಮಾಜದತ್ತ ಇವರು ಬೇಜವಾಬುದಾರಿ ಜನರೆನಿಸಿಕೊಂಡರು. ಆದಿ ಕಾಲದ ಋಷಿಗಳು ತಮ್ಮ ಸೃಜನ ಶೀಲಕೃತಿಗಳು ಭಾರತದ ದಿವ್ಯ ಶಾರದೆಯ ದಯಾಪೂರ್ಣ ವರದಾನದಿಂದ ಬರುತ್ತದೆಂದು ಹೇಳುತ್ತಿದ್ದರು. ಈ ನವ್ಯರು ಇದೇ ಮಾತನ್ನು ಬೇರೆ ಬಣ್ಣಕಟ್ಟಿ ಹೇಳುತ್ತಾರೆ. ಇವರಿಗೆ ಸಾಹಿತ್ಯ ತಮ್ಮ ಪ್ರತಿಭಾವಂತನೊಬ್ಬನ 'ಆತ್ಮ ಸಂವಾದ'ದಿಂದ ಹೊರಬಿದ್ದದ್ದು. ಈ 'ಆತ್ಮ ಸಂವಾದ' ನಡೆಯುವುದು ತಾವು ಹುಟ್ಟು, ತಿಂದು ಬೆಳೆದ ಸಮಾಜಕ್ಕಾಗಿಯೂ ಅಲ್ಲ. ಸಮಾಜದಿಂದಲೂ ಅಲ್ಲ.

ಅರವತ್ತರ ಮಧ್ಯದಲ್ಲಿ, ಇದು ಕೇರಳದ ಸಾಹಿತ್ಯಕ ಚಟುವಕೆಯಾಗಿತ್ತು. ಆಗಲೇ ಭಾರತದ ಹಾಗೂ ಕೇರಳದ ಆರ್ಥಿಕ ಹಾಗೂ ರಾಜಕೀಯ ಸನ್ನಿವೇಶ ಬದಲಾಗಿ ಹೊಸ ಸ್ವರೂಪ ಪಡೆಯಿತು. ಚೈನಾ ಮತ್ತು ಪಾಕಿಸ್ತಾನ ಮತ್ತು ಭಾರತ ನಡುವಣ ಘರ್ಷಣೆ

ಯನ್ನು ಇಲ್ಲಿನ ಆಳುವ ಪಕ್ಷ ಮತ್ತು ಅದರ ಹಿಂದಿನ ವರ್ಗ ಬಹಳ ಆಮೋದ ಪೂರ್ಣ ವಾಗಿ ರಾಜಕೀಯಕ್ಕೆ ಉಪಯೋಗಿಸಿಕೊಂಡರೂ ಅದು ತನ್ನೆಲ್ಲಾ ಶಕ್ತಿಗಳನ್ನು ಕೇಂದ್ರೀ ಕರಿಸಿಕೊಳ್ಳಲು ವಿಫಲವಾಯಿತು. ಆಳುವ ಪಕ್ಷ ಈ ಸಂದರ್ಭದಲ್ಲಿ ಕುರುಡಾಗಿ ವರ್ತಿಸಿತು ಮತ್ತು ಹಳೆಯ ಕಮ್ಯುನಿಸ್ಟ್ ಪಕ್ಷದನಾಯಕತ್ವ 'ಸುಧಾರಣಾವಾದದ' ಬಿಸಿಲುಗುದುರೆ ಯನ್ನೇರಿತು. ಗುಂಪುಗಾರಿಕೆ ಪ್ರಾರಂಭವಾಗಿದ್ದರಿಂದ ಕಮ್ಯುನಿಸ್ಟ್ ಪಕ್ಷ ರಾಷ್ಟ್ರಮಟ್ಟದ ರಾಜಕೀಯದಲ್ಲಿ ಪ್ರಭಾವಶಾಲೀ ಶಕ್ತಿಯಾಗಿ ಬೆಳೆಯಲಿಲ್ಲ. ಭಾರತ ಕಮ್ಯುನಿಸ್ಟ್ ಪಕ್ಷದಲ್ಲಿ ತೀವ್ರತರ ಸಮಸ್ಯೆಗಳು ಹುಟ್ಟಿ ಸರ್ವಕಾಲ ಸತ್ಯದ ಶ್ರಮಿಕ ವರ್ಗದ ತಾತ್ತ್ವಿಕ ನೆಲೆಯನ್ನು ಒಪ್ಪಿದ ಮಾರ್ಕ್ಸಿಸ್ಟ್ ಪಕ್ಷ ಅದರಿಂದ ಒಡೆದುಬಂದದ್ದು ಸುಧಾರಣಾವಾದಿ ಕಮ್ಯುನಿಸ್ಟ್ ವಂಚಕರಿಗೆ ತೀವ್ರಪೆಟ್ಟು ಬಿದ್ದಂತಾಯಿತು. ಭಾರತ ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸ್‌ವಾದಿ) ಹೀಗೆ 1964ರಲ್ಲಿ ಉದಯವಾಯಿತು. ಅದೇ ವರ್ಷ ಪಂಡಿತ ಜವಹರಲಾಲರು ನಿಧನರಾದರು. ಇದರಿಂದ ಆಳುವ ಪಕ್ಷ ಇನ್ನೂ ನಿಶ್ಯಕ್ತಗೊಂಡಿತು. ನೆಹರು ಆಳ್ವಿಕೆಯ ನಂತರ ಬಂದ ಆಳುವ ಪಕ್ಷದ ನಾಯಕರು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷವನ್ನು ಬಹುತೇಕ ನಿರ್ನಾಮಗೊಳಿಸುವ ಕಾರ್ಯದಲ್ಲಿ ನಿರತರಾದರು. ಸಾವಿರಾರು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್‌ಪಕ್ಷದ ಕಾರ್ಯಕರ್ತರನ್ನು ಜೈಲಿಗೆ ಹಾಕಿದರು. ಬೆಲೆಗಳು ಗಗನಕ್ಕೇರಿದವು. ಕೈಗಾರಿಕೋತ್ಪನ್ನ ಕುಸಿಯಿತು. ಆಹಾರದ ಉತ್ಪಾದನೆಯ ಕನಿಷ್ಟ ಮಟ್ಟ ಇಳಿಯಿತು. ಅಮೆರಿಕಾ ಸಾಮ್ರಾಜ್ಯಷಾಹಿಯ ಒತ್ತಡಕ್ಕೆ ಒಳಗಾಗಿ ರೂಪಾಯಿಯನ್ನು ಅಪಮೌಲ್ಯಗೊಳಿಸಲಾಯಿತು. 1967ರ ಚುನಾವಣೆಯಲ್ಲಿ ದೇಶದ ಅರ್ಧಕ್ಕೂ ಹೆಚ್ಚಿನ ರಾಜ್ಯಗಳಲ್ಲಿ ಕಾಂಗ್ರೆಸ್ ಅಧಿಕಾರ ಹಿಡಿಯಲಾಗಲಿಲ್ಲ. ರಾಜಕೀಯ ಏರಿಳಿತಗಳು, ಆ ನಂತರ ಆದ ಕಾಂಗ್ರೆಸ್ ಹಾಗೂ ಇತರ ಪಕ್ಷಗಳಲ್ಲಿ ಆದ ಒಡಕುಗಳು, ಸಂಯುಕ್ತ ರಂಗಗಳು, ಬಂಗ್ಲಾದೇಶ ವಿಮೋಚನೆ ಮತ್ತು ಪ್ರಜಾಪ್ರಭುತ್ವಕ್ಕೆ ಹಿಡಿಯುತ್ತಿರುವ ಗ್ರಹಣ ಮುಂತಾದ ಅನೇಕ ವಿಚಾರಗಳೂ ಘಟನೆಗಳೂ ಪ್ರಗತಿಪರ ಸಾಹಿತ್ಯದ ಪುನರುಜ್ಜೀವನಕ್ಕೆ ಹೊಸ ಹಿನ್ನೆಲೆಯಾಗಬೇಕಾಗಿತ್ತು. ಆದರೆ ಇಲ್ಲಿ ಅಂಥ ಯಾವ ಸೃಷ್ಟಿಯೂ ಆಗಲಿಲ್ಲ.

ಅರವತ್ತರ ದಶಕದ ಕೊನೆಯರ್ಧದಲ್ಲಿ ಕೇರಳದಲ್ಲಂತೂ ದೊಡ್ಡ ಪ್ರಮಾಣದಲ್ಲಿ ಪ್ರಗತಿ ಪರ ಸಾಹಿತ್ಯವು ಪುನರುಜ್ಜೀವನಗೊಂಡಿತು. ರಾಜ್ಯಾದ್ಯಂತ ಹರಡಿರುವ ದೇಶಾಭಿಮಾನಿ ಅಧ್ಯಯನ ಗುಂಪುಗಳು ಇಂಥ ಸಾಹಿತ್ಯ ಚಟುವಟಿಕೆಯ ಮುಂದಾಳತ್ವ ವಹಿಸಿದೆ.

ದೇಶಾಭಿಮಾನಿ ಅಧ್ಯಯನ ಗುಂಪು ತನ್ನ ಚಟುವಟಿಕೆಗಳನ್ನು ಮೂವತ್ತು-ನಲವತ್ತರ ದಶಕದಲ್ಲಾದ ಪ್ರಗತಿಪರ ಸಾಹಿತ್ಯ ಚಟುವಟಿಕೆಗಳಂತೆ ಉದಾ : ಪ್ರಗತಿಪರ ಬರಹಗಾರರ ಸಂಘಗಳು ಮಾಡಬೇಕೆನ್ನುತ್ತದೆ. ಆದರೆ ಅಂಥ ಚಟುವಟಿಕೆಗಳು ಆಗಿನವುದಕ್ಕಿಂತ ಮೇಲ್ಪಟ್ಟದ್ದಾಗಿಯೂ ಮತ್ತು ಬೇರೆ ರೀತಿಯದ್ದಾಗಿಯೂ ಇರುತ್ತದೆ. ಇದರ ಹೆಸರೇ ಹೇಳುವಂತೆ ಇದು ಅಧ್ಯಯನ ಗುಂಪು. ಅಂದರೆ ವಿಶಾಲ ತಳಹದಿಯ ಅಧ್ಯಯನ ಕೇಂದ್ರ. ಈ ಕೇಂದ್ರಗಳು, ಕಮ್ಯುನಿಸ್ಟ್ ಬರಹಗಾರರಿಂದ ರೂಪಿತಗೊಂಡಿದ್ದರೂ, ಇದರಲ್ಲಿ ವಿವಿಧ ತಾತ್ತ್ವಿಕ ನೆಲೆಯುಳ್ಳ ಬರಹಗಾರರಿಗೂ ಸ್ವಾಗತವಿದೆ. ಇದರ ವೇದಿಕೆಯ ಹಾಗೂ

ವಿಚಾರ ಸಂಕಿರಣಗಳಲ್ಲಿ ವಿವಿಧ ತಾತ್ತ್ವಿಕ ಸೆಲೆಯ ಖ್ಯಾತಿವೆತ್ತ ಬರಹಗಾರರು ಹಾಗೂ ಕೇಂದ್ರದ ಆಶಯುವನ್ನು ಪ್ರಶ್ನಿಸುವ ಬರಹಗಾರರೂ ಬರುತ್ತಾರೆ. ಮಾರ್ಕ್ಸ್‌ವಾದಿಗಳು ಇದರಿಂದ ತಮ್ಮ ವೃತ್ತಿಯನ್ನು ಹಾಗೂ ರಾಜಕಾರಣವನ್ನು ಕಲಿತುಕೊಳ್ಳಲು ಅವಕಾಶ ವಾಗುತ್ತದೆ. ಇದರಿಂದ ಪರಕೀಯ ಪರಿಸ್ಥಿತಿಯಲ್ಲಿ ಹೋರಾಡಲು ಸಾಧ್ಯವಾಗುತ್ತದೆ. ಅಷ್ಟೇ ಅಲ್ಲದೆ ಇಂಥ ಚರ್ಚೆಯಿಂದ ಅವರು ಉತ್ತಮಗೊಳ್ಳುವುದಲ್ಲದೆ ಇತರರು ವ್ಯಕ್ತ ಪಡಿಸಿದ ವಿಚಾರ, ಆದರ್ಶ ಹಾಗೂ ಕ್ರಮಗಳಲ್ಲಿ ಇರುವ ಅತ್ಯುತ್ತಮ ಅಂಶಗಳನ್ನು ಅವರು ಅಳವಡಿಸಿಕೊಳ್ಳಲು ಅನುಕೂಲವಾಗುತ್ತದೆ. ದೇಶಾಭಿಮಾನಿ ಅಧ್ಯಯನ ಕೇಂದ್ರಗಳಿಗೆ ಸ್ಪಷ್ಟವಾಗಿ ನಿರೂಪಿಸಿದ ಸಿದ್ಧಾಂತವಾಗಲೀ ಖಾಯಂ ಸದಸ್ಯತ್ವವಾಗಲೀ, ಗೊತ್ತುಪಡಿಸಿದ ನಡವಳಿಕೆಯಾಗಲೀ ಇಲ್ಲದಿದ್ದರೂ, ಇದರ ನೂರಾರು ಶಾಖೆಗಳು ಹುಟ್ಟಿಕೊಂಡಿವೆ.

ಸಂಪ್ರದಾಯ ಬರಹಗಾರರು ನವ್ಯ ಬರಹಗಾರರು ಮೊದ ಮೊದಲು ಕೇಂದ್ರದ ಚಟು ವಟಿಕೆಗಳನ್ನು ಕಡೆಗಣಿಸಿದರು. ಈಗೀಗ ಅವರೂ ತಮ್ಮ ತಮ್ಮ ವೇದಿಕೆಗಳನ್ನು ರೂಪಿಸಿ ಕೊಳ್ಳುತ್ತಿದ್ದಾರೆ. ಹೀಗೆ ತಮ್ಮನ್ನು ರಕ್ಷಿಸಿಕೊಳ್ಳಲು ಹೆಣಗುತ್ತಿರುವ ಕಮ್ಯುನಿಸ್ಟ್ ವಿರೋಧಿ ಬಣಗಳಲ್ಲಿ ಬರುವವರುಅರಾಜಕತೆ ಪ್ರಿಯರು, ಮತ್ತು ತೀವ್ರ ನವ್ಯರು. ಇತ್ತೀಚೆಗೆ ಅನೇಕ ಪ್ರಕಟಣ ಸಂಸ್ಥೆಗಳು ಮತ್ತು ನಿಯತ ಕಾಲಿಕಗಳು ಕೇಂದ್ರದ ಈ ಹೊಸ ಸಾಹಿತ್ಯವನ್ನು ಸೃಷ್ಟಿಸಲು ಮುಂದೆ ಬಂದಿದ್ದಾರೆ. ಅನೇಕ ಹಳೆಯ ಪ್ರಗತಿಪರ ಲೇಖಕ ಶ್ರೇಷ್ಠರು, ಉದಾಹರಣೆಗೆ ಚೆರುಕಾಟ್, ಎಂ. ಎಸ್. ಕುರುಪ್, ಪುಂಡಲೂರು ಬಾಲನ್ ಮುಂತಾ ದವರು ಇದ್ದಾರೆ. ಹೊಸ ಜನಾಂಗದ ನಾಟಕಗಾರರು. ಕವಿಗಳು, ಸಣ್ಣ ಕಥೆಗಾರರು ಮತ್ತು ಕಾದಂಬರಿಕಾರರು, ಕೇಂದ್ರದ ಚಟುವಟಿಕೆಗಳಿಂದ ಉತ್ಸಾಹಗೊಂಡು ಆಯಾಯ ಕ್ಷೇತ್ರದಲ್ಲಿ ದುಡಿಯಲು ಮುಂದೆ ಬಂದಿದ್ದಾರೆ. ಎ. ಪಿ. ಕಲಕ್ಕಾಡ, ಸಿ. ವಿ. ಬಾಲಕೃಷ್ಣ, ಯು. ಪಿ. ಜಯರಾಜ್, ಉಷ ನಂಬಿಯಾರ್ ಮುಂತಾದ ಸಣ್ಣ ಕಥೆಗಾರರು, ವಾಸುದೇವನ್, ಶ್ರೀಧರ, ಮುಂತಾದ ಕವಿಗಳು ಮತ್ತು ವಸಂತನ್, ಕುಟ್ಟಿಕೃಷ್ಣನ್ ಮುಂತಾದ ವಿಮರ್ಶಕರು, ಜೊತೆಗೆ ಈಗಾಗಲೇ ನೆಲೆ ಪಡೆದಿರುವ ಎಂ. ಆರ್. ಚಂದ್ರ ಶೇಖರನ್, ತಗಡಿ ಶಂಕರನ್, ಅರವಿಂದಾಕ್ಷನ್ ಮುಂತಾದವರು ಕೇಂದ್ರದ ಬುನಾದಿ ಯನ್ನು ಭದ್ರಗೊಳಿಸುತ್ತಾ ಬಂದಿದ್ದಾರೆ.

ಮಲಯಾಳಂ ಸಾಹಿತ್ಯ ಹೀಗೆ ಪ್ರಗತಿಪರ ಚಳುವಳಿಯತ್ತ ಸ್ಪಷ್ಟ ಪುನರುಜ್ಜೀವನ ಗೊಳ್ಳುತ್ತಿದೆ.

---

ಸುಧೀರ್
ಬೇಡೇಕರ್

# ಮರಾಠಿ ಸಾಹಿತ್ಯದ ಸಾಮಾಜಿಕ ಸ್ತರಗಳು

ನಿಜವಾದ ಅರ್ಥದಲ್ಲಿ ಮರಾಠಿ ಸಾಹಿತ್ಯ ಎಂಬುದೇ ಇಲ್ಲ, ಅದು ಇನ್ನೂ ಹುಟ್ಟ ಬೇಕಾಗಿದೆ. 1960ರ ನಂತರ ಮರಾಠಿ ಸಾಹಿತ್ಯವನ್ನು ಗಮನಿಸಿದರೆ, ಈ ಕಾಲ ಮತ್ತು ಸಾಹಿತ್ಯ ಎರಡೂ ಸಂಕೀರ್ಣವೂ ವಿರೋಧಾಭಾಸಗಳಿಂದ ಕೂಡಿದ್ದೂ ಆಗಿದೆಯೆನಿಸುತ್ತದೆ. 'ಮರಾಠಿ' ಮತ್ತು 'ಸಾಹಿತ್ಯ' ಎಂದರೇನೆಂಬುದರ ಬಗ್ಗೆ ಇದ್ದ ಸ್ವೀಕೃತ ಅಭಿಪ್ರಾಯಗಳು ಮೂಲೆಗುಂಪಾದದ್ದೂ ಈ ಅವಧಿಯಲ್ಲೇ. ಹೀಗಾದದ್ದರಿಂದ ಕೆಲವರಿಗೆ ಒಂದು ರೀತಿಯ ಆಘಾತವಾಯಿತು. ಮತ್ತೆ ಕೆಲವರಿಗಂತೂ ದಿಕ್ಕೇ ತೋಚದಾಯಿತು. ಉಳಿದವರಿಗೆ ಮಾತ್ರ ಸಂಪ್ರದಾಯದ ನಲೆಗಟ್ಟನಲ್ಲಿ ಭದ್ರವಾಗಿ ಸ್ಥಾಪಿತವಾದ 'ಮಹಾ ರಾಷ್ಟ್ರ ಸರಸ್ವತಿಯ ಮಂದಿರ'ವು ಭಗ್ನವಾದದ್ದು ಒಂದು ರೀತಿಯ ಸಂತೋಷವನ್ನು ತಂದಿತು. ಚಾರಿತ್ರಿಕ ದೃಷ್ಟಿಯನ್ನಿಟ್ಟುಕೊಂಡು ತೆರೆದ ಮನಸ್ಸಿನಿಂದ ನೋಡುವವರಿಗೆ ಈ ವಿದ್ಯಮಾನವನ್ನು ಅರ್ಥಮಾಡಿಕೊಳ್ಳುವುದು ಕಷ್ಟವೆಂದೇನೂ ತೋರುವುದಿಲ್ಲ. ಆದರೂ ಮೇಲ್ನೋಟಕ್ಕೆ ಕಂಡುಬರುವ ತೊಂದರೆಗಳು ಇವು : ಸಾಹಿತ್ಯದ ಚೌಕಟ್ಟನ್ನು ಬದಲಾ ಯಿಸಬೇಕಾಗಿರುವುದು. ಮರಾಠಿ ಸಾಹಿತ್ಯದ—ಇವನ್ನು ವಿಶಾಲಾರ್ಥದಲ್ಲಿ ಮರಾಠಿ ಸಂಸ್ಕೃತಿಯ–ವ್ಯಾಖ್ಯೆಯನ್ನೇ ಹೊಸದಾಗಿ ರೂಪಿಸಬೇಕಾಗಿರುವುದು. ಸಹಜವಾಗೇ ಕೆಲವರಿಗೆ ಈ ಸಮಸ್ಯೆಗಳು ಅರ್ಥವಾಗುವವುದು ಕಷ್ಟ. ಅಥವಾ ನಾವು ತಿಳಿದಿರುವಷ್ಟು ಸರಳವೂ ಅಲ್ಲ. ಸಾಹಿತ್ಯದ ವಿವಿಧ ಒಲವು (Trends)ಗಳು ಬೇರೆ ಬೇರೆಯಾಗಿ ಗುರು ತಿಸುವಷ್ಟು ಸ್ಪಷ್ಟವಾಗಿಲ್ಲ. ಈವರೆಗೆ, ಸಂಸ್ಕೃತಿಯನ್ನು ಪುನರ್ರೂಪಿಸುವಷ್ಟು ಗಣನೀಯ ರೀತಿಯಲ್ಲಿ, ಪ್ರಜ್ಞಾಪೂರ್ವಕವಾದ, ಸುಸಂಘಟಿತವಾದ ಮತ್ತು ಶಕ್ತಿಯುತವಾದ ಯಾವ ಸಾಹಿತ್ಯಿಕ ಚಳವಳಿಯೂ ಬಂದಿಲ್ಲ. ಆದರೆ ಕೆಲವು ಚಳವಳಿಗಳು ತಮಗೆ ತಾವೇ, ಕೆಲವೊಮ್ಮೆ ಅನಿರ್ಬಂಧಿತವಾಗಿ, ಮತ್ತೆ ಕೆಲವು ಸಲ ಅಡೆತಡೆಗಳೊಂದಿಗೆ ಹುಟ್ಟಿಕೊಳ್ಳು ತ್ತಲೇ ಬಂದಿವೆ ಎಂಬುದು ನಿಸ್ಸಂಶಯ. ಪ್ರಸ್ತುತ ಲೇಖನವನ್ನು ಈ ಅಂಶದ ಚಾರಿತ್ರಿಕ ವಿವರಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಮಹಾರಾಷ್ಟ್ರದಲ್ಲಿ, ನಿಜವಾಗಿ ನೋಡಿದರೆ ತಾತ್ತ್ವಿಕವಾಗಿಯೂ ಸಮುದಾಯವನ್ನೂ ಒಳಗೊಂಡು ಆರಂಭವಾದ ಏಕೈಕ ಚಳವಳಿ ಎಂದರೆ, ಜ್ಞಾನೇಶ್ವರರಿಂದ ಆರಂಭಿಸಲ್ಪಟ್ಟ 'ಸಂತ ಕವಿಗಳ ಭಕ್ತಿ ಪಂಥ'. ಇದರಲ್ಲಿ ಕೆಲವು ಸ್ವಾರಸ್ಯಕರ ಹಾಗೂ ಗಮನಾರ್ಹ ಅಂಶ ಗಳನ್ನು ಗುರುತಿಸಬಹುದು.: ೧. ಬ್ರಾಹ್ಮಣರಿಂದ ಸಾಂಸ್ಕೃತೀಕರಿಸಲ್ಪಟ್ಟ, ಮಡಿವಂತಿಕೆ ಮತ್ತು ಕುರುಡುನಂಬಿಕೆಯ ಧಾರ್ಮಿಕ ಸಂಪ್ರದಾಯದ ವಿರುದ್ಧ ಬಂಡೇಳಲು ಪ್ರಯತ್ನಿ

ಸಿದ್ದು; ಅದರಿಂದ ಬಂಧಿತವಾದ ಭಕ್ತಿಯನ್ನು ನಿಜವಾದ ಭಕ್ತಿಯನ್ನಾಗಿಸಲು ಹೋರಾಡಿದ್ದು; ಆಲೋಚನೆಗೂ ಕ್ರಿಯೆಗೂ ಮಧ್ಯೆ ಇದ್ದ ಬಿರುಕನ್ನು ಕಡಮೆ ಮಾಡಲು ಪ್ರಯತ್ನಿಸಿದ್ದು; ಮತ್ತು ಒಂದು ರೀತಿಯ ಜನಾನುರಾಗವನ್ನೂ ಗಳಿಸಿದ್ದು. ಈ ಸಂತಕವಿಗಳ ತಾತ್ತ್ವಿಕತೆ ಹಿಂದೂಧರ್ಮದ ಮತ್ತು ವರ್ಗವ್ಯವಸ್ಥೆಯ ಚೌಕಟ್ಟಿನಲ್ಲಿ ಇದ್ದಿತೆಂಬುದು ನಿಜ. ಆದರೆ (ದಲಿತ ಪಂಥದವರು ನ್ಯಾಯವಾಗಿಯೇ ಈ ಅಂಶವನ್ನು ಗಮನಿಸಿ ಹೋರಾಡುವಂತೆ) ಯೂರೋಪಿನಲ್ಲಿ ಬಂಡವಾಳಶಾಹಿಯೊಂದಿಗೇ ತಲೆಯೆತ್ತಿದ ಪ್ರೊಟೆಸ್ಟೆಂಟ್ ಬಂಡಾಯದಂತೆ, ಇದೂ ಕೂಡ ಸುಧಾರಣವಾದೀ ಚಳವಳಿಯಾಯಿತೇ ವಿನಾ ಕ್ರಾಂತಿಕಾರಿ ಚಳವಳಿಯಾಗಲಿಲ್ಲ. ಹಾಗಿದ್ದರೂ, ಇಂದಿಗೂ ಲಕ್ಷಾಂತರ ಜನರ ಹೃದಯವನ್ನು ಸೂರೆಗೊಂಡು ಪ್ರಭಾವಶಾಲಿಯಾಗಿ ಉಳಿದುಕೊಂಡು ಬಂದಿರುವ ಪಂಥ ಇದು. ೨. ಈ ಪಂಥ ಸಾಮಾನ್ಯರ ಮರಾಠಿಯನ್ನೆ ಬಳಸಿಕೊಂಡಿತು. ಸಾಹಿತ್ಯದಲ್ಲಿ ಹೊಸ ಹೊಸ ಪ್ರಕಾರ ಮತ್ತು ಶೈಲಿಗಳನ್ನು ರೂಪಿಸಿತು. ಅತಿ ಉನ್ನತ ತಾತ್ತ್ವಿಕ ವಿಚಾರಗಳನ್ನು, ಸೌಂದರ್ಯಾಸ್ವಾದನೆಗೆ ಸಬಂಧಿಸಿದ ವಿಚಾರಗಳನ್ನು, ಜನಸಾಮಾನ್ಯರಿಗೆ ಎಟುಕುವಂಥ ಅನುವಾದಿತ–ಪರಿವರ್ತಿತ ಸಾಹಿತ್ಯ ಕೃತಿಗಳು ಹುಟ್ಟಿಕೊಂಡವು. ೩. ಈ ಪಂಥ ನಗರಗಳಿಂದ ಪಟ್ಟಣಗಳು, ಪಟ್ಟಣಗಳಿಂದ ಹಳ್ಳಿಗಳು ಕೊಂಪೆಗಳಿಗೆ ಹರಡಿಕೊಂಡಿತು. ೪. ಬ್ರಾಹ್ಮಣರಿಂದ ಹಿಡಿದು ಹರಿಜನರ ತನಕ–ಅಷ್ಟೇ ಏಕೆ ಮುಸಲ್ಮಾನರನ್ನೂ ಒಳಗೊಳ್ಳುವಂಥ ಶಕ್ತಿಯನ್ನು, ಜನಾನುರಾಗವನ್ನು ಈ ಭಕ್ತಿಪಂಥ ಪಡೆಯಿತು. ಸಂತರು, ಕವಿಗಳು, ದಾರ್ಶನಿಕರು, ಜನಸಾಮಾನ್ಯರು, ಕೀರ್ತನಕಾರರು—ಹೀಗೆ ಎಲ್ಲ ರೀತಿಯ ಜನರನ್ನು ವಿವಿಧ ಹಂತಗಳಲ್ಲಿ ಒಂದುಗೂಡಿಸಿ ಅವರ ಕಾರ್ಯಾಚರಣೆ–ಚಟುವಟಿಕೆಗಳಿಗೆ ಒಟ್ಟು ಸುಸಂಬದ್ಧ ರೂಪವನ್ನು ತಂದುಕೊಟ್ಟಿತು.

ಭಕ್ತಿಪಂಥದ ಸಾಮಾಜಿಕ ನೆಲೆಗಳನ್ನು ವಿಶ್ಲೇಷಿಸುವುದು, ಅಥವಾ ಆ ಕಾಲದ ವರ್ಗ ಕಲಹದಲ್ಲಿ ಭಕ್ತಿಪಂಥದ ಪಾತ್ರವನ್ನು ಕುರಿತು ಚರ್ಚಿಸುವುದು ಇಲ್ಲಿ ಅನಗತ್ಯ. ಮೇಲೆ ಸೂಚಿಸಿದ ಅಂಶಗಳನ್ನು ಹೆಸರಿಸಲು ಕಾರಣ, ಸಮಾಜವಾದಿ ಚಳವಳಿಗಳೂ ಸೇರಿದಂತೆ ಮಹಾರಾಷ್ಟ್ರದಲ್ಲಿ, ಈ ಶತಮಾನದಲ್ಲಿ ನಡೆಯುತ್ತಿರುವ ಎಲ್ಲಾ ತಾತ್ತ್ವಿಕ ಚಳವಳಿಗೆ ಇವು ಹೇಗೆ ಪೂರಕವಾದ ನೆಲೆಗಳಾಗಿವೆ ಎಂಬುದನ್ನು ತೋರಿಸುವುದು. ದಲಿತಪಂಥದ ಪ್ರಮುಖ ಕವಿಗಳಲ್ಲಿ ಒಬ್ಬರಾದ ನಾಮದೇವ ದಸಾಳ್ ಹೇಳುವಂತೆ "ಮಾರ್ಕ್ಸವಾದ, ಮಹರ್‌ರು ಮತ್ತು ಮಾಂಗ ಜನಾಂಗದಂತೆ ಉಳಿದೆಲ್ಲಾ ಶ್ರಮಿಕರು ತಮ್ಮನ್ನು ರಕ್ಷಿಸಿಕೊಳ್ಳಲು ಉಪಯೋಗಿಸುವ ಅಸ್ತ್ರ. ಈ ಜನ, ಮಧ್ಯಮವರ್ಗದ ಬ್ರಾಹ್ಮಣರೇ ಹೆಚ್ಚಾಗಿರುವ ಮತ್ತು ಇತ್ತೀಚಿನವರೆಗೂ ಮಹಾರಾಷ್ಟ್ರದ ಸಾಂಸ್ಕೃತಿಕ ಮತ್ತು ರಾಜಕೀಯಕ್ಕೆ ಸಂಬಂಧಿಸಿದಂತೆ, ನಾಯಕತ್ವವನ್ನು ವಹಿಸುತ್ತಿದ್ದ ಜನರ ಕೇಂದ್ರವಾದ 'ಸದಾಶಿವ ಪೇಟೆ'ಯನ್ನು ತಮ್ಮ ಕಾರ್ಯಸ್ಥಾನವನ್ನಾಗಿ ಮಾಡಿಕೊಂಡರು. ಮಾರ್ಕ್ಸವಾದವನ್ನು ಗರ್ಭಗುಡಿಗಳಲ್ಲಿಟ್ಟು ಪೂಜೆಮಾಡಿದರು."

ಮರಾಠಿ ಸಾಹಿತ್ಯ ಬರೀ ಬೆರಳೆಣಿಕೆಯಷ್ಟು ಸುಸಂಸ್ಕೃತರ—ಹೆಚ್ಚಾಗಿ ಮಧ್ಯಮ

ವರ್ಗದ ಬ್ರಾಹ್ಮಣರ ಸಾಹಿತ್ಯ ಮಾತ್ರ. ಸಾಹಿತ್ಯವೆಂದರೆ ಮರಾಠಿ ಮಾತನಾಡುವ ಬಹು ಸಂಖ್ಯಾತರ ಸಾಹಿತ್ಯವೆಂದು ಅರ್ಥಮಾಡಿಕೊಂಡರೆ ಜನಪ್ರಿಯ ಮರಾಠಿ ಪತ್ರಿಕೆಗಳಲ್ಲಿ ಪ್ರಕಟವಾಗುವ 'ಸಾಹಿತ್ಯ ಕೂಡಾ ಬರಡುಸಾಹಿತ್ಯ' ಎಂಬ ಕಟುಸತ್ಯ ಗೋಚರಿಸುತ್ತದೆ. ಏಕೆಂದರೆ : ಈ ಸಾಹಿತ್ಯವನ್ನು ಶೇಕಡ ಮೂರುಪಾಲು ಜನರೂ ಇದನ್ನು ಓದುವುದಿಲ್ಲ. ಇನ್ನು ಕಾವ್ಯ ಕಾದಂಬರಿ ಮತ್ತು ಗಂಭೀರ ಸಾಹಿತ್ಯವನ್ನಂತೂ ಕೇಳಬೇಕಾದ್ದೇ ಇಲ್ಲ. ಐದು ಕೋಟಿ ಜನರಿರುವ ನಾಡಿನಲ್ಲಿ ಒಂದು ಪುಸ್ತಕದ ಕೇವಲ ಒಂದು ಸಾವಿರ ಪ್ರತಿಗಳಷ್ಟು ಮಾತ್ರ ಖರ್ಚಾಗುತ್ತವೆ ! ಇದು ಯಾಕಾಗಿ ಮತ್ತು ಹೇಗಾಗಿ ಎಂಬುದನ್ನು ಅರ್ಥಮಾಡಿ ಕೊಳ್ಳಲು ಪರಿಸ್ಥಿತಿಯನ್ನು ಇನ್ನಷ್ಟು ಕೂಲಂಕಷವಾಗಿ ವಿಚಾರಿಸಬೇಕಾಗುತ್ತದೆ. ಇಂಥ ಸಾಹಿತ್ಯ ಒಟ್ಟು ಸಂಸ್ಕೃತಿಯ ಆವರಣದಿಂದ ಹೊರಗೆ ಉಳಿದದ್ದು ಯಾಕೆ ? ಇಂಥ 'ಪ್ರತ್ಯೇಕತೆ'ಗಳು ಸಾಹಿತ್ಯದ ಪ್ರಕಾರ ಮತ್ತು ವಸ್ತುವಿನ ಮೇಲೆ ಪ್ರಭಾವ ಬೀರಿದ್ದು ಹೇಗೆ ? ಅವು ತಮ್ಮಲ್ಲೇ ಇದ್ದ ಒಳ ವೈರುಧ್ಯಗಳು ಮತ್ತು 'ಮರಾಠಿ ಸಾಹಿತ್ಯ'ದ ಕಡೆಗೆ ಅವು ಮುನ್ನಡೆಯಬೇಕಾದ ಅಗತ್ಯ—ಇವುಗಳನ್ನು ಅವಶ್ಯವಾಗಿ ಚರ್ಚಿಸಬೇಕಾಗುತ್ತದೆ.

## ಸ್ವಾತಂತ್ರ್ಯಪೂರ್ವ ಸಾಹಿತ್ಯ.

ಸಾಮಾಜಿಕ ಸನ್ನಿವೇಶ : ಇಂದಿನ ಸಾಹಿತ್ಯವನ್ನು ಚರ್ಚಿಸಲು, ಅನುಕೂಲವಾಗುವಂತೆ ಅದರ ಹಿನ್ನಲೆಯಾಗಿ ಬರುವ ಸ್ವಾತಂತ್ರ್ಯಪೂರ್ವ ಮರಾಠಿ ಸಾಹಿತ್ಯದ, ಮತ್ತು ಸಂಸ್ಕೃತಿಯ ಚಿತ್ರವನ್ನು ಸ್ಥೂಲವಾಗಿ ವಿಚಾರಿಸೋಣ. ಕಳೆದ ಶತಮಾನದ ಉತ್ತರಾರ್ಧ ದಲ್ಲಿ, ಮಹಾರಾಷ್ಟ್ರದಲ್ಲಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗಳಿಗೆ ಬ್ರಿಟಿಷ್ ಸಾಮ್ರಾಜ್ಯವಾದೀ ಧೋರಣೆ ನಾಂದಿ ಹಾಡಿತು. ಯಾವುದೇ ರೀತಿಯ ಉತ್ಪಾದನಾ ಕ್ರಮಕ್ಕೂ ಒಳಪಡದ ಮಧ್ಯಮ ವರ್ಗದ ಬ್ರಾಹ್ಮಣರು 'ಪ್ರತಿಷ್ಠಿತ' ಜನರೆನ್ನಿಸಿಕೊಂಡು ಮುಂದಿನ ನೂರು ವರ್ಷಗಳಲ್ಲಿ, ರಾಜಕೀಯ ಮತ್ತು ಸಾಂಸ್ಕೃತಿಕ ಜೀವನದ ಮುಂದಾಳುಗಳೆನ್ನಿಸಿಕೊಂಡರು. ಇವೆಲ್ಲದರ ಜೊತೆಗೆ ಸದ್ದುಗದ್ದಲವಿಲ್ಲದೆ ಬದುಕುತ್ತಿದ್ದ ಸಮುದಾಯದ ಸಂಪ್ರದಾಯಬದ್ಧವಾದ ಸಂಸ್ಕೃತಿಯೊಂದನ್ನು ಬಿಟ್ಟರೆ, ಮರಾಠಿ ಸಂಸ್ಕೃತಿಯ ಚರಿತ್ರೆಯೆಂದರೆ, ಈ ಮಧ್ಯಮ ವರ್ಗದ ಬ್ರಾಹ್ಮಣರು ಸೃಷ್ಟಿಸಿದ ಚರಿತ್ರೆ ಎಂದೇ ಅರ್ಥ. ಏಕೆಂದರೆ ಮೇಲೆ ಹೇಳಿದ ಬದಲಾವಣೆಗಳು ಹಳ್ಳಿಯ ಸಮು ದಾಯವನ್ನು ಎಲ್ಲೋ ಕೆಲವಂಶಗಳಲ್ಲಿ ಮುಟ್ಟಿತೇ ವಿನಾ ಇಡಿಯಾಗಿ, ಆಳವಾಗಿ ಮುಟ್ಟಲಿಲ್ಲ.

ಇಂಥ 'ಚರಿತ್ರೆ'ಯನ್ನು ಹಲವು 'ಕಾಲ'ಗಳನ್ನಾಗಿ ವಿಭಾಗಿಸಬಹುದು.

೧. ಆಧುನಿಕ ಪೂರ್ವಕಾಲ (1840–1870) ಬ್ರಿಟಿಷರ ಸಾಮ್ರಾಜ್ಯವಾದೀ ಧೋರಣೆ ಮತ್ತು ಶೋಷಣಾ ವಿಧಾನಗಳು, ಇಲ್ಲಿನ ಪ್ರತಿಷ್ಠಿತರ ಮೇಲೆ ಬೀರಿದ ಪ್ರಭಾವದ ಪರಿಣಾಮ ವೆಂದರೆ, ಸ್ವವಿಮರ್ಶೆ ; ಮತ್ತು 'ಸ್ವೀಕಾರಯೋಗ್ಯ'ವೆನಿಸಿದ ಪಾಶ್ಚಾತ್ಯ ಸಂಸ್ಕೃತಿಯ ಕೆಲವಂಶಗಳು. ಈ ಪ್ರತಿಷ್ಠಿತರು ಬದಲಾವಣೆಗಾಗಿ ಅಲ್ಲಿ ಇಲ್ಲಿ ನಡೆಸಿದ ಪ್ರಯತ್ನ

ಮುಖ್ಯವಾಗಿ ಧಾರ್ಮಿಕ, ಮತ್ತು ಮಾನವೀಯ ಮತ್ತು ಸಾಹಿತ್ಯಿಕಸ್ವರೂಪವಾದದ್ದು. ರಾಜಕೀಯ ಪ್ರಜ್ಞೆಯಿಂದ ಪ್ರಭಾವಿತವಾದದ್ದಾಗಿರಲಿಲ್ಲ.

೨. ಸಂಕ್ರಮಣಕಾಲ (1870–1920). ಈಗಾಗಲೇ ಗೊತ್ತಿರುವಂತೆ ಈ ಕಾಲದ ಎರಡು ಪ್ರಮುಖ ಸಾಂಸ್ಕೃತಿಕ ಚಳವಳಿಗಳು ಆಗರ್‌ಕರ್ ಮತ್ತು M. G. ರಾನಡೆಯವರಿಂದ ಪ್ರಾರಂಭಿಸಲ್ಪಟ್ಟದ್ದು. ಅಲ್ಲದೆ, ಸಾಮಾಜಿಕವಾಗಿ ಪ್ರತಿಗಾಮಿ ಧೋರಣೆಯನ್ನು ಹೊಂದಿದ್ದು, ದೇಶಪ್ರೇಮದಿಂದ ಉತ್ತೇಜಿತವಾಗಿ, ರಾಜಕೀಯ ಪಟುವಾಗಿ ಹೋರಾಡಿದ ಬಾಲಗಂಗಾಧರ ತಿಲಕರ ಚಳವಳಿ—ಮಧ್ಯಮ ವರ್ಗದ ಸುಶಿಕ್ಷಿತರು—ಈ ಬದಲಾವಣೆಯನ್ನು ನಗರದ ಕಾರ್ಮಿಕವರ್ಗಕ್ಕಾಗಲಿ, ಹಳ್ಳಿಯ ರೈತಸಮುದಾಯಕ್ಕಾಗಲಿ ಸರಿಯಾದ ರೀತಿಯಲ್ಲಿ ಮುಟ್ಟಿಸಲಿಲ್ಲ. ಆಗರ್‌ಕರ್, ರಾನಡೆಯವರ ಚಳವಳಿ ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿ, ಬರಿ ತೇಪೆದಾರಿಯ ಲಿಬರಲ್‌ತನಕ್ಕೆ ಅಂಟಿಕೊಂಡಿದ್ದರೆ, ತಿಲಕರ ಚಳವಳಿಗೆ ರಾಜಕೀಯ ಹೋರಾಟವನ್ನು ಆಂತರಿಕ ಅರ್ಥಿಕ ಮತ್ತು ಸಾಂಸ್ಕೃತಿಕ ಹೋರಾಟಗಳೊಂದಿಗೆ ಬೆಸೆಯುವುದು ಸಾಧ್ಯವಾಗಲಿಲ್ಲ. ಮೂರನೆಯದಾದ ಜ್ಯೋತಿಬಾಫುಲೆ ಮತ್ತು ಅವರ ಸತ್ಯಶೋಧಕ ಸಮಾಜದ ಚಳವಳಿಯ ಧೋರಣೆಗಳು, ಬಹುತೇಕವಾಗಿ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆ ಮತ್ತು ಲೇವಾದೇವಿಗಾರರ ವಿರುದ್ಧ ಮೇಲೆದ್ದ ಕುಣ್ಬಿ ರೈತವರ್ಗವನ್ನು ಪ್ರತಿನಿಧಿಸುತ್ತಿದ್ದವು. (ಇದನ್ನೇ 'ಶೇಟ್‌ಜೀ, ಭಾಟ್‌ಜೀ' ವಿರುದ್ಧ ಎದ್ದ 'ಬಹುಜನ ಸಮಾಜ'ವೆಂದು ಕರೆಯುತ್ತಿದ್ದರು.) ಕ್ರಾಂತಿಕಾರೀ ಕಾರ್ಮಿಕರ ಮುಂದಾಳತ್ವವಿಲ್ಲದ್ದರಿಂದ ಈ ಚಳವಳಿ ಕ್ರಮೇಣ ಶ್ರೀಮಂತ ರೈತರ ಕೈಗೆ ಜಾರಿ ಹಾಳಾಗುವಂತಾಯಿತು. ಆದರೂ, ಈ ಚಳವಳಿಯೇ ಮೊತ್ತಮೊದಲ ಬಾರಿಗೆ ರೈತ ಮತ್ತು ಕಾರ್ಮಿಕ ಸಂಘಟನೆಗಳನ್ನು ನಡೆಸಿ 'ತಮಾಷಾ'ದಂಥ ಜಾನಪದ ಮಾಧ್ಯಮಗಳನ್ನುಪಯೋಗಿಸಿಕೊಂಡು, ಹಳ್ಳಿಯ ಜೀವನವನ್ನು ಕೆಲಮಟ್ಟಿಗೆ ಪ್ರಭಾವಿತಗೊಳಿಸಿತು.

III. 1920ರಿಂದ 1947 : ಈ ಅವಧಿಯಲ್ಲಿ ಆರು ರಾಜಕೀಯ ಸಾಂಸ್ಕೃತಿಕ ಚಳುವಳಿಗಳು ಹುಟ್ಟಿ ಹರಡುವುದನ್ನು ಕಾಣುತ್ತೇವೆ. ೧. ತಿಲಕರ ಪುನರುತ್ಥಾನದ ಸಿದ್ಧಾಂತವನ್ನು ಮೊದಮೊದಲು ಆಧಾರವಾಗಿಟ್ಟುಕೊಂಡಿದ್ದು, ನಂತರ ಸಾವರ್‌ಕರ್‌ರಲ್ಲಿ ಸ್ವತಂತ್ರವಾಗಿ ರೂಪಿತ ಕಾರ್ಯಚಟುವಟಿಕೆಗಳಿಂದ—ಆಮೇಲೆ ಹಿಂದೂ ಮಹಾಸಭೆ, ಆರ್.ಎಸ್. ಎಸ್. ಧೋರಣೆಗಳಿಂದ ನಿರ್ದೇಶಿತವಾದ ಪುನರುತ್ಥಾನವಾದಿಗಳ ಚಳವಳಿ, (militant rivivalist trend) ಮಹಾರಾಷ್ಟ್ರದ ಮಧ್ಯಮ ವರ್ಗದ ಬ್ರಾಹ್ಮಣರಲ್ಲಿ ಬಹಳ ಜನ ಈ ಹಿಂದೂವಾದಿಯ ಧೋರಣೆಯನ್ನು, ಮುಖ್ಯವಾಗಿ ಅದರ ಸಾಂಸ್ಕೃತಿಕ ವಿಚಾರಣೆಗಳನ್ನು ಅನುಸರಿಸಿ ನಡೆದರು. ಇಂದಿಗೂ ಈ ವರ್ಗ ಆರ್. ಎಸ್. ಎಸ್. ಮತ್ತು ಜನಸಂಘಗಳಿಗೆ ಸಾಮಾಜಿಕ ಮೂಲಾಶ್ರಯವಾಗಿದೆ.

ಸೌಮ್ಯವಾದೀ ಲಿಬರಲ್ ಚಳವಳಿ ಈ ಅವಧಿಯಲ್ಲಿ ಎರಡಾಗಿ ಒಡೆಯಿತು. ಬ್ರಾಹ್ಮಣೇತರರಲ್ಲಿನ ಸುಶಿಕ್ಷಿತ ವರ್ಗ, ಹಾಗೂ ಶ್ರೀಮಂತ ರೈತ ವರ್ಗ, ಮತ್ತು

ನಗರದ ಸುಶಿಕ್ಷಿತ ಬ್ರಾಹ್ಮಣವರ್ಗದ ಸ್ವಲ್ಪ ಭಾಗದೊಂದಿಗೆ ಗಾಂಧೀಜಿಯ ಆಂದೋಳನವನ್ನು ಸೇರಿಕೊಂಡವು. ಸುಶಿಕ್ಷಿತ ಬ್ರಾಹ್ಮಣರ ಇನ್ನೊಂದು ಸಣ್ಣ ಭಾಗ ಸೋಷಲಿಸ್ಟ್ ಪಕ್ಷವನ್ನು ಸೇರಿಕೊಂಡಿತು. ಈ ಎರಡು ಬಣಗಳು ಸಿದ್ಧಾಂತದ ಮಟ್ಟದಲ್ಲಿ (ಒಂದು ವೇಳೆ ಅಂಥದೇನಾದರೂ ಇದ್ದರೆ) ಪರಸ್ಪರ ದೂರಸರಿಯಲು ಬಹಳ ಕಾಲವೇ ಹಿಡಿಯಿತು. ಈ ಮಧ್ಯೆ ಪಿ.ಎಸ್.ಪಿ.ಯಂಥ ಪಾರ್ಟಿಗಳೂ, ಗಾಂಧಿ ಮತ್ತು ಮಾರ್ಕ್ಸರನ್ನು 'ಸತ್ಯಾಗ್ರಹ ಸಮಾಜವಾದ'ದ ಮೂಲಕ ಒಂದುಗೂಡಿಸಲು ಪ್ರಯತ್ನಿಸಿದ (ಪ್ರಾರಂಭದಲ್ಲಿದ್ದ ಸೋಷಲಿಸ್ಟ್ ಧೋರಣೆಯ ಸಿದ್ಧಾಂತವನ್ನು ರೂಪಿಸಿದಂಥ, ಚಿಂತಕ S. D. ಜಾವೇದ್ ಕರ್‌ರಂಥ) ವ್ಯಕ್ತಿಗಳೂ ಕಾಣಸಿಗುತ್ತಾರೆ. ೪. ಹೆಂಗಸರೂ ಸೇರಿದಂತೆ ಎಲ್ಲ ಕೆಳಜಾತಿಗಳನ್ನೂ ಸಂಘಟಿಸಿದ ಫೂಲೆಯವರಿಂದ ಸ್ಥಾಪಿಸಲ್ಪಟ್ಟ 'ಬಹುಜನ ಸಮಾಜ' ಬ್ರಾಹ್ಮಣೇತರದ ಚಳವಳಿಯ ಸ್ಪಷ್ಟರೂಪವನ್ನು ಪಡೆಯಿತು. ಇಡೀ ಮಹಾರಾಷ್ಟ್ರವನ್ನೆಲ್ಲಾ, ಅದರಲ್ಲೂ ಮುಖ್ಯವಾಗಿ 'ಆಧುನೀಕರಣ'ಕ್ಕೊಳಗಾದ ದಕ್ಷಿಣ ಮಹಾರಾಷ್ಟ್ರವನ್ನು ವ್ಯಾಪಿಸಿದ ಈ ಆಂದೋಲನ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಯಾವುದೇ ಸ್ಪಷ್ಟ ರೂಪವನ್ನು ಪಡೆದಿರಲಿಲ್ಲ. ಇದು ಎರಡಾಗಿ ಒಡೆದು, ಕೆಲವರು, ಶ್ರೀಮಂತ ರೈತರದೇ ಮೇಲುಗೈ ಆಗಿದ್ದ ಗುಂಪು ಕಾಂಗ್ರೆಸ್ಸನ್ನೂ, ಇನ್ನೊಂದು ಗುಂಪು 'ರೈತರು ಮತ್ತು ಕಾರ್ಮಿಕರ ಪಕ್ಷ'ವನ್ನೂ ಸೇರಿದರು. ಎಲ್ಲೋ ಕೆಲವರು ಶ್ರಮಿಕರು ಮತ್ತು ಕಾರ್ಮಿಕರು ಮಾತ್ರ ಕಮ್ಯೂನಿಸ್ಟ್ ಪಾರ್ಟಿಯ ಹತ್ತಿರ ಬಂದರು. (ಸದ್ಯದ 'ಲಾಲ್‌ನಿಶಾನ್ ಪಾರ್ಟಿ'ಗೆ ಇಂಥ ಜನರ ಸೇರ್ಪಡೆಯ ಹಿನ್ನೆಲೆಯಿದೆ). ಈ ಆಂದೋಳನವೂ ಕ್ರಮೇಣ ತನ್ನ ಕ್ರಾಂತಿಕಾರಕ ಗುಣವನ್ನು ಕಳೆದುಕೊಂಡು ಬರಿ ಬ್ರಾಹ್ಮಣರ ವಿರುದ್ಧ ಹೋರಾಡುವ ಜಾತಿವಾದೀ ಮೇಲ್ವರ್ಗದ ಮತ್ತು ಸುಶಿಕ್ಷಿತ ಮಧ್ಯಮವರ್ಗದ ಮರಾಠಿಗಳ ಆಂದೋಲನವಾಯಿತು. ೫. 1927ರ ನಂತರ ಡಾ. ಅಂಬೇಡ್ಕರ್‌ರ ನೇತೃತ್ವದಲ್ಲಿ ಅಸ್ಪೃಶ್ಯರ ಆಂದೋಲನ ಪ್ರಾರಂಭವಾಯಿತು. ಈ ಅಸ್ಪೃಶ್ಯರು ಅತಿಹೆಚ್ಚು ತುಳಿತಕ್ಕೆ ಮತ್ತು ಶೋಷಣೆಗೆ ಒಳಗಾದ ಭೂಹೀನ ಬಡರೈತರು ಮತ್ತು ಕಾರ್ಮಿಕರೇ ಆಗಿದ್ದರು. ಅಸ್ಪೃಶ್ಯರಲ್ಲಿ ಬಹುಸಂಖ್ಯಾತರೆನಿಸಿದ ಮೆಹರರು ರಿಪಬ್ಲಿಕನ್ ಪಕ್ಷವನ್ನು ಮತ್ತು ಬೌದ್ಧಮತವನ್ನು ಸೇರಿಕೊಂಡರು. 1960ರ ಹೊತ್ತಿಗಾಗಲೇ ಇವೆರಡೂ, ಬೌದ್ಧರಲ್ಲೇ ಹುಟ್ಟಿಕೊಂಡ ಸುಶಿಕ್ಷಿತ ಜನರ ಮುಂದಾಳತ್ವದಲ್ಲಿ ಹುಟ್ಟಿ, ಬೆಳೆದು ಕಾಂಗ್ರೆಸ್ಸಿಗೂ ಮತ್ತು ಸರ್ಕಾರಕ್ಕೂ ಅಡಿಯಾಳಾಗಿ ನಡೆಯುತ್ತಿದ್ದವು.

೬. ಕಮ್ಯೂನಿಸ್ಟ್ (ಮಹಾರಾಷ್ಟ್ರದ ಮಟ್ಟಿಗೆ ಹೇಳುವುದಾದರೆ) ಮೊದಲಿನಿಂದಲೂ ಬ್ರಾಹ್ಮಣರ ಒಂದು ಬೂರ್ಜ್ವಾ ಚಳುವಳಿಯಾಗಿ ಸಣ್ಣ ವಿಭಾಗದ ಮುಂದಾಳತ್ವದಲ್ಲಿ ಹುಟ್ಟಿದ ಆಂದೋಳನವಾಗೇ ಉಳಿಯಿತು. ತಿಲಕರ ಸಂಪ್ರದಾಯದಲ್ಲಿ ನಡೆದ ಈ ಕಮ್ಯೂನಿಸ್ಟರಿಗೆ—ಅರ್ಥಸರ್ವಸ್ವವಾದದಲ್ಲೆ ಮುಳುಗಿದ್ದ—ಕಾರ್ಮಿಕರ ಹೋರಾಟವನ್ನು ರೈತ ಹೋರಾಟದೊಂದಿಗೆ (ಅಂಥದಾವುದೂ ಇರಲಿಲ್ಲ ಎಂಬುದನ್ನು ಗಮನಿಸಿ) ಮತ್ತು ಮುಖ್ಯವಾಗಿ ಸಮುದಾಯದ ಸಾಮಾಜಿಕ ಹೋರಾಟ

ಗಳೊಂದಿಗೆ ಜೋಡಿಸುವುದು ಸಾಧ್ಯವಾಗಲೇ ಇಲ್ಲ. ಕಾರ್ಮಿಕರ ರಾಜಕೀಯ ಮುಂದಾಳತ್ವದಲ್ಲಿ ರೈತರು, ಕಾರ್ಮಿಕರು ಮತ್ತು ಮಧ್ಯಮವರ್ಗದ ಸುಶಿಕ್ಷಿತರನ್ನೊಳಗೊಂಡಂತೆ ಸಾಮ್ರಾಜ್ಯಶಾಹಿಯ ವಿರುದ್ಧ ಒಂದು ಸಂಘಟನೆಯನ್ನು ತರುವುದೂ ಇವರಿಗೆ ಸಾಧ್ಯವಾಗಲಿಲ್ಲ. ಅಂದರೆ, ಜನರ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಹೋರಾಟಗಳನ್ನು ಅರ್ಥಪೂರ್ಣವಾಗಿ ಒಂದಾಗಿಸುವ ಪ್ರಯತ್ನ ನಡೆಯಲೇ ಇಲ್ಲ. ಹೀಗಿದ್ದರೂ ಈ ಸೋಲನ್ನು ಕಿರು ಬೂರ್ಜ್ವಾ ವರ್ಗದ ಹೋರಾಟದ ಸೋಲು ಎಂದು ಪರಿಗಣಿಸಲಾಗುವುದಿಲ್ಲವಾದಂತಾಗುತ್ತದೆ.

ಡಾಂಗೆಯಂಥ ನಾಯಕರು ಇಂದಿಗೂ ಕೂಡ ತಿಲಕ್, ಶಿವಾಜಿ ಮತ್ತು ಅವರ ಜೀವನವನ್ನಾಧರಿಸಿ ಬರೆದ ತೀರಾ ಪುನರ್‌ಸ್ಥಾಪನಾವಾದೀ 'ಚಾರಿತ್ರಿಕ ಕಾದಂಬರಿ'ಗಳನ್ನೂ ಮೆಚ್ಚಿಸುತ್ತಿದ್ದಾರೆ. ಸ್ವಾಭಾವಿಕವಾಗಿಯೇ ಇದು ನಗರದಲ್ಲಿ ನೆಲಸಿದ, ಪಾಶ್ಚಾತ್ಯೀಕರಣಕ್ಕೊಳಗಾದ ಸುಶಿಕ್ಷಿತ ಬ್ರಾಹ್ಮಣ ಕಮ್ಯುನಿಸ್ಟರನ್ನು ಜನಸಾಮುದಾಯದಿಂದ ದೂರವೇ ಉಳಿಯುವಂತೆ ಮಾಡಿತು. ಇದಕ್ಕೆ ಅಲ್ಲಲ್ಲಿ (ಆರ್ಥಿಕ ಹೋರಾಟಗಳಲ್ಲಿ ಒಂದಾದಂಥ) ಕೆಲವು ಅಪವಾದಗಳೂ ಇಲ್ಲದಿಲ್ಲ.

ಈ ಎಲ್ಲಾ ರಾಜಕೀಯ ಮತ್ತು ಸಾಂಸ್ಕೃತಿಕ ಆಂದೋಲನಗಳು ಸಮುದಾಯಕ್ಕೆ, ಯಾವುದೇ ಸೈದ್ಧಾಂತಿಕ ಪ್ರಜ್ಞೆಯನ್ನು—ಅದು ಕ್ರಾಂತಿಕಾರಕವಾಗಿರಲಿ ಇಲ್ಲದಿರಲಿ.... ಮುಟ್ಟಿಸಿ ಜಾಗೃತಗೊಳಿಸಲು ಸಾಧ್ಯವಾಗಲಿಲ್ಲ ಎಂಬುದು ಸುಸ್ಪಷ್ಟ. ಸಂಘಟನೆ ಮತ್ತು ಅನುಷ್ಠಾನದ ವಿಧಾನ-ವ್ಯಾಪ್ತಿಯಲ್ಲಿ ಮಾತ್ರವೇ ಅಲ್ಲ ; ಅವರ ಸಿದ್ಧಾಂತದಲ್ಲೂ ಈ ಬೂರ್ಜ್ವಾ ವರ್ಗದ ಪ್ರತಿಷ್ಠೆ ನಾನಾ ರೀತಿಯಲ್ಲಿ ವ್ಯಕ್ತವಾಗುತ್ತಾ ಬಂದಿದೆ. ಇದರಿಂದ ರಾಜಕೀಯ ಪ್ರಜ್ಞೆಯ ದಿವಾಳಿತನಕ್ಕೆ ಹಾದಿಮಾಡಿಕೊಟ್ಟಂತಾಗಿದೆಯಲ್ಲದೆ, ನಿಜವಾದ ಅರ್ಥದಲ್ಲಿ ಸಮುದಾಯದ ಮಟ್ಟದ ಕ್ರಾಂತಿಕಾರಿ ಸಂಸ್ಕೃತಿ ಮಹಾರಾಷ್ಟ್ರದಲ್ಲಿ ಹುಟ್ಟಿ ಬರಲೇ ಇಲ್ಲ. ಹಾಗಾಗಲು ಇದ್ದಬದ್ದ ಸಾಧ್ಯತೆಗಳನ್ನೆಲ್ಲಾ ಬೂರ್ಜ್ವಾವರ್ಗ ತನ್ನ ಸಿದ್ಧಾಂತದ ಅಗತ್ಯಗಳಿಗೆ ಸರಿಹೊಂದುವಂತೆ ಮಾರ್ಪಡಿಸಿಕೊಂಡಿತು ; ಇಲ್ಲವೆ ಪೂರ್ಣವಾಗಿ ನಿರ್ನಾಮ ಮಾಡಿತು. ನೆಲೆಯಿಲ್ಲದ, ಪರಿಣಾಮ ಬೀರದ ವಿರೋಧಗಳಿಂದ ಕೂಡಿದ ಸ್ವಭಾವ ತಾನು ಹೊಂದಿದ್ದ ಸಂಪ್ರದಾಯಶೀಲತೆಯ ಸಂಬಂಧ ಮತ್ತು ಪರಿಪಕ್ವವಾಗುವ ಮುನ್ನವೇ ಹಾಳಾದ, ಬೂರ್ಜ್ವಾ ವರ್ಗದ ಸಂಬಂಧಗಳಿಂದಾಗಿ ಶ್ರಮಿಕ ವರ್ಗ ದಲಿತ ಮತ್ತು ಅವರ ಸಾಂಸ್ಕೃತಿಕ ಆಶೋತ್ತರಗಳನ್ನು ದೂರವೇ ಇಟ್ಟಿತು.

**ಸಾಹಿತ್ಯ.**

1870ರ ಮುಂಚಿನ ಅವಧಿಯಲ್ಲಿ ಹರಿಕೇಶವಜೀ ಲೋಕ್ ಹಿತ್‌ವಾದಿ. ಕೃಷ್ಣಶಾಸ್ತ್ರಿ ಚಿಪ್‌ಲಂಕರ್ ಅಂಥ ಗದ್ಯಲೇಖಕರು, ಭಾವೆ ಮತ್ತು ಕೀರ್ತನೆಯವರಂತ ನಾಟಕಕಾರರು ಮುಂದಿನ 50 ವರ್ಷಗಳಲ್ಲಿ ಕಾಣಿಸಿಕೊಂಡ ಹೊಸಬಗೆಯ ವಿಚಾರಗಳನ್ನೊಳಗೊಂಡ ಸಾಹಿತ್ಯಕ್ಕೆ ಅಸ್ತಿಭಾರ ಹಾಕಿದರು. 1870ಕ್ಕೆ ಮೊದಲಿದ್ದ ಸಾಹಿತ್ಯ ಬಹು

ತೀಕವಾಗಿ ಪ್ರಬೋಧಕ, ನೀತಿಬೋಧಕ ಇಲ್ಲವೇ ಬರೀ ಮನೋರಂಜನಾ ಸಾಹಿತ್ಯವಾಗಿತ್ತು. ಪಾಶ್ಚಾತ್ಯರಿಂದ ಎರವಲು ತಂದ ಅಥವಾ ಸಾಂಪ್ರದಾಯಿಕ ಪಂಡಿತ ಕವಿಗಳನ್ನು ಮತ್ತು ಸಂತ ಕವಿಗಳನ್ನು ಅನುಕರಿಸಿದ್ದಾಗಿತ್ತು. 1870ರಿಂದ 1890ರ ವರೆಗೆ ಪ್ರಬೋಧನ ಚಳುವಳಿ ಅಥವಾ ವಿಚಾರ ಪ್ರಚೋದಕ ಸಾಹಿತ್ಯ ಬೆಳೆಯುತ್ತಾ ಹೋಗಿ ರಾನಡೆ, ಆಗರ್‌ಕರ್, ವಿಷ್ಣುಶಾಸ್ತ್ರಿ, ಚುಪ್‌ಲಂಕರ್ ಮತ್ತು ತಿಲಕ್‌ರಂಥ ಲೇಖಕರ ಗದ್ಯದಲ್ಲಿ ಪ್ರಬುದ್ಧತೆಯನ್ನು ಪಡೆಯಿತು. ಮಹಾರಾಷ್ಟ್ರದ ಆಧುನಿಕ ಸಾಹಿತ್ಯದ ನಿಜವಾದ ನೇತಾರರಾದ ಕವಿ ಕೇಶವಸುತ ಮತ್ತು ಕಾದಂಬರೀಕಾರ ಹರಿನಾರಾಯಣ ಆಪ್ಟೆಯಂತಹವರು ಹುಟ್ಟಿಬರುವುದಕ್ಕೆ ನಾವು 1890ರ ತನಕ ಕಾಯಬೇಕಾಗುತ್ತದೆ. ಮರಾಠಿ ಸಾಹಿತ್ಯದ ಮೊದಲ ಘಟ್ಟ ರೂಪಿತವಾದದ್ದು ಈ ಇಬ್ಬರು ಲೇಖಕರಿಂದ ಮತ್ತು ಅನಂತರ ಬಂದ ಗಡಕರಿ ಮತ್ತು ಬಾಲಕವಿ ಅವರಿಂದ. ಹಿಂದಿದ್ದ ಶಾಲಾಮಾಸ್ತರಿಕೆಯ ಗದ್ಯದ ರೀತಿಗಳು ಸಂಸ್ಕೃತ ಮೂಲಗಳಿಂದ ಬಂದ ಶೈಲಿಗಳು ಮರೆಯಾಗಿ ಭಾವನೆಗಳನ್ನು ವಿಚಾರಗಳನ್ನು ಸರಳ ಪ್ರಭಾವಪೂರ್ಣವಾಗಿ ಮತ್ತು ಸೂಕ್ಷ್ಮವಾಗಿ ಹೇಳುವುದು ಪ್ರಾರಂಭವಾಯಿತು. ಇದರ ಜೊತೆ ಜೊತೆಯಲ್ಲಿಯೇ 'ಜನಪ್ರಿಯ', 'ಮನೋರಂಜನೆಯ' ಸಾಹಿತ್ಯ ವಿಪುಲವಾಗಿ ಬೆಳೆಯಿತು.

ಮರಾಠಿ ಸಾಹಿತ್ಯದಲ್ಲಿ 1920ರಿಂದ 1945ರ ಅವಧಿ ತೀರಾ ಬರಡು ಎಂದು ಹೇಳಲಾಗದಿದ್ದರೂ ಜೀವಂತತೆ ಇಲ್ಲವೆನ್ನಬಹುದಾದ ಕಾಲವಾಗಿತ್ತು. ಗಾಂಧೀಜೀಯ ಆಂದೋಲನದ ಪ್ರಾರಂಭದ ದಿನಗಳಲ್ಲಿ ಪ್ರತಿಷ್ಠಿತವರ್ಗ ಮೊದಲಿನಂತೆ ಮುಂದೆ ಬಿದ್ದು ಹೊರಡುವುದನ್ನಾಗಲಿ ನಾಯಕತ್ವವನ್ನು ವಹಿಸುವುದನ್ನಾಗಲಿ, ಅಥವಾ ಶ್ರಮಿಕವರ್ಗದ ಜೊತೆಯಲ್ಲಿ ತನ್ನನ್ನು ಗುರ್ತಿಸಿಕೊಳ್ಳುವುದನ್ನಾಗಲೀ ಮಾಡಲಿಲ್ಲ. ಆರಂಭದಲ್ಲಿ ಬಂದವರ ಉತ್ಸಾಹ ಕಲಾತ್ಮಕ ಅನನ್ಯತೆ ಇದ್ದುದನ್ನು ಇದ್ದಂತೆಯೇ ಹೇಳುವ ಗುಣ ಇವೆಲ್ಲಾ ಹೋಗಿ ಸಾಹಿತ್ಯ ತನ್ನಲ್ಲಿಯೇ ಟೊಳ್ಳುತನವನ್ನು ಸೃಷ್ಟಿಸಿಕೊಂಡಿತು. ಇಲ್ಲಿ ಬರುವ ಕಥಾನಾಯಕ ಪಕ್ಕಾ ಮಧ್ಯಮವರ್ಗದ ಭಾವುಕ ಯುವಕ. ಅವನು ಪ್ರೇಮಿಸುವುದು ಒಬ್ಬ ಕಾಲೇಜು ಹುಡುಗಿಯನ್ನು ಮತ್ತು ಸಮಾಜವಾದಿ ಇಲ್ಲವೆ ರಾಷ್ಟ್ರೀಯ ಚಳುವಳಿಯನ್ನು. ಹೀಗೆ ಇಲ್ಲಿನ ವಸ್ತುವು ತ್ರಿಕೋಣಸ್ವರೂಪ. ಈ ಸಾಹಿತ್ಯದಲ್ಲಿ ಎದ್ದು ಕಾಣುವುದು ಬರೀ ತೋರಿಕೆಯ ಮತ್ತು ಶುಷ್ಕ ತಾಂತ್ರಿಕಕತೆಯ ಚಿತ್ರಣ—ವಿಮರ್ಶೆ 'ಕಲೆಗಾಗಿ ಕಲೆಯೋ, ಜೀವನಕ್ಕಾಗಿ ಕಲೆಯೋ' ಎಂಬುದರ ಬಗ್ಗೆ ನಡೆಯುತ್ತಿದ್ದ ಗಂಭೀರ ವಾಗ್ವಾದ ಬರೀ ಅರ್ಥವಿಲ್ಲದ ವಾಗ್ವಾದವಾಗಿತ್ತು. ಹಿಂದಿದ್ದ ಬೂರ್ಷ್ವ ಧೋರಣೆಯಾಗಲಿ, ಅನಂತರ ಬಂದ ಪ್ರಗತಿಶೀಲ ಧೋರಣೆಯಾಗಲಿ ಮೂಲಭೂತವಾಗಿ ಶುಷ್ಕವಾದ ಮತ್ತು ಯಾಂತ್ರಿಕ ರೀತಿಯ ಗುಣಗಳಿಂದ ಹೊರತಾಗಿರಲಿಲ್ಲ. ಆರಂಭದ ಕವಿಗಳು ಆರಿಸಿಕೊಂಡ ಕಾವ್ಯವಸ್ತು ಆಲೋಚನೆಯಲ್ಲಾಗಲಿ—ಸ್ವದೇಶಾಭಿಮಾನ, ಮಾನವತಾಭಾವ, ಲಿಬರಲ್ ಧರ್ಮ, ಸಮಾಜವಾದ—ಅಥವಾ ಭಾವನೆಯಲ್ಲಾಗಲೀ—ರೊಮ್ಯಾಂಟಿಕ್ ಗುಣ, ಸಿಡಿದೇಳುವ ವ್ಯಕ್ತಿತ್ವವಾದ, ಸಂಪ್ರದಾಯ ವಿರೋಧಗುಣ, ಸಾಮಾಜಿಕ ನಿಷ್ಠೆಯುಳ್ಳ ಸುಧಾರಣಾ

ವಾದ—ಬೆಳವಣಿಗೆಯನ್ನು ಕಾಣಲೇ ಇಲ್ಲ. ಅಷ್ಟೇ ಅಲ್ಲ; ಅವು ಬರಬರುತ್ತಾ ವಿಕೃತರೂಪ ವನ್ನು ಪಡೆದವು ಇಲ್ಲವೇ ಸ್ಮೃತಿಯಿಂದ ಅಳಿಸಿಹೋದವು.

## III. ಸ್ವಾತಂತ್ರ್ಯೋತ್ತರ ಸಾಹಿತ್ಯ 1945-1960

1945ರಿಂದ 1960ರ ತನಕ ಮರಾಠಿ ಸಾಹಿತ್ಯ ಕೆಲವು ಮೂಲಭೂತ ಅಂಶಗಳ ನ್ನೊಳಗೊಂಡಂತೆ ತೀವ್ರಗತಿಯಲ್ಲಿ ಬೆಳೆಯಿತು. 1917ರ ಕ್ರಾಂತಿಯಾಗಲೀ ಅಥವಾ 1930ರ ಆರ್ಥಿಕ ಕುಸಿತವಾಗಲೀ ಸುಶಿಕ್ಷಿತ ಮಧ್ಯಮ ವರ್ಗವನ್ನು ರಾಜಕೀಯವಾಗಿ ಅಲ್ಪ ಸ್ವಲ್ಪ ತಟ್ಟಿದರೂ ಮೂಲಭೂತವಾಗಿ ಪ್ರಭಾವಿತಗೊಳಿಸಲು ಸಮರ್ಥವಾಗಲಿಲ್ಲ. ಆದರೆ 1942ರ ಚಳುವಳಿ, 2ನೇ ಮಹಾಯುದ್ಧ, ಸ್ವಾತಂತ್ರ್ಯ ಬಂದದ್ದು ಮತ್ತು ದೇಶದ ಇಬ್ಭಾಗ ಇವು ಈ ಮಧ್ಯಮ ವರ್ಗವನ್ನು ತುಂಬಾ ಆಳವಾಗಿ ಕಲಕಿದವು. ಐಶಾರಾಮ ಜೀವನದ ಹಂಬಲ ಮತ್ತು ಬೇರೆಯಾಗಿ ನಿಲ್ಲುವಂಥ ಪ್ರವೃತ್ತಿ ಈಗ ಮಾಯವಾದವು. ಸಾಹಿತ್ಯ ಮತ್ತು ಸಂಸ್ಕೃತಿಗಳ ಪರಪರೆಯಿಂದ ಬಂದ ಕೊಡುಗೆಯ ಮೌಲ್ಯನಿಷ್ಕರ್ಷೆಯ ಅಗತ್ಯವಾಯಿತು. ವಿಶ್ವಸಾಹಿತ್ಯ ಅದರಲ್ಲೂ ಇಂಗ್ಲಿಷ್ ಮತ್ತು ಯುರೋಪಿಯನ್ ಸಾಹಿತ್ಯ ಮತ್ತು ಆಧುನಿಕ ವಿಚಾರಧಾರೆಯೊಂದಿಗೆ ಎಂದಿಗಿಂತ ಹೆಚ್ಚಾದ ನಿಕಟ ಸಂಪರ್ಕ ಸ್ಥಾಪಿತವಾಯಿತು. ಮರಾಠಿ ಬುದ್ಧಿಜೀವಿ ವರ್ಗ ತನ್ನ ದಂತಗೋಪುರದಿಂದ ಇಳಿದು ಸಮಕಾಲೀನ ಪ್ರಪಂಚದ ಆಗುಹೋಗುಗಳನ್ನು ಆಳವಾಗಿ ಅರ್ಥಮಾಡಿಕೊಳ್ಳಲು ತೊಡಗಿತು. ಬಿ. ಎಸ್. ಮರ್ಢೇಕರ್‌ರ ಸೌಂದರ್ಯವನ್ನು ಕುರಿತಾದ ತತ್ತ್ವಶಾಸ್ತ್ರ ಮತ್ತು ಕಾವ್ಯ ಈ ದಿಕ್ಕಿನಲ್ಲೊಂದು ತಿರುಗು ಬಿಂದು. ಸರಳ ಮತ್ತು ನಿರ್ದುಷ್ಟವಾದ ಶೈಲಿ, ಮಾನವನ ಸ್ಥಿತಿಗತಿಯ ಬಗ್ಗೆ ಕಾಳಜಿ ಮತ್ತು ಮನುಷ್ಯನ ಪರಕೀಯತೆ ಇಂಥವು ಧ್ವನಿ ಪಡೆಯಲು ಪ್ರಾರಂಭಿಸಿದವು. ಸಾಹಿತ್ಯದ ಹೊಸ ವಸ್ತು ಮತ್ತು ಪ್ರಕಾರಗಳು ಪದ್ಯದ ಸಾಹಿತ್ಯಕ್ಕೆ ಗಂಭೀರತೆಯನ್ನು ತಂದುಕೊಟ್ಟವು. ಆದರೆ ದುರದೃಷ್ಟವಶಾತ್ ಈ ಬೆಳವಣಿಗೆಯ ಜೊತೆಜೊತೆಯಲ್ಲಿಯೇ ಬರಬೇಕಾಗಿದ್ದ ಸಾಮಾಜಿಕ, ರಾಜಕೀಯ, ಮತ್ತು ತಾತ್ತ್ವಿಕ ಮಟ್ಟದಲ್ಲಿ ಚಿಂತನೆಗೆ ಸಂಬಂಧಿಸಿದಂತೆ ಗಣನೀಯ ಪ್ರಮಾಣದಲ್ಲಿ ಮೇಲೆ ಹೇಳಿದಂತೆ ಯಾವ ಬದಲಾವಣೆಯೂ ರೂಪ ಗೊಳ್ಳಲಿಲ್ಲ.

ನಿಜವಾಗಿ ನೋಡಿದರೆ ಒಂದು ರೀತಿಯಲ್ಲಿ 1945ರ ನಂತರವೇ ಆಧುನಿಕ ಬೂರ್ಷ್ವ ಮರಾಠಿ ಸಾಹಿತ್ಯ ಹುಟ್ಟಿದ್ದು. ಮರ್ಢೇಕರ್, ಪಿ. ಎಸ್. ರೇಗೆ, ಕುಸುಮಾಗ್ರಜ, ಎಸ್. ಎಂ. ಮುಕ್ತಿಭೋಧ, ವಿಂದ ಕರಂಡೀಕರ್ ಮತ್ತು ಮಂಗೇಶ್ ಪಡಗಾಂವಕರ್ ಅಂತಹವರು ಕಾವ್ಯಪ್ರಕಾರಗಳಿಗೆ—ತಂತ್ರಗಳಿಗೆ ಸಂಬಂಧಿಸಿದಂತೆ ಹೊಸ ಹೊಸ ಪ್ರಯೋಗಗಳನ್ನು ಮಾಡಿದರು.

ಎರಡನೇ ಘಟ್ಟದಲ್ಲಿ ದಿಲೀಪ್ ಛಿತ್ರೆ, ಆರತಿಪ್ರಭು, ಇಂತಹ ಪ್ರಯೋಗಶೀಲತೆಯನ್ನು ಮುಂದುವರೆಸಿದರು. ಸೂಕ್ಷ್ಮರೀತಿಯ ಹೊಸ ಸಂವೇದನೆ ಮತ್ತು ಭಾಷೆಗೆ ಸಂಬಂಧಿಸಿ

ದಂತೆ ಹೊಸ ತಂತ್ರಪ್ರಕಾರಗಳು ಹುಟ್ಟಿಕೊಂಡವು. ಜಿ. ಬಿ. ಸರದಾರ್, ನರಹರ್ ಕುರಂದಕರ್, ಪಿ. ಕೆ. ಜಿಡೇಕರ್‌ರಂಥ ಲೇಖಕರು ವಿಮರ್ಶೆಯ ಮೂಲಕ ಸಾಹಿತ್ಯದ ಸೌಂದರ್ಯಾಸ್ವಾದನೆಯ ಸಾಮಾಜಿಕ ಆಯಾಮಗಳನ್ನು ಕುರಿತಾಗಿ ಪ್ರಬುದ್ಧ ಚರ್ಚೆ ನಡೆಸಿದರು. ಇವರ ಜೊತೆಯಲ್ಲಿಯೇ ಎಸ್. ಎನ್. ಪೆಂಡ್ಸೆ, ನೆಮಡೆ, ಪಿ. ಟಿ. ಕಾನೋಲಕರ್, ಇವರ ಕಾದಂಬರಿಗಳಲ್ಲಿ ಶಂಕರ್ ಪಾಟೀಲ್, ಎ. ವಿ. ಜೋಶಿ ಇವರ ಸಣ್ಣ ಕತೆಗಳಲ್ಲಿ ಮತ್ತು ವಿಜಯ್ ತಂಡೂಲ್‌ಕರ್, ವಸಂತಕಾನೆಟ್ಕರ್, ಪಿ.ಎಲ್. ದೇಶಪಾಂಡೆ ಅವರ ನಾಟಕಗಳಲ್ಲಿ ಸಾಹಿತ್ಯದ ಹೊಸ ಒಲವುಗಳು ವ್ಯಕ್ತವಾದವು. ಈಗ ಮಹಾರಾಷ್ಟ್ರದಲ್ಲಿ ಜನಪ್ರಿಯಮಟ್ಟಕ್ಕೆ ಬೆಳೆದ ಸಾಹಿತ್ಯಪ್ರಕಾರಗಳಲ್ಲಿ ನಾಟಕವೆ ಮೇಲುಗೈ ಪಡೆದಿದೆ.

ಹೀಗಿದ್ದರೂ ಈ ಕಾಲದ (1945–1960) ಸಾಮಾಜಿಕ ಪ್ರಗತಿಯೇ 1970ರ ನಂತರದ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ಇದನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು. ಹೊಸ ಸರಕಾರ ಬಂದ ಮೇಲೆ ಬೂರ್ಷ್ವಾಗಳ ಕೈಗಾರಿಕಾಕೇಂದ್ರಗಳಾದ ಬೊಂಬಾಯಿ, ಪೂನ, ತೀವ್ರಗತಿಯಲ್ಲಿ ಬೆಳೆದವು. ಆರ್ಥಿಕ ಪ್ರಗತಿಯ ಸ್ವರೂಪದ ಅರಿವಿನ ಜೊತೆಗೆ ವಿಪುಲವಾಗಿ ಹರಡಿದ ವಿದ್ಯಾಭ್ಯಾಸ ಮತ್ತು ಸಂಚಾರ ಸಾಗಾಣಿಕೆಗಳ ಅಭಿವೃದ್ಧಿ ಹಳ್ಳಿಗಾಡು ಮತ್ತು ಬಂಡವಾಳಶಾಹಿ ನಗರ ಕೇಂದ್ರಗಳನ್ನು ಒಂದುಮಾಡಿದ್ದಲ್ಲದೆ ಆ ಮೂಲಕ ಮರಾಠರು ಮತ್ತು ದಲಿತರಲ್ಲಿ ಹೊಸ ಬಗೆಯ ಆಶೋತ್ತರಗಳು–ಸಾಂಸ್ಕೃತಿಕ ಪ್ರಜ್ಞೆ ಹುಟ್ಟಿಬರಲು ಕಾರಣವಾದವು. ಮರಾಠವಾಡ ಮತ್ತು ವಿದರ್ಭದಿಂದ ಬೇರೆಯಾಗಿ ನಿಂತಿದ್ದ ಪಶ್ಚಿಮ ಮಹಾರಾಷ್ಟ್ರ ಈ ಬದಲಾವಣೆಗಳಿಂದಾಗಿ ಮತ್ತೆ ಒಂದಾಯಿತು. ಸಾಂಸ್ಕೃತಿಕ ಜೀವನಕ್ಕೆ ಸಂಬಂಧಿಸಿದಂತೆ ಅತ್ಯಂತ ಮುಖ್ಯವಾದ ಬದಲಾವಣೆಯೆಂದರೆ ಸುಶಿಕ್ಷಿತ ವರ್ಗದಲ್ಲಾದ ರಚನಾಕ್ರಮದ ಏಕರೂಪತೆ. ಮೊದಲಿನಂತೆ ಈ ಬದಲಾವಣೆ ಬ್ರಾಹ್ಮಣ ಪ್ರತಿಷ್ಠಿತ ನಗರ ನಿವಾಸಿಗಳಿಗೇ ಸೀಮಿತವಾಗಿರಲಿಲ್ಲ. ಜಾತಿರಚನೆ ಈಗ ಬ್ರಾಹ್ಮಣರು, ಮರಾಠರು ಮತ್ತು ದಲಿತರನ್ನು ಒಳಗೊಂಡದ್ದಾಗಿತ್ತು. ಮೊದಲಿನಂತೆ ಅದು ಸಾಂಪ್ರದಾಯಿಕ ರೀತಿಯ ಸುಸಂಸ್ಕೃತ ಕಾರ್ಮಿಕರಿಂದಲೇ (White collar-workers) ರೂಪಗೊಂಡದ್ದಾಗಿರದೆ ಹೊಸದಾಗಿ ವಿದ್ಯಾಭ್ಯಾಸ ಪಡೆದುಕೊಂಡ ಕಾರ್ಮಿಕರ ಮಕ್ಕಳು, ಬಡವರು, ಮಧ್ಯಮ ಮತ್ತು ಶ್ರೀಮಂತ ರೈತರು ಇವರೆಲ್ಲರನ್ನೂ ಒಳಗೊಂಡಿತ್ತು. ಭೌಗೋಳಿಕವಾಗಿ ಹೇಳುವುದಾದರೆ ಈ ಬದಲಾವಣೆ ನಗರಗಳಲ್ಲಲ್ಲದೆ ಜಿಲ್ಲೆ, ತಾಲ್ಲೂಕು ಮತ್ತು ಚಿಕ್ಕ ಊರುಗಳಲ್ಲಿಯೂ ಒಟ್ಟಿನಲ್ಲಿ ಎಲ್ಲಾ ಕಡೆಯಲ್ಲೂ ಹರಡಿಕೊಂಡಿತ್ತು. ಮೇಲ್ನೋಟಕ್ಕೆ ಹೌದೆಂಬಂತೆ ಕಾಣುತ್ತಿದ್ದ ಸುಶಿಕ್ಷಿತ ಪ್ರತಿಷ್ಠಿತರ 'ಸಮಾಜವಾದಿ ಮುಂದಾಳುತನ' ಈಗ ಕೈಗಾರಿಕೋದ್ಯಮಿಗಳು ಮತ್ತು ಶ್ರೀಮಂತ ರೈತರ ಕೈಸೇರಿತು. 1960ರಲ್ಲಿ ಮತ್ತು ವಿಶೇಷವಾಗಿ 1966ರ ನಂತರದ ಆರ್ಥಿಕ ಮತ್ತು ರಾಜಕೀಯ ಬಿಕ್ಕಟ್ಟಿನಿಂದಾಗಿ ಮಹಾರಾಷ್ಟ್ರದ ರಾಜಕೀಯ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನ ತತ್ತರಿಸಿತು. ಬೊಂಬಾಯಿಯ ಶ್ರಮಿಕ ವರ್ಗದ ಮಹಾ ಆಂದೋಲನ, ಹಳ್ಳಿಯ ಭೂಹೀನ ಮತ್ತು ನಿರ್ಗತಿಕ ರೈತರ ಚಳವಳಿ

ಮತ್ತು ನಗರದ ಸುಶಿಕ್ಷಿತ ಕಾರ್ಮಿಕ ವರ್ಗದ ಹೋರಾಟ ಪ್ರಾರಂಭವಾದವು. ಪ್ರತಿ ವರ್ಗದಲ್ಲೂ ಅಂತರ್ಗತ ವರ್ಗಭೇದಗಳು ತೀವ್ರವಾದವು. ಮಾರ್ಕ್ಸ್‌ವಾದಿಗಳು, ದಲಿತರು ಮತ್ತು ಸಮಾಜವಾದೀ ಪಂಥಗಳಲ್ಲಿ, ಅವುಗಳಲ್ಲೇ ತೀವ್ರಗಾಮಿಗಳಾದ ಯುವಕರು ಸಿಡಿದೇಳಲು ಪ್ರಾರಂಭಿಸಿ, ಕೆಲವು ಸಲ ಸಫಲವೂ ಮತ್ತೆ ಕೆಲವು ಸಲ ವಿಫಲವೂ ಆಗುವುದು ನಡೆಯಿತು. ನಿಜವಾಗಿ ಆಗುತ್ತಿದ್ದುದೇನೆಂದರೆ, ಸ್ವಯಂಸ್ಫೂರ್ತಿಯ ಗೊತ್ತು ಗುರಿಯಿಲ್ಲದ, ಆದರೆ ಎಲ್ಲವನ್ನು ಪ್ರಶ್ನಿಸುವ ಪ್ರಕ್ರಿಯೆ ಮತ್ತು ಹೊಸದಾರಿ—ದಿಕ್ಕುಗಳಿಗಾಗಿ ತೀವ್ರ ಶೋಧನೆ ನಡೆದವು.

ಈ ಮೇಲೆ ಹೇಳಿದ ಕಾರಣಗಳಿಂದ ಮತ್ತು ಓದುವವರ ಸಂಖ್ಯೆ ಜಾಸ್ತಿಯಾದ್ದರಿಂದ ಸಾಹಿತ್ಯದ ಹೊಸರೂಪ ಮೈದಾಳತೊಡಗಿತು. ಪ್ರತಿಷ್ಠಿತರ ಮತ್ತು ಬೂರ್ಷ್ವಾ ಧೋರಣೆಯುಳ್ಳ ಸಾಹಿತ್ಯವು ಕೆಲವೇ ಮಂದಿಗೆ ಮಾತ್ರ ಅರ್ಥವಾಗುತ್ತಿತ್ತು. ಇನ್ನೊಂದು ಕಡೆ ಜನಪ್ರಿಯ ಸಾಹಿತ್ಯ ಎನಿಸಿಕೊಂಡಿದ್ದು ಪುನರುದ್ಧಾರಿತ ಮೌಲ್ಯಗಳನ್ನು ಪೇಶ್ವೆ, ಶಿವಾಜಿಯವರಂಥ ವ್ಯಕ್ತಿಗಳನ್ನು ಉಜ್ವಲಗೊಳಿಸುವಂಥ ಚಾರಿತ್ರಿಕ ಅಂಶಗಳು ಮತ್ತು ಅತಿ ಭಾವುಕತೆ ಅಥವಾ ಕಷ್ಟಕೋಟಲೆಗಳನ್ನು ಮರೆಸುವಂಥ ಪಲಾಯನವಾದದ ಸಾಹಿತ್ಯ ವಿಪುಲವಾಗಿ ಬೆಳೆಯಿತು. ಇದರ ಜೊತೆಯಲ್ಲಿಯೇ ಕಾಮ, ಹಿಂಸೆ, ಮತ್ತು ಅಪರಾಧ ಪ್ರವೃತ್ತಿಯನ್ನೇ ಮೂಲ ಬಂಡವಾಳವನ್ನಾಗುಳ್ಳ 'ಫುಟ್-ಪಾಥ್' ಸಾಹಿತ್ಯವು ಬೆಳೆಯಿತು. ಕಳೆದ 15 ವರ್ಷಗಳ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು ನಮ್ಮನ್ನು ಸಾಕಷ್ಟು ಎಚ್ಚರಗೊಳಿಸಿದೆ. ಹೊಸ ಹೊಸ ಸಮಸ್ಯೆಗಳನ್ನು ನಮ್ಮ ಮುಂದಿಟ್ಟಿದೆ. ಎಲ್ಲಕ್ಕಿಂತ ಹೆಚ್ಚಾಗಿ ನವೀನ ರೀತಿಯ ಕ್ರಾಂತಿಕಾರಕ ರಾಜಕಾರಣ ಮತ್ತು ಸಂಸ್ಕೃತಿಯನ್ನು ಹುಡುಕಿಕೊಳ್ಳಬೇಕಾದ ಅಗತ್ಯವನ್ನು ದೃಢೀಕರಿಸಿವೆ. ದಿನೇ ದಿನೇ ಹೆಚ್ಚುತ್ತಿರುವ ಜಾತಿ ಮತ್ತು ವರ್ಗಗಳ ಮಧ್ಯದಲ್ಲಿರುವ ಪೈಪೋಟಿ, ವೈಚಾರಿಕ ಗೊಂದಲದಿಂದಾಗಿ ಕಾರ್ಮಿಕರು, ಭೂಹೀನ ಮತ್ತು ಒಡಕ್ಕೈತರು ಅಲ್ಲದೆ ನಗರದ ಮತ್ತು ಹಳ್ಳಿಯ ಕೆಳ ಮಧ್ಯಮ ವರ್ಗದವರು ಶೋಷಕರ ವಿರುದ್ಧ ಒಂದಾಗುತ್ತಿರುವ ಲಕ್ಷಣಗಳು ಕಾಣಿಸುತ್ತಿವೆ. ಮೇಲೆ ಹೇಳಿದ ಆರೂ ರಾಜಕೀಯ ಮತ್ತು ಸಾಂಸ್ಕೃತಿಕ ಚಳುವಳಿಗಳು ಅರ್ಥ ಕಳೆದುಕೊಂಡಿದೆ ಎಂದು ಎಲ್ಲರಿಗೂ ಗೊತ್ತಾಗಿದೆ. ಅಷ್ಟೆ ಅಲ್ಲ ; ಸಮಾಜದ ಮುಂದಾಳತ್ವವನ್ನು ವಹಿಸುವ ಶಕ್ತಿಯನ್ನು ಇವು ಕಳೆದುಕೊಂಡಿವೆ. ಇದೇ ಮರಾಠಿ ನವ್ಯ ಸಾಹಿತ್ಯದ ಸಾಮಾಜಿಕ ನೆಲೆ.

## 4. ಇತ್ತೀಚಿನ ಸಾಹಿತ್ಯಿಕ ಒಲವುಗಳು

ನಾವು 15 ವರ್ಷಗಳ ಹಿಂದಿನ ಸಾಹಿತ್ಯವೆಂದಾಗ ಅರ್ಥ ಅದು ಸಂಘಟಿತವೂ, ಪ್ರಜ್ಞಾಪೂರ್ವಕವೂ ಆದ ಒಗ್ಗಟ್ಟಿನ ಚಳುವಳಿಯಾಗಿತ್ತೆಂದು ಅರ್ಥವಲ್ಲ. ಅಥವಾ ಅದು ತನ್ನ ಸರಿಯಾದ ದಾರಿಯನ್ನು ಕಂಡುಕೊಂಡಿತ್ತೆಂಬುದೂ ಅಲ್ಲ. ಆದರೆ ಸಂಕೀರ್ಣ ರೀತಿಯ ಬದಲಾವಣೆಯ ಕ್ರಮವನ್ನು ಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ ನೋಡಿ ಕೆಲವು ಸ್ಥೂಲ

ತೀರ್ಮಾನಗಳಿಗೆ ಬರಬಹುದು. ಪ್ರತಿಷ್ಠಿತರ ಸಾಹಿತ್ಯ ಮತ್ತು ಉಳಿದ ಸಾಹಿತ್ಯಿಕ ಚಳುವಳಿಯ ಮಧ್ಯೆ ಇದ್ದ ಕಿತ್ತಾಟ ಕೊನೆಗೊಂಡಿತ್ತು. ಉಳಿದ ರೀತಿಯ ಸಾಹಿತ್ಯ ಎಂದಾಗ ಅದರಲ್ಲಿ ಶ್ರಮಿಕರ ಸಾಹಿತ್ಯ ಮತ್ತು ದಲಿತರ ಸಾಹಿತ್ಯ ಕೂಡ ಸೇರಿದೆ. ಸಾಹಿತ್ಯಪ್ರಕಾರ, ಶೈಲಿ ಕಲಾತ್ಮಕತೆಗೆ ಸಂಬಂಧಿಸಿದಂತೆ ಇದ್ದ ಪ್ರಬುದ್ಧವಾದ ಪ್ರಯೋಗಶೀಲತೆ ಮತ್ತು ಪರಿಪಕ್ವತೆ ಇವುಗಳ ಪ್ರತಿಷ್ಠಿತ ಸಾಹಿತ್ಯದ ಕೊಡುಗೆ. ಆದರೆ ಮಧ್ಯಮ ವರ್ಗದಲ್ಲಿ ಬೆಳೆಯುತ್ತಾ ಹೋದ ಹತಾಶ ಭಾವನೆಯೊಂದಿಗೆ ಅದು ಹೆಚ್ಚು ಹೆಚ್ಚಾಗಿ ತಂತ್ರದ ಕಡೆಗೆ ಶಬ್ದಾಡಂಬರ, ನಿರ್ಜೀವ ಮತ್ತು ಜನಸಮುದಾಯದ ಜೀವನದಿಂದ ದೂರವಾದ ಸಾಹಿತ್ಯವಾಗಿ ಬೆಳೆಯಿತು. ಅದು ಆರಿಸಿಕೊಳ್ಳುತ್ತಿದ್ದ ವಸ್ತು ಬದುಕಿನ ಅರ್ಥಹೀನತೆಯನ್ನು ಏಕಾಕಿಯಾದ ಮನುಷ್ಯನ ದುರಂತಸ್ಥಿತಿ, ತನ್ನ ಷಂಡತನದ ವಿರುದ್ಧ ತಾನೇ ಸಿಡಿದೇಳುವ ತೋರಿಕೆಯ ಪ್ರವೃತ್ತಿ ಇವೇ ಹೆಚ್ಚಾಗಿ, ದಿನಕಳೆದಂತೆ ಈ ಸಾಹಿತ್ಯ ನಿಸ್ಸಾರವೆನಿಸತೊಡಗಿತು. ಇದರ ವಿರುದ್ಧ ಬಂಡಾಯವೆದ್ದ ಲಘುನಿಯತಕಾಲಿಕೆಯ ಚಳುವಳಿ ಸಾಹಿತ್ಯದಲ್ಲಿ ಹುಟ್ಟದ್ದೇ ಹೀಗೆ. ಇದು ಬಹಳ ಕಾಲ ಬಾಳಲಿಲ್ಲವಾದರೂ ಮುಂದೆ ಪ್ರಬಲವಾದ ಸಾಹಿತ್ಯದ ಬೀಜಗಳನ್ನು ತನ್ನಲ್ಲಿ ಹುದುಗಿಸಿಕೊಂಡಿತ್ತು. ನಾರಾಯಣ ಸುರ್ವೇಯವರಿಂದ ಪ್ರಾರಂಭವಾದ ಕಾರ್ಮಿಕರ ಕಾವ್ಯ ಮತ್ತು ಸಾಹಿತ್ಯ, ಬಾಬುರಾವ್ ಬಾಗಲ್, ದಯಾ ಪವಾರ್, ದಲಿತ ಪಾಂಥರನ ನಾಯಕ ನಾಮದೇವ ಡಸಳ್ ಇವರಿಂದ ಪ್ರಾರಂಭವಾದ ದಲಿತ ಸಾಹಿತ್ಯ ಮತ್ತು ಹೊಸದಾಗಿ ಬೂರ್ಜ್ವ ಸಾಹಿತ್ಯದಲ್ಲೇ ಹುಟ್ಟಿಕೊಂಡ ಬಂಡಾಯ ಸಾಹಿತ್ಯ ಅನಂತರದ ಮುಖ್ಯ ಬೆಳವಣಿಗಳು. ಸಮಕಾಲೀನ ಮರಾಠಿ ಸಾಹಿತ್ಯದಲ್ಲಿನ ಪ್ರಮುಖ ಬೆಳವಣಿಗೆಯೆಂದರೆ ದಲಿತ ಸಾಹಿತ್ಯವೇ. ಅದು ಮೊತ್ತಮೊದಲ ಬಾರಿಗೆ ದಲಿತರು ಮತ್ತು ತುಳಿತಕ್ಕೊಳಗಾದವರ ಬಂಡಾಯವನ್ನು ರೂಪಿಸುತ್ತಿದೆಯಲ್ಲದೆ ಒಳ್ಳೆಯ ಸಾಹಿತ್ಯ ಎಂದು ಹೇಳುವುದರ ಮೂಲಧೋರಣೆಗಳನ್ನೇ ಪ್ರಶ್ನಿಸಲು ತೊಡಗಿದೆ. ಈ ಸಾಹಿತ್ಯದ ಚಳುವಳಿಯಲ್ಲೂ ಎರಡು ರೀತಿಯ ಧೋರಣೆಗಳಿವೆ ; ಒಂದು ಧೋರಣೆ, ಜಾತಿಯ ಆಧಾರದ ಮೇಲೆ ನಿರೂಪಿಸಲ್ಪಟ್ಟ ದಲಿತರನ್ನು ಬೆಂಬಲಿಸುವುದಲ್ಲದೆ, ಬೌದ್ಧ ಧರ್ಮದಲ್ಲಿ (ಡಾ. ಅಂಬೇಡ್ಕರ್ ಮತ್ತು ರಿಪಬ್ಲಿಕನ್ ಪಕ್ಷದಲ್ಲಿ) ಕುರುಡು ನಂಬಿಕೆಯನ್ನು ಇಟ್ಟುಕೊಂಡಿರುವಂಥದು. ಇದು ಬಹುತೇಕವಾಗಿ ಮಾರ್ಕ್ಸ್‌ನ ವಿರೋಧಿ. ಇನ್ನೊಂದು ಗುಂಪು, ನಿಜವಾದ ದಲಿತರಿಗೂ ಮತ್ತು ನವಬ್ರಾಹ್ಮಣರೆನಿಸಿರುವ ಮೇಲು ಮಧ್ಯಮವರ್ಗಕ್ಕೆ ಸೇರುವ ದಲಿತರಿಗೂ ಮಧ್ಯೆಯ ಅಂತರವನ್ನು ಗುರುತಿಸಬೇಕಾದ ಅಗತ್ಯವನ್ನು ಪ್ರತಿಪಾದಿಸುತ್ತದೆ. ಎಲ್ಲಾ ಶ್ರಮಿಕರೂ ಮತ್ತು ದಲಿತರೂ ವಿಶಾಲ ಧೋರಣೆಯ ಮೂಲಕ ಒಂದಾಗುವ ಅಗತ್ಯವನ್ನು ಹೇಳುತ್ತದೆ.

ಈಗ ಸಮಸ್ಯೆ ಏನು ಎನ್ನುವುದನ್ನು ಹೇಳಿದಂತಾಗಿದೆ. ಮರಾಠಿ ಸಾಹಿತ್ಯದಲ್ಲಿ ಮೂಲಭೂತವಾಗಿ ಹೊಚ್ಚ ಹೊಸದಾದ ಸಾಹಿತ್ಯಿಕ ಸಿದ್ಧಾಂತವನ್ನು ಕಂಡುಕೊಳ್ಳುವುದಕ್ಕಾಗಿ ಅನ್ವೇಷಣೆ ಪ್ರಾರಂಭವಾಗಿದೆ. ಜನಸಮುದಾಯದ ಆಶೋತ್ತರಗಳನ್ನು, ಆಲೋಚನೆಗಳನ್ನು ಸಂವೇದನೆಯನ್ನು ಅನುಭವಗಳನ್ನು ಅಲ್ಲದೆ ಇದನ್ನು ಆಗುಮಾಡು

ವಂಥ ಪ್ರಕಾರಗಳು ಮತ್ತು ಶೈಲಿಗಳನ್ನು ಪ್ರತಿಬಿಂಬಿಸುವುದು ಹೇಗೆ ಸಾಧ್ಯವಾಗುತ್ತದೆ? ಬೂರ್ಷ್ವಾ ಸಾಹಿತ್ಯದ ಪರಿಪಕ್ವತೆ, ಮತ್ತು ಪ್ರಕಾರಗಳಲ್ಲಿನ ನಾಯಕನ್ನು ಈ ಹೊಸ ಸಾಹಿತ್ಯದೊಳಗೆ ಮೇಳವಿಸುವುದು ಮತ್ತು ಅದಕ್ಕೆ ಹೊಂದಿಕೊಳ್ಳುವಂತೆ ಮಾರ್ಪಡಿಸುವುದು ಹೇಗೆ? ನಾನು ಮೊದಲೇ ಹೇಳಿದಂತೆ ಈ ಸಮಸ್ಯೆಗಳನ್ನು ಬರಿ ಬೆರಳೆಣಿಕೆಗಾಗುವಷ್ಟು ಬುದ್ಧಿಜೀವಿಗಳು ಮತ್ತು ಲೇಖಕರು ಬಗೆಹರಿಸಲು ಸಾಧ್ಯವಿಲ್ಲ. ಇದು ಸಾಧ್ಯವಾಗುವುದು, ಈಗೀಗ ಶಿಕ್ಷಣ ಪಡೆಯುತ್ತಿರುವ ಕಾರ್ಮಿಕವರ್ಗ, ಬೌದ್ಧಿಕ ಶ್ರಮದಲ್ಲಿ ನಿರತವಾದ ಕಾರ್ಮಿಕವರ್ಗ ಮತ್ತು ಹಳ್ಳಿಗಾಡಿನ ಯುವಜನ ಹಾಗೂ ಎಲ್ಲಾ ಜಾತಿಗಳ ಮಹಿಳೆಯರು ಇವರನ್ನೆಲ್ಲಾ ಸಂಘಟಿಸಿ ಈ ಸಮಸ್ಯೆಗಳೆಲ್ಲ ಒಟ್ಟಾಗಿ ತೊಡಗಿಸಿದಾಗ : ಹಳೆಯ—ಮಾರ್ಕ್ಸ್‌ವಾದಿ, ದಲಿತ ಮತ್ತು ಸಮಾಜವಾದಿ—ಚಳವಳಿಗಳು, ಸಿದ್ಧಾಂತಗಳು, ಸಾಹಿತ್ಯ ಮುಂತಾದವುಗಳನ್ನು ಅವರ ಕೂಲಂಕಷ ವಿಮರ್ಶೆಗೆ, ಒಳಪಡಿಸುವುದರ ಮೂಲಕ ಅವರಲ್ಲಿ ಅರಿವನ್ನು ಜಾಗೃತಿಯನ್ನು ಮೂಡಿಸಿವುದರಿಂದಲೂ ಮತ್ತು ನಾನಾ ಬಣಗಳಿಗೆ ಸೇರುವ ಲೇಖಕರು ಮತ್ತು ಚಿಂತಕರು ಒಟ್ಟಾಗಿ ತಮ್ಮ ನೆಲೆಗಟ್ಟನ್ನು ಜನಸಮುದಾಯದಲ್ಲಿ ಕಂಡುಕೊಳ್ಳುವುದರಿಂದಲೂ ಅವರು ಹೊಸ ಸಾಹಿತ್ಯವನ್ನು ಸೃಷ್ಟಿಮಾಡುವುದು ಸಾಧ್ಯವಾಗುವುದು. ಈಗ ಈ ದಿಶೆಯಲ್ಲಿ ಆಗಬೇಕಾಗಿರುವುದು, ಒಂದು ಹೊಸ ಪ್ರಣಾಳಿಕೆಯನ್ನು ತರುವುದಲ್ಲ; ಮೇಲೆ ಹೇಳಿದ ರೀತಿಯ ಸಂಘಟನೆಗೆ ಸಹಾಯಕವಾಗುವಂತೆ ಕೆಲಸ ಮಾಡುವುದು. ತುಳಿತಕ್ಕೊಳಗಾದ, ಶೋಷಿಸಲ್ಪಡುತ್ತಿರುವ ಯುವಕರನ್ನು ಹಿಂದಿ ಸಿನಿಮಾಗಳ ಹಿಡಿತದಿಂದ, ಕುಡಿತ ಮತ್ತು ಪೋಲೀ ಸಾಹಿತ್ಯದಿಂದ ಮತ್ತು 'ಜನಪ್ರಿಯ'ವೆಂದು ಹೇಳಿಕೊಳ್ಳುವ ಅಗ್ಗದ ಸಾಹಿತ್ಯದ ಪ್ರಭಾವದಿಂದ ರಕ್ಷಿಸುವುದು ಸಾಧ್ಯವಾದರೆ, ಲೈಬ್ರರಿಗಳು ಮತ್ತು ಸಾಹಿತ್ಯಿಕ ವಿಚಾರ ವಿನಿಮಯ ಗೋಷ್ಠಿಗಳ ಮೂಲಕ, ಒಂದು ನಿರ್ದಿಷ್ಟ ಉದ್ದೇಶವನ್ನು ಒಳಗೊಂಡಂಥ ಶಿಕ್ಷಣವನ್ನು ಅವರಿಗೆ ಕೊಡುವುದು ಸಾಧ್ಯವಾದರೆ, ಅರ್ಥವಾಗುವ ಭಾಷೆಯಲ್ಲೇ ಎಲ್ಲಾ ರೀತಿಯ ಕ್ರಾಂತಿಕಾರಕ ಸಾಹಿತ್ಯವನ್ನು ಅವರಿಗೆ ದೊರಕುವಂತೆ ಮಾಡಿದರೆ, ಉನ್ನತ ವಿಚಾರ ಸಿದ್ಧಾಂತಗಳೊಂದಿಗೆ ಮಸೆದು ಸುಧಾರಿಸಿದ ಸೈದ್ಧಾಂತಿಕ ಅಸ್ತ್ರವನ್ನು ಅವರ ಕೈಗೊಪ್ಪಿಸಿದರೆ, ಅವರೇ ತಮ್ಮಷ್ಟಕ್ಕೆ ವೈಜ್ಞಾನಿಕವೂ ಪ್ರಜಾಸತ್ತಾತ್ಮಕವೂ ಆದ ರಾಷ್ಟ್ರೀಯತೆಯನ್ನೊಪ್ಪಿದ ಸಮಾಜವಾದೀ ಸಂಸ್ಕೃತಿಯನ್ನು ರೂಪಿಸಿಕೊಳ್ಳುತ್ತಾರೆ. 100 ವರ್ಷಗಳ ಬೂರ್ಷ್ವಾ ಜಾಗೃತಿ ಮೂಡಿದಮೇಲೂ 50 ವರ್ಷಗಳ ಸಮತಾವಾದಿ ಚಳುವಳಿಗಳಾದ ಮೇಲೂ ಈ ದಿಕ್ಕಿನಲ್ಲಿ ಏನನ್ನೂ ಸಾಧಿಸಲಾಗಿಲ್ಲ. ಇಂಥದ್ದನ್ನೇನಾದರೂ ಸಾಧಿಸದೆ, ಪ್ರಗತಿಪರ ಸಾಹಿತ್ಯ ಮುಂತಾಗಿ ಹರಟುವುದು ಯಾರಿಗೇ ಆಗಲಿ ಸಮ್ಮತವಲ್ಲ.

---

ಸುಧೀಶ್ ಪಚೌರಿ

# ಸಮಕಾಲೀನ ಹಿಂದೀ ಸಾಹಿತ್ಯದ ಆಯಾಮಗಳು

ಯಾವುದೇ ಬಂಡವಾಳಶಾಹಿ ಸಮಾಜವ್ಯವಸ್ಥೆಯಲ್ಲಿ ಸಂಸ್ಕೃತಿ, ಕಲೆ, ಸಾಹಿತ್ಯ ಅಥವಾ ಸೃಜನಶೀಲ ತತ್ತ್ವಗಳ ಸೃಷ್ಟಿಯ ಹಿನ್ನೆಲೆಯಲ್ಲಿ ಸಾಮಾನ್ಯವಾಗಿ ಮಧ್ಯಮ ವರ್ಗ ಸಕ್ರಿಯ ಪಾತ್ರವಹಿಸುತ್ತದೆ. ಶ್ರಮಿಕವರ್ಗವು ಇಂಥ ಸಮಾಜದಲ್ಲಿನ ಉತ್ಪಾದನಾ ಪ್ರತಿಕ್ರಿಯೆಯಲ್ಲಿ ಕೇಂದ್ರಶಕ್ತಿಯಾಗಿ ಕಾರ್ಯ ನಿರ್ವಹಿಸುತ್ತಿರುತ್ತದೆ. ಆದರೆ ಅಲ್ಲಿನ ಸಾಂಸ್ಕೃತಿಕ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಶ್ರಮಿಕವರ್ಗಕ್ಕಿರುವ ಮುಖ್ಯಪಾತ್ರವನ್ನು ಕಡೆಗಾಣಿಸುವ ಎಲ್ಲ ಪ್ರಯತ್ನಗಳನ್ನೂ ಆ ಬಂಡವಾಳ ವ್ಯವಸ್ಥೆಯು ಮಾಡುತ್ತಿರುತ್ತದೆ. ಶ್ರಮಿಕವರ್ಗ ಈ ಸಾಂಸ್ಕೃತಿಕ ಪ್ರಕ್ರಿಯೆಯಲ್ಲಿ ನಿರ್ಣಾಯಕವೂ ನಿಶ್ಚಿತವೂ ಆದ ರೀತಿಯಲ್ಲಿ ತನ್ನ ಪಾತ್ರವನ್ನು ನಿರ್ವಹಿಸುತ್ತದೆ. ಬಂಡವಾಳಶಾಹಿ ದೇಶಗಳಲ್ಲಿ ನಡೆಯುವ ಪ್ರಗತಿಶೀಲ ಸಾಂಸ್ಕೃತಿಕ ಆಂದೋಲನಗಳು ಈ ಮಾತಿಗೆ ಸಾಕ್ಷಿಯಾಗಿವೆ.

ಸಮಾಜವಾದಿ ವ್ಯವಸ್ಥೆ ದಿನದಿನಕ್ಕೂ ವಿಕಾಸಗೊಂಡು ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳುತ್ತಿರುವುದು ಮತ್ತು ಅನೇಕ ದೇಶಗಳಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಗಳು ಮೇಲುಗೈ ಪಡೆಯುತ್ತಿರುವುದು ಒಂದು ಕಡೆಯಾದರೆ ಇನ್ನೊಂದು ಕಡೆ ಸಾಮ್ರಾಜ್ಯವಾದಿ ಸಂಘಟನೆ ಕುಸಿದು ದಿಕ್ಕೆಟ್ಟು ಹೋಗುತ್ತಿರುವುದಲ್ಲದೆ ವಿಶ್ವ ಬಂಡವಾಳ ವ್ಯವಸ್ಥೆ ತನ್ನ ಮಾಮೂಲು ಸಂಕಷ್ಟಗಳಲ್ಲಿ ಸಿಲುಕಿಕೊಂಡು ಜಜ್ಜಿಹೋಗುತ್ತಿದೆ. ಆದ್ದರಿಂದಲೇ ಈ ಯುಗದಲ್ಲಿ ಅಭಿವೃದ್ಧಿ ಹೊಂದಿದ ಬಂಡವಾಳಶಾಹಿ ದೇಶಗಳಿಂದ ಹಿಡಿದು ಅಭಿವೃದ್ಧಿಶೀಲ ದೇಶಗಳಲ್ಲೂ ಪ್ರಗತಿಶೀಲ ಹಾಗೂ ಪ್ರತಿಗಾಮಿ ಶಕ್ತಿಗಳ ಧೃವೀಕರಣವು ಇಂದು ಹಿಂದೆಂದಿಗಿಂತಲೂ ಸ್ಪಷ್ಟವಾಗಿ ರೂಪುಗೊಳ್ಳುತ್ತಿರುವುದು ತುಂಬಾ ಸ್ವಾಭಾವಿಕವಾಗಿದೆ. ಈ ಧೃವೀಕರಣದ ಕಾರ್ಯ ಕೇವಲ ರಾಜಕೀಯ ಕ್ಷೇತ್ರದಲ್ಲಿ ಮಾತ್ರವಲ್ಲದೆ ಸಾಂಸ್ಕೃತಿಕ ಜೀವನದ ಪ್ರಕ್ರಿಯೆಗಳಲ್ಲೂ ಪ್ರತಿಬಿಂಬಿತವಾಗುತ್ತಿರುವುದು ಕಂಡುಬರುತ್ತಿದೆ. ಸಮಕಾಲೀನ ಹಿಂದೀ ಸಾಹಿತ್ಯವು ಇಂಥ ಪ್ರಕ್ರಿಯೆಗಳನ್ನು ಅವೆಲ್ಲದರ ಸಮಗ್ರ ಜಟಿಲತೆಗಳೊಂದಿಗೆ ಪ್ರತ್ಯಕ್ಷ ಅಥವಾ ಪರೋಕ್ಷ ರೀತಿಯಲ್ಲಿ ಪ್ರತಿಬಿಂಬಿಸುತ್ತಿದೆ.

ಇಂದಿನ ಹಿಂದೀ ಸಾಹಿತ್ಯರಚನೆಯ ಪ್ರಕ್ರಿಯೆಯಲ್ಲಿ ಪಾತ್ರವಹಿಸುವ ನಿಯಾಮಕ ತತ್ತ್ವಗಳು ಯಾವುವು ಎಂದು ಪರಿಶೀಲಿಸಬಹುದು. ಅರೆ–ಊಳಿಗ ಮಾನ್ಯಪದ್ಧತಿಯ, ಬಂಡವಾಳಶಾಹಿಯ ಉತ್ಪಾದನಾ ಸಂಬಂಧಗಳು, ಬಂಡವಾಳಶಾಹಿ ಪದ್ಧತಿಗೆ ಮೊದಲಿನ ಸಮಾಜವ್ಯವಸ್ಥೆಯ ಸಾಂಸ್ಕೃತಿಕ ಅವಶೇಷಗಳು, ಅವುಗಳಿಂದ ಹುಟ್ಟಿಕೊಂಡ ವಿಚಾರಧಾರೆಗಳು ಒಂದುಕಡೆಯಾದರೆ, ಇಂಥ ಉತ್ಪಾದನಾ ಸಂಬಂಧಗಳನ್ನು ಕಿತ್ತುಹಾಕಲು ಕಂಕಣಬದ್ಧರಾದ ಶ್ರಮಿಕವರ್ಗ ಮತ್ತು ಅದರ ವಿಚಾರಧಾರೆಗಳು, ಸಮಾಜದ ಬಹು

ಮುಖ್ಯ ಪಾಲುದಾರರಾದ ರೈತರ ಮತ್ತು ಮಧ್ಯಮವರ್ಗದ ಶ್ರಮಜೀವಿಗಳ ಹೋರಾಟ ಗಳು ಇನ್ನೊಂದುಕಡೆ ಕಂಡುಬರುತ್ತದೆ. ಈ ಎರಡು ವರ್ಗಗಳ ಮತ್ತು ಅವುಗಳ ಒಳಚಟು ವಟಿಕೆಗಳೇ ಇಂದಿನ ಹಿಂದೀ ಸಾಹಿತ್ಯರಚನೆ ನಿಯಾಮಕ ತತ್ತ್ವಗಳಾಗಿವೆ.

ಊಳಿಗಮಾನ್ಯ ಪದ್ಧತಿ, ಅರೆ-ಊಳಿಗಮಾನ್ಯ ಪದ್ಧತಿಯ ಉತ್ಪಾದನಾ ಸಂಬಂಧಗಳ ಮೇಲೆ ಅವಲಂಬಿತವಾಗಿ ನಶಿಸುತ್ತಿರುವ ಬಂಡವಾಳಶಾಹಿ ಉತ್ಪಾದನಾ ಸಂಬಂಧಗಳ ಪರಿಣಾಮಗಳು ನಮ್ಮ ಸಮಾಜದ ಎಲ್ಲಾ ವಿಕಾಸಶೀಲ ಶಕ್ತಿಗಳನ್ನೂ ದುರ್ಬಲ ಗೊಳಿಸುತ್ತಿವೆ. ಪೂರ್ಣಾಭಿವೃದ್ಧಿ ಹೊಂದಿರುವ ಬಂಡವಾಳಶಾಹಿ ಸಮಾಜದಲ್ಲಿ ಸಾಂಸ್ಕೃತಿಕ ಪ್ರಕ್ರಿಯೆಗಳಲ್ಲಿ ಮಧ್ಯಮವರ್ಗದ ಹೆಚ್ಚುಪಾಲು ಜನರು ಸಕ್ರಿಯ ಪಾತ್ರ ವಹಿಸಲು ಹೆಚ್ಚಿನ ಅವಕಾಶಗಳೂ ಪುರಸ್ಕಾರಗಳೂ ದೊರೆಯುತ್ತವೆ. ಆದರೆ ಬಂಡ ವಾಳಶಾಹಿಯು ಪೂರ್ಣ ಬೆಳವಣಿಗೆಯನ್ನು ಹೊಂದದ ದೇಶಗಳಲ್ಲಿ ಮಧ್ಯಮ ವರ್ಗದ ಕಡಿಮೆ ಪಾಲಿನ ಜನರಿಗೆ ಮಾತ್ರ ಇಂಥ ಅವಕಾಶ, ಪುರಸ್ಕಾರಗಳು ಸಿಗುತ್ತವೆ. ಸ್ವಾತಂತ್ರ್ಯನಂತರ ನಾವು ರೂಪಿಸಿಗೊಂಡ ಶಿಕ್ಷಣಪದ್ಧತಿ, ಆರ್ಥಿಕ–ಸಾಮಾಜಿಕ ಮಟ್ಟ ದಲ್ಲಿನ ಅಪೂರ್ಣ ಬೆಳವಣಿಗೆಯಿಂದಾಗಿ ಶ್ರಮಿಕ ಜನತೆಯು ತಮ್ಮ ವ್ಯಾಪಕ ಆಶೋತ್ತರ ಗಳನ್ನು ಯಾವುದೇ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಸೇರಿಸಲು ಅವಕಾಶ ಪಡೆಯಲಿಲ್ಲ. ಹೀಗೆ ಶ್ರಮಿಕವರ್ಗ ಮಾತ್ರವೇ ವಂಚನೆಗೆ ಒಳಗಾಗಲಿಲ್ಲ. ಮಧ್ಯಮವರ್ಗದ ಕೆಲವೇ ಪಾಲು ಜನರಿಗೆ ಮಾತ್ರ ಅಂಥ ಅವಕಾಶಗಳು ದೊರೆತವು. ಪರಿಣಾಮವಾಗಿ, ವಿಶಾಲ ವಾದ ಇಂಥ ದೇಶದ ಸಾಂಸ್ಕೃತಿಕ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪಾಲುಗೊಳ್ಳಬೇಕಾದ ತತ್ತ್ವಗಳು ಸಾಮಾನ್ಯ ಜನಜೀವನದಿಂದ ಹೆಚ್ಚು ಕಡಿಮೆ ದೂರವಾಗುಳಿದುವು.

ಸ್ವಾತಂತ್ರ್ಯನಂತರ ದಿನಗಳ ಹಿಂದೀ ಸಾಹಿತ್ಯದಲ್ಲಿ ಹುಟ್ಟಿದ "ನವ್ಯಕವಿತಾ" ಆಂದೋಲನದಂಥ ಸಾಂಸ್ಕೃತಿಕ ಪ್ರಕ್ರಿಯೆಯು ಈ ರೀತಿ ಸಾಮಾನ್ಯ ಜೀವನದಿಂದ ಹೊರಗೇ ಉಳಿದಿರುವ ಪ್ರತಿಷ್ಠಿತವಾದದ (Elitism) ಉದಾಹರಣೆಯಾಗಿದೆ. ಈ ಆಂದೋಲನಕ್ಕೆ ಮೊದಲು ಹಿಂದೀ ಸಾಹಿತ್ಯದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ವ್ಯಾಪಕವಾಗಿತ್ತು. ಆ ಕಾಲದಲ್ಲಿ ಕತೆ, ಕಾವ್ಯ, ನಾಟಕ, ಕಾದಂಬರಿ ಮುಂತಾದ ಸಾಹಿತ್ಯದ ಇತರ ಪ್ರಕಾರಗಳ ಪ್ರಯೋಗವು ಹಾಗೂ ವಿಚಾಧಾರೆಗಳ ಊಳಿಗಮಾನ್ಯ ಪದ್ಧತಿ ಮತ್ತು ಸಾಮ್ರಾಜ್ಯವಾದಿ ಸಂಸ್ಕೃತಿ ಹಾಗೂ ವಿಚಾರಧಾರೆಗಳ ಹಿಡಿತದಿಂದ ಬಿಡಿಸಿ ಕೊಂಡು ತಮ್ಮದೇ ಸಂಸ್ಕೃತಿಯನ್ನು ಸ್ಥಾಪಿಸುವುದು ಅವುಗಳ ಪ್ರಾಥಮಿಕ ಕರ್ತವ್ಯ ಮತ್ತು ಗುರಿಯಾಗಿದ್ದಿತು. ಈ ಚಳುವಳಿಯು ಎಷ್ಟು ಶಕ್ತಿಯುತವಾಗಿತ್ತೆಂದರೆ, ಸ್ವಾತಂತ್ರ್ಯೋತ್ತರದ ನವ್ಯಕವಿತಾ ಆಂದೋಲನದ ಬಹುಮುಖ ನವ್ಯಬರಹಗಾರರು ಮೊದಲಿಗೆ ಈ ಪ್ರಗತಿಶೀಲ ಚಳುವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದವರೇ ಆಗಿದ್ದರು. ಈ ಹಿನ್ನೆಲೆಯನ್ನು ಗಮನಕ್ಕೆ ತೆಗೆದುಕೊಳ್ಳದೆ ಆಧುನಿಕ ಹಿಂದೀ ಸಾಹಿತ್ಯದ ವರ್ಗ ವಿಶ್ಲೇಷಣೆ ಯನ್ನು ನಿಖರವಾಗಿ ಮಾಡುವುದು ಅಸಾಧ್ಯ.

ಸ್ವಾತಂತ್ರ್ಯಪೂರ್ವ ದಿನಗಳಲ್ಲಿ, ಅಂದರೆ 1936ರಿಂದೀಚೆಗೆ ಆರಂಭವಾದ ಪ್ರಗತಿಶೀಲ

ಸಾಹಿತ್ಯ ಚಳುವಳಿಯ ಸ್ವರೂಪವನ್ನು ಪರಿಶೀಲಿಸಬಹುದು. ಈ ಚಳುವಳಿಯು ಸಾಮ್ರಾಜ್ಯಶಾಹಿ ವಿರುದ್ಧ ಬಂಡೇಳಲು ಇಷ್ಟಪಟ್ಟ ಎಲ್ಲ ವರ್ಗಗಳಿಗೂ ಅವಕಾಶವನ್ನು ನೀಡಿದ ಒಂದು ಸಾಂಸ್ಕೃತಿಕ ಸಂಯುಕ್ತರಂಗವಾಗಿತ್ತು. ಈ ಸಂಯುಕ್ತ ರಂಗದಲ್ಲಿ ಎರಡು ಮುಖ್ಯ ಗುಂಪುಗಳಿದ್ದವು. 1) ಮಾರ್ಕ್ಸ್‌ವಾದ–ಲೆನಿನ್‌ವಾದದ ಸಿದ್ಧಾಂತಗಳಿಂದ ವಿಚಾರಗಳನ್ನು ರೂಪಿಸಿಕೊಂಡವರು ಹಾಗೂ ಭಾರತೀಯ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರಾಗಿದ್ದವರು. 2) ಊಳಿಗಮಾನ್ಯ ಮತ್ತು ಬೂರ್ಜ್ವಾ ವರ್ಗಗಳ ರಾಷ್ಟ್ರೀಯವಾದಿಗಳು, ಭಾರತೀಯ ಸಂಸ್ಕೃತಿಯ ಪುನರುತ್ಥಾನವಾದಿಗಳು ಹಾಗೂ ಆಧ್ಯಾತ್ಮಿಕ ವಿಚಾರಗಳಿಂದ ಪ್ರಭಾವಿತರಾದವರು, ಮತ್ತು ಮಾರ್ಕ್ಸ್‌ವಾದವನ್ನು ನಮ್ಮ ಸಂಸ್ಕೃತಿಗೆ ಹೊರತಾದುದೆಂದು ಪರಿಗಣಿಸಿದವರು. ಆದರೆ ಈ ಎರಡು ಗುಂಪುಗಳೂ ತಮ್ಮಿಬ್ಬರಿಗೂ ಸಾಮಾನ್ಯ ಶತ್ರುವಾಗಿದ್ದ ಸಾಮ್ರಾಜ್ಯಶಾಹಿ ಶತ್ರುವಿನ ವಿರುದ್ಧ ಹೋರಾಡಲು ಪ್ರಗತಿಶೀಲ ಸಾಹಿತ್ಯ ಚಳುವಳಿಯಲ್ಲಿ ಒಂದಾಗಿ ಸೇರಿಕೊಂಡರು. ಹಿಂದೀ ಸಾಹಿತ್ಯದ ಈ ಪ್ರಗತಿಶೀಲ ಸಾಹಿತ್ಯ ಚಳುವಳಿಯಿಂದಾದ ಪ್ರಯೋಜನೆಂದರೆ, ಅದುವರೆಗೆ ರಹಸ್ಯವಾದ (Mysticism) ಆಧ್ಯಾತ್ಮವಾದ ಮತ್ತು ಮಿಥ್ಯಾವಾದಗಳ ಹಿಡಿತದಲ್ಲಿ ಸಿಕ್ಕಿಕೊಂಡಿದ್ದ ಹಿಂದೀ ಸಾಹಿತ್ಯವು ಮೊದಲಬಾರಿಗೆ ಜನಜೀವನದ ಭೌತಿಕ ಆಕಾಂಕ್ಷೆಗಳನ್ನೂ, ಅವರ ಹೋರಾಟಗಳನ್ನು ಅಭಿವ್ಯಕ್ತಿಸುವ ಮಾಧ್ಯಮವಾಯಿತು. ಶ್ರಮಿಕವರ್ಗದ ಹೆಚ್ಚು ಪಾಲಿನ ಜನರಿಗೆ ರಂಗಭೂಮಿ, ಕಾವ್ಯಗೋಷ್ಠಿ ಮತ್ತು ಪತ್ರಿಕೆಗಳ ಮೂಲಕ ಸಾಹಿತ್ಯವನ್ನು ಕೊಂಡೊಯ್ಯಲಾಯಿತು. ಇದರಿಂದಾಗಿ ಶ್ರಮಿಕವರ್ಗ ತನ್ನದೇ ಆದ ಸೌಂದರ್ಯ ಶಾಸ್ತ್ರವೊಂದನ್ನು ರೂಪಿಸಿಕೊಳ್ಳುವ ಸಾಧ್ಯತೆಯನ್ನು ಕಂಡುಕೊಂಡಿತು. ಸಾಮ್ರಾಜ್ಯಶಾಹಿ ವಿಚಾರಧಾರೆಗಳ ವಿರುದ್ಧ ಸಂಘಟಿತವಾದ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ ಈ ದಿಸೆಯಲ್ಲಿ ತನ್ನ ಜವಾಬ್ದಾರಿಯನ್ನು ನಿರ್ವಹಿಸಿತು. ಹೀಗೆ ಪ್ರಾರಂಭವಾದ ಚಳುವಳಿಯು ಇಡೀ ಹಿಂದೀ ಸಾಹಿತ್ಯಕ್ಷೇತ್ರದ ಎಲ್ಲೆಡೆಗೂ ಹರಡಿತು.

ಬರುಬರುತ್ತಾ ಸಾಹಿತ್ಯದಲ್ಲಿ ವಸ್ತು (content) ಮತ್ತು ಶೈಲಿ ಗಳಬಗ್ಗೆ ಸಾಹಿತ್ಯ ಮತ್ತು ಬರಹಗಾರನ ಸಾಮಾಜಿಕ ಜವಾಬ್ದಾರಿ ಹಾಗೂ ನಿಷ್ಠೆಯ ಬಗ್ಗೆ, ಕ್ರಾಂತಿಕಾರಿ ಸಾಹಿತ್ಯದ ಸ್ವರೂಪದ ಬಗೆಗಿನ ಅನೇಕ ಸಮಸ್ಯೆಗಳ ಬಗೆಗೆ ಈ ಎರಡು ಗುಂಪುಗಳಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿ ಸ್ವಾತಂತ್ರಪ್ರಾಪ್ತಿಯ ಕಾಲದಲ್ಲಿ ಅದು ತೀವ್ರತೆಯನ್ನು ತಲುಪಿತು. ಸ್ವಾತಂತ್ರ್ಯ ಹೋರಾಟದ ವರ್ಗಸ್ವಭಾವವನ್ನು ಗುರುತಿಸುವಲ್ಲಿನ ಭಿನ್ನಾಭಿಪ್ರಾಯಗಳೇ ವಾಸ್ತವವಾಗಿ ಈ ಭಿನ್ನಾಭಿಪ್ರಾಯಗಳ ಮೂಲವಾಗಿದ್ದವು. ಇದರ ಕೇಂದ್ರಸ್ಥಾನದಲ್ಲಿ ಬಂಡವಾಳಶಾಹಿ ಅಭಿವೃದ್ಧಿ ಮಾರ್ಗವನ್ನು ಅನುಸರಿಸುವುದರ ಮೂಲಕ ಸಮಾಜದ ಮಧ್ಯಮವರ್ಗದವರನ್ನು ತನ್ನ ಕಡೆಗೆ ಆಕರ್ಷಿಸುವುದರಲ್ಲಿ ಯಶಸ್ವಿಯಾದ ಭಾರತದ ಬೂರ್ಜ್ವಾ—ಆಳುವ ವರ್ಗ ಒಂದು ಕಡೆ ಇದ್ದರೆ, ಇನ್ನೊಂದು ಕಡೆ ಭಾರತೀಯ ಸ್ವಾತಂತ್ರ್ಯಹೋರಾಟದ ವರ್ಗ ಸ್ವಭಾವವನ್ನು, ಹೊಸ ಆಳುವ ವರ್ಗದ ಸಾಮರ್ಥ್ಯವನ್ನು ಕರಾರುವಾಕ್ಕಾಗಿ ಅರ್ಥಮಾಡಿಕೊಳ್ಳಲಾಗದ ಭಾರತೀಯ ಕಮ್ಯೂ

ನಿಸ್ಪ್ರ ಪಕ್ಷವಿತ್ತು. ಇಂಥ ಸಂದರ್ಭದಲ್ಲಿ ಪ್ರಗತಿಶೀಲ ಚಳುವಳಿಯಲ್ಲಿನ ಮಾರ್ಕ್ಸ್‌ವಾದಿಗಳ ಲ್ಲದ ಗುಂಪಿನ ಅನಿಶ್ಚಿತತೆ ಹಾಗೂ ಸಮಯಸಾಧಕತನ ಮತ್ತು ಮಾರ್ಕ್ಸ್‌ವಾದಿ ಗುಂಪಿನ ಮಿತಿ ಸಂಯುಕ್ತ ಹೋರಾಟದಲ್ಲಿ ತೀವ್ರತರವಾದ ಬಿರುಕುಂಟಾಗಲು ಕಾರಣವಾಯಿತು. ಮಾರ್ಕ್ಸ್‌ವಾದಿಗಳಲ್ಲದ ಲೇಖಕರು ಆಳುವ ವರ್ಗಗಳತ್ತ ಮೋಹಿತರಾದರು. ಹೀಗಾಗಿ ಅದರಿಂದ ರಚಿತವಾದ ಸಾಹಿತ್ಯದಲ್ಲಿ ಹೋರಾಟ ಹಾಗೂ ವಿಮೋಚನೆಯ ಭಾವನೆಗಳೇ ಇಲ್ಲದಂತಾಗಿ ಹೋದವು. ಆದ್ದರಿಂದ ಈ ಬರಹಗಾರರು ಹೆಚ್ಚಾಗಿ ಶೈಲಿ ಮತ್ತು ಭಾಷೆಗೆ ಸಂಬಂಧಿಸಿದ ಸಮಸ್ಯೆಗಳನ್ನೇ ಎತ್ತಿಕೊಂಡು ಅವುಗಳೇ ಸಾಹಿತ್ಯದ ಪ್ರಮುಖಸಮಸ್ಯೆ ಗಳೆಂದು ಘೋಷಿಸಿದರು. ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯಾನ್ನು ಕ್ರಮೇಣ ಮಿತಿ ಗೊಳಿಸುತ್ತ ಬಂದರು. ಉದಾಹರಣೆಗೆ ಸಾಹಿತಿ ಕೇವಲ 'ಶಬ್ದ ಶಿಲ್ಪಿ' ಎನ್ನುವಷ್ಟು ಮಟ್ಟಿಗೆ ಇದು ಹೋಯಿತು. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ಸ್ವಾತಂತ್ರ್ಯಾನಂತರ ಬಂದ ಈ ಸಾಹಿತಿಗಳು ಆಳುವ ವರ್ಗಗಳತ್ತ ತೀವ್ರ ಆಕರ್ಷಿತರಾಗಿ ತಮ್ಮ ವರ್ಗದ ಹಾಗೂ ವೈಚಾರಿಕ ಅನಿವಾರ್ಯತೆಗಳಿಂದ, ಸಾಹಿತ್ಯವನ್ನು ಸಾಮಾಜಿಕ ಜವಾಬ್ದಾರಿ ಯತ್ತ ತಿರುಗಿಸುವ ಬದಲು 'ಶೈಲಿ', 'ಭಾಷೆ' 'ಶಬ್ದ ಸಾಧನೆ', 'ಕಾವ್ಯ ಕವಿಯ ವೈಯಕ್ತಿಕ ಅಭಿವ್ಯಕ್ತಿ' ಇತ್ಯಾದಿ ಘೋಷಣೆಗಳತ್ತ ಹೊರಳತೊಡಗಿದರು. ಸ್ವಲ್ಪ ಕಾಲದ ನಂತರ ಈ ಪ್ರವೃತ್ತಿಯ ಪ್ರತಿನಿಧಿಲೇಖಕನಾಗಿ ಶ್ರೀ ಸಚ್ಚಿದಾನಂದ್ ವಾತ್ಸಾಯನ್ 'ಅಜ್ಞೇಯ' ಅವರು ಬಂದರು. ಇವರು ಸಾಹಿತ್ಯವನ್ನು ತಾಂತ್ರಿಕವೇ ಸಮಸ್ತ ಎನ್ನುವಂಥ ರೂಪದ (formalism) ಕಡೆಗೆ ವಾದ ತಿರುಗಿಸುವ ಪ್ರಯತ್ನ ಮಾಡಿದ್ದಲ್ಲದೆ, ಆ ಮೂಲಕ ಸ್ವಾತಂತ್ರ್ಯಾನಂತರ ನವ್ಯ ಲೇಖಕರನ್ನು ಸಂಘಟಿಸುವ ಅಸಫಲ ಪ್ರಯತ್ನವನ್ನು ಮಾಡಿದರು. ಇವರು ಸಮತಾವಾದವನ್ನು ಪ್ರಬಲವಾಗಿ ವಿರೋಧಿಸಿದ್ದಲ್ಲದೆ 'ಸ್ವಚ್ಛಂದ ಜಗತ್ತಿನ' (free world)ನ ಸಮರ್ಥನೆಯ ವಿಚಾರಗಳನ್ನು ಹೊಂದಿದವರಾಗಿದ್ದರು. ಇವರು ಕಾವ್ಯದ ಶೈಲಿಯ (Technic) ಶ್ರೇಷ್ಠತೆಯನ್ನು ಸಮರ್ಥಿಸುವ ಯತ್ನದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿಯಿಂದ ದೊರಕಿದ್ದ ಅನೇಕ ಪ್ರಯೋಜನಗಳನ್ನುಹಾಳುಮಾಡಿದರು. ಇವರು ತಮ್ಮ ಕತೆಗಳಲ್ಲಿ ಬದುಕಿನಲ್ಲಿ ನಿತ್ಯ ಕಂಡುಬರುವ ಹೋರಾಟವನ್ನು ಚಿತ್ರಿಸುವ ಬದಲು, ತಮ್ಮ ವೈಯಕ್ತಿಕ ಅನ್ನಿಸಿಕೆಗಳಲ್ಲಿ ಸಿಕ್ಕಿಕೊಂಡು, ತಮ್ಮ ರೋಗಗ್ರಸ್ತ ಹಾಗೂ ನಿಷ್ಕ್ರಿಯ ಭಾವುಕತೆಯಿಂದ ಅಂತರ್ಮುಖಿಯಾಗಿ ಕೇವಲ 'ಅದ್ಭುತ' ರೊಮ್ಯಾಂಟಿ ಸಿಸಂನಲ್ಲೇ ತಲ್ಲೀನವಾಗುವಂಥ ಮಧ್ಯಮ ವರ್ಗದ ಪಾತ್ರಗಳನ್ನು ಸೃಷ್ಟಿಸಿದರು. ಈ ರೀತಿಯಾಗಿ ಪ್ರೇಮಚಂದರ 'ಗೋದಾನ'ದಂಥ ಮಹಾನ್ ಕಾದಂಬರಿಯ ವಿರುದ್ಧದ ಸಾಲಿ ನಲ್ಲಿ 'ಅಜ್ಞೇಯ'ರು "ಶೇಖರ್ : ಏಕ್ ಜೀವನೀ"ವನ್ನು ಸೃಷ್ಟಿಸಿದರು. ಇದರಲ್ಲಿ ಮಧ್ಯಮ ವರ್ಗದ ನಾಯಕನ ತೀರ ಸ್ವಂತದ್ದೆನ್ನಬಹುದಾದಂತ ಹಾಗೂ ಆತ್ಮಕೇಂದ್ರೀಕೃತ ವೇದನೆಯ ಚಿತ್ರಣವನ್ನು ಕೊಟ್ಟರು. ವಿಮರ್ಶೆಯ ಕ್ಷೇತ್ರದಲ್ಲಿ ಇವರು ಅಮೇರಿಕಾದ ರೂಪವಾದವನ್ನೇ (formalism) ಆಧಾರವಾಗಿಟ್ಟುಕೊಂಡು ಮಾರ್ಕ್ಸ್‌ವಾದಿ ವಿಮರ್ಶೆಯ ತತ್ತ್ವಗಳ ಮೇಲೆ ನಾಲ್ಕೂ ಕಡೆಗಳಿಂದಲೂ ಆಕ್ರಮಣ ಮಾಡಿದರು. ಈ

ರೀತಿ ಸ್ವಾತಂತ್ರ್ಯಾನಂತರದ ಪ್ರಗತಿಶೀಲ ಸಾಹಿತ್ಯ ಚಳುವಳಿಯು ಮಾರ್ಕ್ಸ್‌ವಾದಿಗಳಲ್ಲ ದವರ ಗುಂಪು ಆಳುವ ವರ್ಗಗಳ ಹಿತಾಸಕ್ತಿಗೊಳಗಾಗಿ ಅವರ ಹಿಂಬಾಲಕರಾದುದಷ್ಟೇ ಅಲ್ಲದೆ, ಕ್ರಮೇಣ ತಾವೂ ಸಮತಾ ವಾದವನ್ನು ವಿರೋಧಿಸುವಲ್ಲಿ ಮುಂದಾಗತೊಡಗಿದರು. ಇದಕ್ಕೆ ಸಾಮ್ರಾಜ್ಯಷಾಹಿಗಳಿಂದ ಬಂದ ಶೀತಲಯುದ್ಧದಂಥ ರಾಜಕೀಯ ನೀತಿ ಹಾಗೂ ಸಿ.ಐ.ಎ. ನಂತಹ ಗುಪ್ತ ಚಟುವಟಿಕೆಗಳ ಪ್ರಭಾವ ಸಾಕಷ್ಟಿತ್ತು.

1960ರ ವರೆಗೂ ಹಿಂದೀ ಸಾಹಿತ್ಯದಲ್ಲಿ 'ಶೈಲಿಯೇ ಸರ್ವಸ್ವ' ಎನ್ನುವ (ರೂಪವಾದ) ವಾದವನ್ನು ಎತ್ತಿಹಿಡಿಯುವ ಪ್ರಯತ್ನಗಳು ನಡೆದವು. ಈ ಪ್ರತಿಗಾಮಿ ಸಾಹಿತ್ಯ ಚಳುವಳಿಯ ಪ್ರಭಾವ ಹಿಂದಿಯ ಹೊಸ ಲೇಖಕರ ಮೇಲೆ ಸ್ವಲ್ಪವೂ ಆಗಲಿಲ್ಲವೆಂದು ಭಾವಿಸಿದರೆ ಅದು ದೊಡ್ಡ ತಪ್ಪಾಗುತ್ತದೆ. ರೂಪವಾದದ (formalism) ಈ ಪ್ರಭಾವ 'ನವ್ಯಕತೆ' ಚಳುವಳಿಯ ಒಂದು ಗುಂಪಿನ ಕತೆಗಾರರ ಮೇಲೆ ಆಯಿತು. ಕಮಲೇಶ್ವರ್ ರಾಜೇಂದ್ರಯಾದವ್, ಸ್ವರ್ಗೀಯ ಮೋಹನ್ ರಾಜೇಶ್ ಮುಂತಾದವರು ಈ ರೂಪವಾದದ ಬಂಧನದಲ್ಲಿ ಸಿಕ್ಕಿದ್ದರು. ಒಂದು ಕಾಲದಲ್ಲಿ 'ಅಜ್ಞೇಯ'ರು ಮಾಡಿದಂಥ ಕಾರ್ಯವನ್ನೇ ಇಂದಿಗೂ ಇವರು ಮಾಡುತ್ತಿದ್ದಾರೆ.

ಹೀಗೆಂದ ಮಾತ್ರಕ್ಕೆ ಸಂಯುಕ್ತ ಪ್ರಗತಿಶೀಲ ಚಳುವಳಿಯ ಎರಡನೆಯ ಗುಂಪಾದ ಮಾರ್ಕ್ಸ್‌ವಾದಿ ಲೇಖಕರ ಗುಂಪು ಸ್ವಾತಂತ್ರ್ಯಾನಂತರ ಸಂಪೂರ್ಣವಾಗಿ ಜಡವಾಯಿ ತೆಂದು ತಿಳಿಯಬಾರದು. ಅಥವಾ ಸ್ವಾತಂತ್ರ್ಯಾನಂತರ ಹೊಸ ಆಳುವ ವರ್ಗದ ವಿರುದ್ಧ ಹೋರಾಟ ನಡೆಸುವ ಸಾಹಿತಿಗಳೇ ಇಲ್ಲವಾದರು ಎಂದೂ ಅರ್ಥವಲ್ಲ. ಆದರೆ ಸಂಯುಕ್ತ ಪ್ರಗತಿಶೀಲ ಸಾಹಿತ್ಯ ಚಳುವಳಿಯಲ್ಲುಂಟಾದ ಒಡಕಿನಿಂದ ಅದರ ವೇಗ ಮಂದವಾಯಿತು. ಮತ್ತು ಹೊಸ ಆಳುವ ವರ್ಗದ ಘೋಷಣೆಗಳು ಹಾಗೂ ಅದರ ಸಾಂಸ್ಕೃತಿಕ ಪುನರು ತ್ಥಾನ ಮುಂತಾದ ವಿಚಾರಗಳನ್ನು ಪ್ರತಿಬಂಧಿಸಬೇಕಾಗಿದ್ದಂತ ಪ್ರಮಾಣದಲ್ಲಿ ತಡೆಯ ಲಿಲ್ಲ ಎಂಬುದಂತೂ ನಿಜ. ಮಾರ್ಕ್ಸ್‌ವಾದಿ ಲೇಖಕರೂ ಗಂಭೀರವಾದ, ನಿಶ್ಚಿತವಾದ ವೈಚಾರಿಕತೆಯ ಸ್ಥಾನದಲ್ಲಿ ತಮ್ಮ ಸ್ವಂತ ಅನಿಸಿಕೆಗಳಿಗೆ ಒತ್ತು ಕೊಡಲಾರಂಭಿಸಿದರು. ಸಂಯುಕ್ತ ಪ್ರಗತಿಶೀಲ ಚಳುವಳಿಯಲ್ಲಿನ ಒಡಕಿಗೆ ಕಾರಣಗಳನ್ನು ಹುಡುಕುವ ಹಾಗೂ ಚಳುವಳಿಯನ್ನು ಮತ್ತೆ ಒಂದುಗೂಡಿಸಿ ಪ್ರಗತಿಯತ್ತ ಕೊಂಡೊಯ್ಯುವ ಮತ್ತು ಜೀವನದ ಜ್ವಲಂತ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಹೋರಾಡುವ ಬದಲು ಈ ಮಾರ್ಕ್ಸ್‌ವಾದಿ ಲೇಖಕರು ಬೂರ್ಜ್ವಾ ಅನ್ನಿಸಿಕೆಗಳು, ಪರಾಜಯ ಮನೋಭಾವ, ಸಂಕೀರ್ಣತಾವಾದ ಮತ್ತು ಉದಾರವಾದಗಳ ನಡುವೆ ಓಲಾಡತೊಡಗಿದರು. ಇಷ್ಟಾ ದರೂ ರೂಪವಾದ ಮತ್ತು ಬೂರ್ಜ್ವಾ ಸಾಂಸ್ಕೃತಿಕ ವಿಚಾರಧಾರೆಗಳನ್ನು ವಿರೋಧಿಸು ವವರ ಅಭಾವವೇನೂ ಇರಲಿಲ್ಲ. ಮಾರ್ಕ್ಸ್‌ವಾದಿಗಳು ರೂಪವಾದದ ಟೊಳ್ಳುತನವನ್ನು ಒಂದೇಸಮನೆ ಬಯಲಿಗೆಳೆಯುತ್ತಿದ್ದರು. ಆ ದಿಕ್ಕಿನಲ್ಲಿ ಸಾಕಷ್ಟು ಸಫಲರೂ ಆದರು. ಡಾ. ರಾಮ್‌ವಿಲಾಸ್‌ಶರ್ಮ ಈ ದಿಕ್ಕಿನಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಕ್ರಿಯಾಶೀಲತೆಯನ್ನು ತೋರಿದರು. ಅವರು ಅಮೆರಿಕದಿಂದ ಬಂದ ಈ ರೂಪವಾದದ ಅನುಕರಣೆಮಾಡುವವ

ರನ್ನು ವೈಚಾರಿಕ ಮಟ್ಟದಲ್ಲೇ ವಿರೋಧಿಸಿದರು. ರೂಪವಾದದ ಧೋರಣೆಗಳಲ್ಲಿದ್ದ ಒಳ ವಿರೋಧಗಳನ್ನು ಹಾಗೂ ಅದರ ಜನವಿರೋಧಿ ತತ್ತ್ವಗಳನ್ನೂ ಬೇರುಸಹಿತ ಕಿತ್ತು ತೋರಿಸಿದರು ಆದರೆ ಡಾ. ಶರ್ಮಅವರು ಪ್ರಗತಿಶೀಲ ಸಾಹಿತ್ಯ ಚಳುವಳಿ ನಿರ್ವಹಿಸ ಬೇಕಾಗಿದ್ದ ಹೊಸ ಪಾತ್ರ, ಹೊಸ ಸಂಯುಕ್ತ ದಳದ ರಚನೆಗೆ ಆಧಾರ ಹಾಗೂ ಶ್ರಮಿಕ ವರ್ಗಕ್ಕಿರಬೇಕಾದ ಹೊಸ ಸೌಂದರ್ಯಶಾಸ್ತ್ರವೊಂದರ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಅಸಮರ್ಥರಾದರು ಅವರಲ್ಲಿ ಕಡಿಮೆಯಾಗಿದ್ದ ಈ ಅಂಶವನ್ನು ಒಂದು ಮಟ್ಟದವರೆಗೆ ಗಜಾನನ ಮಾಧವ ಮುಕ್ತಿಬೋಧ್ ಅವರು ತುಂಬಿದರು. ಇವರು ಮೊದಲಬಾರಿಗೆ ಮಾರ್ಕ್ಸ್‌ವಾದಿ ವಿಮರ್ಶೆಯನ್ನು ವೈಯಕ್ತಿಕ ಆಗ್ರಹಗಳಿಂದ ಹೊರತುಮಾಡಿ ಅದನ್ನು ವಿಜ್ಞಾನರೀತಿಯಲ್ಲಿ ರೂಪಿಸಿದರು. ಅವರು ತಮ್ಮ ವಿಮರ್ಶಾತ್ಮಕ ಲೇಖನಗಳಲ್ಲಿ ಬೂರ್ಜ್ವಾ ವರ್ಗದ ರೂಪವಾದ, ವಸ್ತು ಮತ್ತು ಶೈಲಿಗಳ ಆಂತರಿಕ ಸಂಬಂಧ, ಬರಹಗಾರನ ಸಾಮಾಜಿಕ ಪಾತ್ರ, ಸಾಹಿತ್ಯಸೃಷ್ಟಿಯ ಮೂಲಸೆಲೆ ಮುಂತಾದ ಅನೇಕ ಜಟಿಲಪ್ರಶ್ನೆಗಳನ್ನು ಕುರಿತು ಮೊದಲಬಾರಿಗೆ ಆಳವಾಗಿ ಚಿಂತಿಸಿದರು. ಬಹುಶಃ ಇದೇ ನಂತರ ಬಂದ ಪ್ರಜಾಸತ್ತಾತ್ಮಕ ಜನತಾ ಸಾಹಿತ್ಯ ಚಳುವಳಿಗೆ ಪ್ರೇರಣೆಯೂ ಆಯಿತು.

ಪ್ರತಿಗಾಮಿ ಸ್ವರೂಪದ ರೂಪವಾದ (formalism) ಸಾಹಿತ್ಯ ಚಳುವಳಿ ತನ್ನ ಆಕ್ರಮಣವನ್ನು ವಿಮರ್ಶಾಕ್ಷೇತ್ರಕ್ಕಷ್ಟೇ ಮಿತಿಗೊಳಿಸಿಕೊಳ್ಳದೆ ಕತೆ, ಕಾವ್ಯದಂಥ ಸೃಜನಶೀಲ ಬರವಣಿಗೆಯ ಮೇಲೂ ಪರಿಣಾಮ ಬೀರಲು ಎಲ್ಲ ಪ್ರಯತ್ನವನ್ನೂ ಮಾಡಿತು. ಆದರೆ ಹೆಚ್ಚುಮಂದಿ ಪ್ರಗತಿಶೀಲ ಲೇಖಕರು (ಮುಕ್ತಿಬೋಧರನ್ನು ಬಿಟ್ಟು) ವಿಮರ್ಶಾಕ್ಷೇತ್ರದಲ್ಲಿ ರೂಪವಾದವನ್ನು ವಿರೋಧಿಸಿದ ಪ್ರಮಾಣದಲ್ಲೇ ತಮ್ಮ ಸೃಜನ ಶೀಲ ಕೃತಿಗಳಲ್ಲಿ ಅದನ್ನು ವಿರೋಧಿಸಲು ಸಾಧ್ಯವಾಗಂಥ ಪರಿಸ್ಥಿತಿಯಲ್ಲಿದ್ದರು. ಅಲ್ಲದೆ ಪ್ರತಿಗಾಮಿ ಲೇಖಕರು ಪ್ರಗತಿಶೀಲ ಲೇಖಕರಿಗಿಂತ ಹೆಚ್ಚು ಸಂಘಟಿತರೂ ಸಾಧನ ಸಂಪತ್ತುಳ್ಳವರೂ ಆಗಿದ್ದರು. ಆದ್ದರಿಂದಲೇ ಸ್ವಾತಂತ್ರ್ಯನಂತರದ ಒಂದೂವರೆ ದಶಕ ನಿಜವಾಗಿಯೂ ಹಿಂದೀ ಸಾಹಿತ್ಯದ ಪ್ರಗತಿಶೀಲ ಚಳುವಳಿಯಲ್ಲಿ ಸ್ತಬ್ಧವಾದ ದಿನವೆಂದೇ ಹೇಳಬಹುದು. ವೈಚಾರಿಕ ಧ್ರುವೀಕರಣದ ಕೆಲಸ ಮಬ್ಬಾಗದಿದ್ದರೂ ಸಾಂಸ್ಕೃತಿಕ ಚಳುವಳಿಯ ನಾಯಕತ್ವ ರೂಪವಾದಿಗಳ ಕೈಗೆ ಸಿಕ್ಕಿತ್ತು. ಇದಕ್ಕೆ ಆಳುವವರ್ಗ ಹಾಗೂ ಸಾಮ್ರಾಜ್ಯಶಾಹಿಗಳ ಪ್ರತ್ಯಕ್ಷ ಹಾಗೂ ಪರೋಕ್ಷ ಆಶೀರ್ವಾದವೂ ಇತ್ತು.

ಈ ರೂಪವಾದಿ ಸಾಹಿತ್ಯಚಳುವಳಿಯ ಬಸಿರಿನಲ್ಲೇ ಅನೇಕ ವೈರುಧ್ಯಗಳಿದ್ದುವು. (ಇದನ್ನು ಮೊದಲಿನ ಪ್ರಗತಿಶೀಲ ಸಾಹಿತ್ಯಚಳುವಳಿ ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ.) ಆದರೆ ನಂತರ ಬಂದ ಲೇಖಕರಿಗೆ ವೈರುಧ್ಯಗಳು ಸ್ಪಷ್ಟವಾಗತೊಡಗಿದುವು. ಈ ಲೇಖಕರು ಮಾನವೀಯ ಸಮಸ್ಯೆಗಳನ್ನು ಬಣ್ಣ ಬಣ್ಣವಾಗಿ ಚಿತ್ರಿಸುತ್ತಿದ್ದರೇ ವಿನಾ ಬದುಕಿನ ಜೀವಂತ ಸಮಸ್ಯೆಗಳನ್ನು ವಿಶ್ಲೇಷಿಸಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ

ಇವರ ಸಾಹಿತ್ಯ ಕೇವಲ ಕೆಲವೇ ಜನರು ಅರ್ಥಮಾಡಿಕೊಳ್ಳುವಂತಿತ್ತು. ಆರ್ಥಿಕ ಸಾಮಾಜಿಕ ಸಂಕಷ್ಟಗಳು ಹೆಚ್ಚುತ್ತಹೋಗುತ್ತಿದ್ದುವು. 60ರ ನಂತರದ ವರ್ಷಗಳಲ್ಲಿ ಉಂಟಾದ ಬೆಲೆ ಏರಿಕೆ, ನಿರುದ್ಯೋಗ ಮತ್ತು ಇನ್ನೂ ಅನೇಕ ಸಮಸ್ಯೆಗಳು ಮಧ್ಯಮ ವರ್ಗದ ಜನತೆಯನ್ನು ಕಾಡಿ ಅವರ ಬಂಗಾರದ ಕನಸುಗಳನ್ನು ಆಘಾತಗೊಳಿಸುತ್ತಿದ್ದವು. ಈ ವರ್ಗದ ಜನತೆ ಸ್ವಾತಂತ್ರ್ಯ ನಂತರ ತಮ್ಮ ಕನಸು ನನಸಾಗುವುದೆಂದು ನಿರೀಕ್ಷಿಸಿ ಭರವಸೆಯಿಟ್ಟುಕೊಂಡಿದ್ದರು. 1967ರಲ್ಲಿ ಚುನಾವಣೆಗಳಲ್ಲಿ ಕಾಂಗ್ರೆಸ್‌ನ ಪರಮಾಧಿ ಕಾರಕ್ಕೆ ಧಕ್ಕೆ ಒದಗಿತು. ಅನೇಕ ಆರ್ಥಿಕ ದುರ್ಘಟನೆಗಳು ತೀವ್ರವಾದುವು. ಕೆಳ-ಮಧ್ಯಮ ವರ್ಗದ ವಿದ್ಯಾವಂತ ನಿರುದ್ಯೋಗಿಗಳ ಹೊಸಪೀಳಿಗೆ ಮೊದಲಬಾರಿಗೆ ತನ್ನ ನಿರಾಸೆ ಮತ್ತು ಅನಾಸ್ಥೆಯನ್ನು ಆಳುವವರ್ಗದತ್ತ ತೋರಿಸಿತು. ಹೀಗೆ ಆಳುವ ವರ್ಗದ ಸುಳ್ಳುಭರವಸೆಗಳಿಂದ ಭ್ರಮನಿರಸನಗೊಂಡ ಕೆಳಮಧ್ಯಮವರ್ಗದ ಅಕ್ಷರಜ್ಞಾನದ ನಿರುದ್ಯೋಗಿಗಳು ಅಶಾಂತಿ, ತಳಮಳ ಮತ್ತು ಆಕ್ರೋಶಗಳಿಗೆ ಒಳಗಾದರು. ಇದರಿಂದ ಅವರ ಸಮಾಜ ವಿಮರ್ಶೆಯ ದೃಷ್ಟಿಯು ಬೆಳೆಯಿತು. ಆದ್ದರಿಂದಲೇ 60ರ ಸಾಹಿತ್ಯದಲ್ಲಿ ಈ ಭ್ರಮನಿರಸನವೇ ಕೇಂದ್ರಶಕ್ತಿಯಾಗಿ ರೂಪವಾದದ ಆಡಂಬರ ಮತ್ತು ಅವರ ಶಬ್ದ ಮಾಂತ್ರಿಕತೆ ಕ್ರಮೇಣ ಹರಿದು ಹಂಚಿಹೋಗಲಾರಂಭಿಸಿತು.

ಸಾಂಸ್ಕೃತಿಕ ಮಟ್ಟದಲ್ಲಿ ಉಂಟಾದ ಈ ಭ್ರಮನಿರಸನವು ಕ್ರಾಂತಿಕಾರಿ ಯುವ ಜನಾಂಗ ಹಾಗೂ ಅಂದಿನ ಸಂದರ್ಭಕ್ಕೆ ತಕ್ಕಂತೆ ನಡೆದ ವಿದ್ಯಾರ್ಥಿಗಳ ಸ್ವಯಂಸ್ಫೂರ್ತಿ ಚಳುವಳಿಯನ್ನು ಹೋಲುತ್ತದೆ. ಇದು ಸಾಂಸ್ಕೃತಿಕ ಪ್ರಕ್ರಿಯೆಯ ದೃಢತೆಯನ್ನೂ ಚಲನೆಯನ್ನು ಮುರಿಯುವ ಪ್ರಯತ್ನ ನಡೆಸಿತು ಎಂಬ ಕಾರಣದಿಂದಲೂ ಸಹ ಈ ಚಳುವಳಿಗೆ ಸಾಂಸ್ಕೃತಿಕ ಮಟ್ಟದಲ್ಲಿ ವಿಶಿಷ್ಟ ಸ್ಥಾನವಿದೆ. ಈ ಸಾಹಿತ್ಯ ಚಳುವಳಿಯಲ್ಲಿ ಭಾಗವಹಿಸಿದ ಬಹುಪಾಲು ಲೇಖಕರು ಸಾಮಾನ್ಯವಾಗಿ ನಿಮ್ನ-ಮಧ್ಯಮವರ್ಗದಿಂದ ಬಂದವರಾದ್ದರಿಂದ, ಬೆಲೆ ಏರಿಕೆ, ನಿರುದ್ಯೋಗ ಹಾಗೂ ಇತರ ಸಾಮಾಜಿಕ ಸಮಸ್ಯೆಗಳು ಅವರನ್ನು ಆಕ್ರಾಂತರನ್ನಾಗಿಸಿತ್ತು. ಆದ್ದರಿಂದಲೇ 'ಆಕ್ರೋಶ'ವು ಇವರ ಸಾಹಿತ್ಯದ ಧ್ವನಿಯಾಯಿತು. ಅದುವರೆಗೆ ಬೇರೂರಿದ್ದ ಬೂರ್ಜ್ವಾ ಸಾಂಸ್ಕೃತಿಕ ಮೌಲ್ಯಗಳ ಖಂಡನೆ, ಕಲೆ-ಸಾಹಿತ್ಯದ ಬಗ್ಗೆ ಕೋಮಲ-ಸುಗಂಧಿತ ದೃಷ್ಟಿಯ ಧಿಕ್ಕಾರ, ಹಾಗೂ ವೈಯಕ್ತಿಕ ಪೌರುಷ ಪ್ರಶಂಸೆ ಈ ಅಲೆಯ ಲೇಖಕರ ಬರಹಗಳಲ್ಲಿದ್ದ ಮುಖ್ಯ ಧೋರಣೆಯಾಗಿತ್ತು. ಆದರೆ ಸಮಾಜದ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ಅರ್ಥಮಾಡಿಕೊಳ್ಳುವಂಥ ಮತ್ತು ಆ ಸಮಸ್ಯೆಗಳಿಗೆ ಪರಿಹಾರ ಸೂಚಿಸಲು ಸಾಧ್ಯವಾಗುವಂಥ ವಿಶ್ವದೃಷ್ಟಿ ಇವರಲ್ಲಿರಲಿಲ್ಲವೆಂಬುದು ಸ್ಪಷ್ಟ. ಇದರಿಂದ ಇವರ ಶಕ್ತಿಯೆಲ್ಲ ತಮಗೇ ಗೊತ್ತಿರದ ಶತ್ರುವಿನ ಧಿಕ್ಕಾರದಲ್ಲೇ ವ್ಯಯವಾಯಿತು. ಇವರಂತೂ ಮರಿ ಬೂರ್ಜ್ವಾ ಆಕ್ರೋಶವನ್ನು ಹೊಂದಿದ್ದ ಬರಹಗಾರರಾಗಿದ್ದರು. ಯಥಾಸ್ಥಿತಿವಾದವನ್ನು ಅನುಸರಿಸಿದವರು ಲೇಖಕರಾದರು ; 'ರಾಜಕೀಯ' ಮಾಡಿದವರು 'ಮುದಿ' ಸಾಹಿತಿಗಳಾದರು, ರಾಜಕೀಯದಲ್ಲಿ ಭ್ರಷ್ಟನಾಯಕರೂ ಆದರು. ಒಮ್ಮೆ ರಾಜಕೀಯವನ್ನು ಹೀಯಾಳಿಸಿದರೆ ಒಮ್ಮೆ

ಬದುಕಿನ ನಿಷ್ಪ್ರಯೋಜಕ ಮಾತುಗಳಲ್ಲೇ ಸುಖಿಸತೊಡಗಿದರು. ಅಸ್ಪಷ್ಟತೆ, ದಿಕ್ಕೆಟ್ಟ ಸ್ಥಿತಿ, ಮರಿ ಬೂರ್ಜ್ವಾತನ, ಹಾಗೂ ಅನಾವಶ್ಯವಾದ ಆಕ್ರೋಶಗಳು—ಆ ಕಾಲದ ಎಲ್ಲ ಬರಹಗಳ ನಿಯಾಮಕ ತತ್ತ್ವವಾಗಿತ್ತು.

ಈ ಸಾಹಿತ್ಯ ಚಳುವಳಿಯು ರೂಪವಾದನ್ನು ಕೊನೆಗಾಣಿಸಿ ಸಾಹಿತ್ಯದಲ್ಲಿನ "ಪ್ರತಿಷ್ಠಿತ" ಎನ್ನಿಸಿಕೊಳ್ಳುವ ಖದೀಮತನವನ್ನು ಮುರಿದುಹಾಕುತ್ತಿತ್ತು. ಅಲ್ಲದೆ ಬೂರ್ಜ್ವಾವರ್ಗದ ಸಾಂಸ್ಕೃತಿಕ ಆಧಾರವನ್ನು ಕಿತ್ತುಹಾಕಿ, ತಾತ್ಕಾಲಿಕ ರೊಚ್ಚನ್ನು ಹುಟ್ಟಿಸಿದರೂ ಕೊನೆಕೊನೆಗೆ ಆಳುವವರ್ಗಗಳ ಅಮಾನುಷತ್ವವನ್ನು ಅಪ್ರತ್ಯಕ್ಷವಾಗಿ ಎತ್ತಿಹಿಡಿಯುವ ತತ್ತ್ವವನ್ನು ಒಪ್ಪಿಕೊಂಡೇ ನಡೆಯಿತು. ಇವರಲ್ಲಿ ಕೇವಲ ಮಧ್ಯಮ ವರ್ಗದ ರೊಚ್ಚಿತ್ತು. ಆದರೆ ಜನತೆ ಮತ್ತು ಅವರ ಹೋರಾಟಗಳ ಬಗ್ಗೆ ಏನೂ ತಿಳಿಯದವರಾಗಿದ್ದರು. ಮಾತ್ರವಲ್ಲದೆ, ಈ ಸಾಹಿತಿಗಳು ಜನತೆಯನ್ನು 'ದೊಂಬಿ' ಎಂದು ಕರೆದರು. 'ದೊಂಬಿ'ಯ ಬಗ್ಗೆ ಅವರಿಗೆ ಹೆದರಿಕೆಯೂ ಇತ್ತು. ಭ್ರಷ್ಟಾಚಾರ, ಅಭಾವಸ್ಥಿತಿ, ನಿರುದ್ಯೋಗ ಮುಂತಾದ ಸಾಮಾಜಿಕ ಸಮಸ್ಯೆಗಳಿಂದ ಪ್ರಾರಂಭವಾಗುತ್ತಿದ್ದ ಇವರ ಆಕ್ರೋಶ ಕೊನೆಕೊನೆಗೆ ಹೆಣ್ಣಿನ ಬಗೆಗಿನ ವಿಕೃತದೃಷ್ಟಿಯಾಗಿ ಮಾರ್ಪಟ್ಟಿತು. ಹೆಣ್ಣಿನ ಬಗೆಗಿನ ಇವರ ದೃಷ್ಟಿ ಅಸಮಾಧಾನದ್ದೂ, ಅಸ್ವಾಭಾವಿಕವೂ ಆಗಿತ್ತು. ಒಟ್ಟನಲ್ಲಿ ಇಂಥ ಗೊಂದಲಮಯ ತತ್ತ್ವಗಳಿಂದಾಗಿ ಈ ಸಾಹಿತ್ಯ ಚಳುವಳಿ ತನ್ನ ಅಂತಃಸತ್ತ್ವದಲ್ಲಿ ಬೂರ್ಜ್ವಾತನದ ಖಾಲಿ ರೊಚ್ಚು ಹಾಗೂ ನಶಿಸಿ ಹೋಗುತ್ತಿರುವ ಬೂರ್ಜ್ವಾ ವಿಚಾರಗಳ ಕಲಸುಮೇಲೋಗರವಾಗಿತ್ತು.

ರಾಜಕಮಲ್ ಚೌಧರಿ, ಜಗದೀಶ್ ಚತುರ್ವೇದಿ, ಗಂಗಾಪ್ರಸಾದ್ ವಿಮಲ್, ಕೈಲಾಸ್ ವಾಜಪೇಯಿ, ದೂಧ್‌ನಾಥ್‌ಸಿಂಹ, ಸೌಮಿತ್ರಮೋಹನ್, ಮಹೀಪ್‌ಸಿಂಹ್, ಶ್ರೀಕಾಂತ್‌ವರ್ಮ, ರಮೇಶ್‌ಭಕ್ಷಿ ಮುಂತಾದವರು ಈ ಸಾಹಿತ್ಯ ಚಳುವಳಿಯ ಪ್ರಮುಖ ಲೇಖಕರು. ಈ ಚಳುವಳಿಯಲ್ಲಿ ಬಂದ ಪ್ರಮುಖ ಲೇಖಕರಲ್ಲಿ ಒಬ್ಬೊಬ್ಬನೂ ಒಂದೊಂದು ಪತ್ರಿಕೆಯನ್ನು ಪ್ರಕಟಿಸಿ, ಅದರ ಮೂಲಕ ತಮ್ಮ ತಮ್ಮ "ವಾದ", 'ಪೀಳಿಗೆ' ಹಾಗೂ ಚಳುವಳಿಯ ಘೋಷಣೆಯನ್ನು ಪ್ರಕಟಿಸಿದರು. ಈ ಸಾಹಿತ್ಯ ಚಳುವಳಿಯ ಹಿಂದಿದ್ದವರು ಮರಿ-ಬೂರ್ಜ್ವಾ ದೃಷ್ಟಿಕೋನದ ವಿಕೃತವಾದಿಗಳು ಎನ್ನುವ ಸಂಗತಿ ಸ್ಪಷ್ಟವಾಗುತ್ತದೆ. ಇಂಥ "ವಾದ"ಗಳು ಸುಮಾರು ಐವತ್ತು ಅರವತ್ತಕ್ಕೂ ಮಿಕ್ಕಿದ್ದವು. ಇವುಗಳೆಲ್ಲದರ ವಸ್ತು ಧೋರಣೆ ಒಂದೇ ಆಗಿದ್ದರೂ ಅವರವರ ಸಾಹಿತ್ಯ ಗುಂಪುಗಾರಿಕೆ ಬೇರೆ ಬೇರೆಯದಾಗಿತ್ತು. ಅರಾಜಕತೆ, ಗೊತ್ತುಗುರಿಯಿಲ್ಲದ ಆಕ್ರೋಶ, ಸತತವಾದ ಖಾಲಿ ರೊಚ್ಚು ಸಮಾಜದ ಬಗೆಗೆ ಬೇಜವಾಬ್ದಾರಿವರ್ತನೆ ಮುಂತಾದ ಧೋರಣೆಗಳಿಂದ ಕೂಡಿದ್ದ ಈ ಸಾಹಿತ್ಯ ಚಳುವಳಿ ಇಷ್ಟೆಲ್ಲ ದುರ್ಬಲತೆಗಳಿಂದ ಕೂಡಿದ್ದರೂ ಒಂದು ಮಹತ್ವಪೂರ್ಣ ಕೆಲಸ ನಿರ್ವಹಿಸಿತು. ರೂಪವಾದಿಗಳ ಸಾಂಸ್ಕೃತಿಕ ದಬ್ಬಾಳಿಕೆಯನ್ನೂ ಅವರ ಶಕ್ತಿಯನ್ನೂ ಧಿಕ್ಕರಿಸಿದ್ದೇ ಆ ಮಹತ್ವದ ಕೆಲಸ. ಆದರೆ ಇದರಿಂದುಂಟಾದ ಸಾಂಸ್ಕೃತಿಕ ಶೂನ್ಯತೆಯನ್ನು ತುಂಬಲು ಸಮಕಾಲೀನ

ಸಮಾಜವಾದೀ ಲೇಖಕರೇ ಬರಬೇಕಾಯಿತು.

67ರ ನಂತರದ ಶ್ರಮಿಕ ಮತ್ತು ಮಧ್ಯಮ ವರ್ಗಗಳ ಚಳುವಳಿಯ ತೀವ್ರತೆಯಿಂದ ಹಾಗೂ ಪ್ರಜಾಸತ್ತಾತ್ಮಕ ಸಮತಾವಾದಿ, ಗುಂಪುಗಳಲ್ಲಿ ಬೆಳೆದ ಒಗ್ಗಟ್ಟಿನಿಂದಾಗಿ ಆಳುವ ವರ್ಗಗಳ ಸಂಯುಕ್ತರಂಗವು ಕುಸಿಯುವ ಸಾಧ್ಯತೆಗಳ ಸೂಚನೆಗೊಂಡವು. ಹಿಂದೀ ಪ್ರದೇಶದಲ್ಲಿ ಎಡಶಕ್ತಿಗಳು ದುರ್ಬಲವಾಗಿದ್ದರೂ ಒಟ್ಟು ದೇಶದ ಮಟ್ಟದಲ್ಲಿ ಅದರಲ್ಲೂ ಪಶ್ಚಿಮ ಬಂಗಾಳ ಮತ್ತು ಕೇರಳಗಳಲ್ಲಿ ರೂಪುಗೊಂಡ ವಾಮಪಂಥೀಯ ಪ್ರಜಾಸತ್ತಾತ್ಮಕ ಸಂಯುಕ್ತ ಸರ್ಕಾರಗಳೂ, ಅವುಗಳ ಕಾರ್ಯಸಿದ್ಧಿಗಳು ಮತ್ತು ಅವುಗಳ ಶಕ್ತಿವರ್ಧನೆಯಿಂದ ಹಿಂದೀ ಪ್ರದೇಶ ತೀರ ದೂರ ಉಳಿದಿತ್ತು ಎಂದು ಹೇಳಲಾಗು ವುದಿಲ್ಲ. ಇಂಥ ಸಂದರ್ಭದಲ್ಲಿ ಮಧ್ಯಮವರ್ಗದ ಲೇಖಕರ ರೊಚ್ಚಿನ ಭಾವನೆಗಳಿಗೆ ಆನಿಶ್ಚಿತ ದೃಷ್ಟಿಯನ್ನು ನೀಡಿತು. ಹೀಗೆ ಮರಿ ಬೂರ್ಜ್ವಾ ವಿಚಾರಧಾರೆಗಳ ಬಸಿರಿನಿಂದ ಪ್ರಜಾಸತ್ತಾತ್ಮಕ ಭಾವನೆಗಳನ್ನೊಳಗೊಂಡ ಕೃತಿಗಳು ಹೊರಬಿದ್ದವು. ಹೀಗೆ ಮರಿ ಬೂರ್ಜ್ವಾತನದಿಂದ ಪ್ರಜಾಸತ್ತಾತ್ಮಕ ಚಳುವಳಿ ಹಾಗೂ ಹೋರಾಟಗಳ ಪಾತ್ರ ತುಂಬಾ ಮಹತ್ವದ್ದಾಗಿತ್ತು. ಈ ಪ್ರಕ್ರಿಯೆಯನ್ನು ತೀವ್ರಗೊಳಿಸುವುದರಲ್ಲಿ ಗಜಾನನ ಮಾಧವ ಮುಕ್ತಿಬೋಧರು ತುಂಬಾ ಶ್ರಮಿಸಿದರು. ಇವರ ಕೃತಿಗಳು ಹಾಗೂ ವಿಮರ್ಶಾಲೇಖನ ಗಳು ಅಂದಿನ ಲೇಖಕರ ಬಹುಪಾಲು ಜನರ ಮೇಲೆ ಪ್ರಭಾವಬೀರಿತು. ಇದರಿಂದ ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚಿನ ಜವಾಬ್ದಾರಿ ವರ್ತನೆಯನ್ನು ಆಗುಮಾಡಿತು.

ಮೊದಲಿನ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪರಂಪರೆಯನ್ನು ಮುಂದುವರೆಸಲು ಟೊಂಕಕಟ್ಟಿರುವ ಇಂದಿನ ಈ ಪ್ರಮುಖ ಪ್ರವೃತ್ತಿಯನ್ನು ಪ್ರಜಾಸತ್ತಾತ್ಮಕವಾಗಿ ಅಥವಾ ನವ ಪ್ರಗತಿಶೀಲ ಪ್ರವೃತ್ತಿ ಎಂದು ಕರೆಯಬಹುದು. ತಾನು ನಿರೀಕ್ಷಿಸಿದ್ದುದಕ್ಕಿಂತಲೂ ಹೆಚ್ಚಿನ ಹೊಸ ಸನ್ನಿವೇಶದಲ್ಲಿ ಈ ಸಾಹಿತ್ಯಪ್ರವೃತ್ತಿ ಬೆಳೆಯುತ್ತಿರುವುದರಿಂದ ತನ್ನ ವ್ಯವಹಾರ, ಧ್ಯೇಯೋದ್ದೇಶ ಹಾಗೂ ಸಮಸ್ಯೆಗಳು ಹೊಸ ತರಹದ್ದೆಂದು ಭಾವಿಸುವುದು ಸ್ವಾಭಾವಿಕವಾಗಿವಿದೆ.

ಇಂದಿನ ಹಿಂದೀ ಸಾಹಿತ್ಯದಲ್ಲಿ, ಮರಿ ಬೂರ್ಜ್ವಾಗಳ ಖಾಲಿರೊಚ್ಚು, ದಿಕ್ಕೆಟ್ಟತನ ಹಾಗೂ ತಳಮಳದ ಭಾವನೆಗಳಿಗೆ ಬದಲಾಗಿ, ಬದುಕಿನ ದೈನಂದಿನ ಸಮಸ್ಯೆಗಳನ್ನು ಕಂಡು ಗಂಭೀರ ಹಾಗೂ ಜವಾಬ್ದಾರಿಯಿಂದ ನೋಡುವುದು, ಪ್ರತಿಭಟನೆ, ವಿಮರ್ಶಾ ದೃಷ್ಟಿ ಹಾಗೂ ಅನಿಶ್ಚಿತತೆಯ ಒಗೆಗಿನ ಆಲೋಚನೆ—ಇವುಗಳು ಸಾಹಿತ್ಯಿಕ ಮೌಲ್ಯಗಳಾ ಗುತ್ತಾ ಹೋಗುತ್ತಿವೆ. ಬೂರ್ಜ್ವಾ ವರ್ಗದ ಅರಾಜಕ ಭಾವನೆಯ ಸ್ಥಾನದಲ್ಲಿ ವ್ಯವಸ್ಥಿತ ಹಾಗೂ ಪ್ರಜಾಸತ್ತಾತ್ಮಕ ಭಾವನೆಗಳ ಸಮರ್ಥನೆ ಹೆಚ್ಚು ಹೆಚ್ಚು ಬೆಳಕಿಗೆ ಬರುತ್ತಿದೆ. ಈ ಸಂಕ್ರಮಣಕಾಲದಲ್ಲಿ ಒಂದು ಹೊಸ ಬಗೆಯ ಸಾಂಸ್ಕೃತಿಕ ಕ್ರಿಯಾಶೀಲತೆ ಕಂಡು ಬರುತ್ತಿದೆ. ಉದಾಹರಣೆಗೆ: ಲೇಖಕರು ಬುದ್ಧಿಜೀವಿಗಳ ಪ್ರಗತಿಶೀಲ ಸಾಹಿತ್ಯ ಚಳು ವಳಿಯ ಸಮ್ಮೇಳನಗಳನ್ನು ಅನೇಕ ಕಡೆಗಳಲ್ಲಿ ನಡೆಸಿ ಜೀವನದ ಮಹತ್ವ ಸಮಸ್ಯೆಗಳನ್ನು ವಿಶ್ಲೇಷಿಸಿ ವಾಮಪಂಥೀಯ ಪ್ರಜಾಪ್ರಭುತ್ವವಾದಿ ಏಕತೆಗೆ ಬೇಕಾದ ಆಧಾರಗಳನ್ನು

ಕಂಡುಕೊಳ್ಳತೊಡಗಿದರು. ಬಾಂದಾ, ಭರತ್‌ಪುರ್, ಆಗ್ರ, ಅಲಹಾಬಾದ್, ಪಾಟ್ನಗಳ ಬರಹಗಾರ ಸಮ್ಮೇಳನಗಳು ಸಾಂಸ್ಕೃತಿಕ ಚಳುವಳಿಯಲ್ಲಿ ವಾಮಪಂಥೀಯ ಪ್ರಜಾ ಪ್ರಭುತ್ವವಾದಿ ಬರಹಗಾರರ ಕೈಗೆ ಮತ್ತೊಮ್ಮೆ ನಾಯಕತ್ವ ಲಭಿಸಿತು ಎನ್ನುವದನ್ನು ತೋರಿಸುತ್ತವೆ. ವಾಮಪಂಥೀಯ ಲೇಖಕರ ವಿಭಿನ್ನ ತಾತ್ತ್ವಿಕ ಧೋರಣೆಗಳಿಗನುಗುಣ ವಾಗಿ ಅನೇಕ ಪತ್ರಿಕೆಗಳು ಪ್ರಕಟಗೊಂಡವು; ಪ್ರಕಟಗೊಳ್ಳುತ್ತಿವೆ.

ಈ ಪತ್ರಿಕೆಗಳು ಹೊಸ ಲೇಖಕರಿಗೆ ಕೈಮರದಂತೆ ಕೆಲಸ ಮಾಡುತ್ತಿವೆ. ಇವುಗಳಲ್ಲಿ ಶ್ರೇಷ್ಠಮಟ್ಟದ ಸೃಜನಶೀಲ ವಿಮರ್ಶಾತ್ಮಕ ಹಾಗೂ ರಾಜಕೀಯ ಧೋರಣೆಗಳ ಬರಹಗಳು ಪ್ರಕಟವಾಗುತ್ತಿವೆ. ಅಲ್ಲದೆ ರೂಪವಾದಿಗಳಿಂದ ನಡೆದ ಸಮತಾವಾದ ವಿರೋಧ ಭಾವನೆಯನ್ನು ಈ ಪತ್ರಿಕೆಗಳು ಅಳಿಸಿಹಾಕಲು ಪ್ರಯತ್ನಪಟ್ಟಿವೆ. **ಕಥಾ** (ಅಲಹಾಬಾದ್) **ಪ್ರಾರಂಭ** (ಅಲಹಾಬಾದ್) **ವಾಮ್** (ಆರಾ-ಬಿಹಾರ) **ಸಾಮಯಿಕ್** (ಕಲ್‌ಕತ್ತಾ) **ಉತ್ತರಾರ್ದ್ಧ** (ಮಥುರಾ) **ಕ್ಷೋಂ** (ಜೋದಪುರ) **ಪಹಲ್** (ಭೋಪಾಲ್) ಮತ್ತು ಓರ್ ಮುಂತಾದ ಕೆಲವು ಪತ್ರಿಕೆಗಳು ಈ ದಿಶೆಯಲ್ಲಿ ಕೆಲಸ ಮಾಡುತ್ತಿವೆ. ಇವಲ್ಲದೆ ಆಗಾಗ್ಗೆ ಇನ್ನೂ ಕೆಲವು ವಾಮಪಂಥೀಯ ಪ್ರಜಾಪ್ರಭುತ್ವ ವಾದಿ ಪತ್ರಿಕೆಗಳು ಪ್ರಕಟವಾಗುತ್ತಿವೆ. ಇವುಗಳಲ್ಲಿ **ಪರಿವೇಶ್** (ವಾರಣಾಸಿ) **ಆಮುಖ್** (ವಾರಣಾಸಿ) **ಇಬಾರತ್** (ಮಧ್ಯ ಪ್ರದೇಶ) **ಅವಾಮ್ ವಿತ್ರ್** (ಮಧ್ಯ ಪ್ರದೇಶ್) **ಯುಗ್ ಪರಿಬೋಧ್** (ದೆಹಲಿ) **ಅರ್ಥಾತ್** (ಕಲ್‌ಕತ್ತ) **ಪರಿಪತ್ರ** (ಲಖನ್) ಇವು ಮುಖ್ಯವಾದವು.

ಈ ಪತ್ರಿಕೆಗಳು ಸಮಕಾಲೀನ ಸೃಜನಶೀಲ ಬರವಣಿಗೆಯನ್ನು ಎಷ್ಟರಮಟ್ಟಿಗೆ ಪ್ರಭಾವಿತಗೊಳಿಸಿದೆ ಎಂದರೆ ರೂಪವಾದಿ ಸಾಹಿತ್ಯ ಚಳುವಳಿಯವರು ಪ್ರಕಟಿಸುವ ಪತ್ರಿಕೆಗಳು ಜನಪ್ರಿಯತೆಯನ್ನು ಕಳೆದುಕೊಳ್ಳುವಂತೆ ಮಾಡಿವೆ.

ಈ ಪತ್ರಿಕೆಗಳಲ್ಲಿ ಪ್ರಕಟವಾಗುವ ಬರಹಗಳಿಗೆ ಮಾರ್ಕ್ಸ್‌ವಾದ—ಲೆನಿನವಾದ ಮೂಲ ಆಧಾರವಾಗಿದ್ದು, ಸೃಜನಶೀಲ ಸಾಹಿತ್ಯ ಹಾಗೂ ಸೌಂದರ್ಯ ಶಾಸ್ತ್ರಗಳ ಬಗೆಗಿನ ಲೇಖನಗಳಲ್ಲದೆ ಸಮಕಾಲೀನ ರಾಜಕೀಯದ ಬಗೆಗೆ ಟೀಕೆ, ಟಿಪ್ಪಣಿಗಳೂ, ಕೂಲಿಕಾರರ, ರೈತರ ಹೋರಾಟವನ್ನು ಚಿತ್ರಿಸುವ ಕತೆ, ಕವಿತೆ, ನಾಟಕಗಳೂ ಪ್ರಕಟವಾಗುತ್ತಿರುತ್ತವೆ. ಇವು ಕೇವಲ ಮಧ್ಯಮ ವರ್ಗದ ವಿದ್ಯಾವಂತರು ಮಾತ್ರವಲ್ಲದೆ ಕೂಲಿಕಾರರು ಆಸಕ್ತಿಯಿಂದ ಓದುತ್ತಾರೆ.

ಈ ಪ್ರಗತಿಪರ ಪ್ರವೃತ್ತಿಯನ್ನು ಸಮರ್ಥಿಸಿ ಬರೆಯುವ ಲೇಖಕರ ಸಂಖ್ಯೆಯೂ ಹೆಚ್ಚುತ್ತಿದೆ. ಕಾವ್ಯಕ್ಷೇತ್ರದಲ್ಲಿ ಧೂಮಿಲ್ (ಮರಣ: 1975); ಲೀಲಾಧರ್ ಜಗೂಡಿ, ಕುಮಾರೇಂದ್ರ ಪಾರಸ್‌ನಾಥ್‌ಸಿಂಹ, ಶ್ರೀಹರ್ಷ ಜ್ಞಾನೇಂದ್ರಪತಿ, ವಿಜೇಂದ್ರಅನಿಲ್, ಮನಮೋಹನ್, ನಂದ ಭಾರದ್ವಾಜ್, ವಿಜೇಂದ್ರ, ಋತುರಾಜ, ಮಹೇಂದ್ರನೇಹ, ಕಾಂತಿಮೋಹನ್, ಶಲಭ್ ಶ್ರೀರಾಮ ಸಿಂಹ್, ರಮೇಶ್ ರಂಜಕ್, ಅಜ್ಞೇಯ ಉಪಾಧ್ಯಾಯ್. ವೇಣುಗೋಪಾಲ್, ಆಲೋಕ್‌ಧನ್ವಾ, ಅಶೋಕ್‌ಚಕ್ರಧರ್,

ಕುಮಾರ್‌ವಿಕಲ್, ಇಬ್ಬಾರ್‌ರಬ್ಬಿ ಮುಂತಾದವರು ಮುಖ್ಯರು. ಇವರಲ್ಲದೆ ಮೊದಲಿನ ಪ್ರಗತಿಶೀಲ ಚಳುವಳಿಯೊಡನೆ ಸಂಬಂಧವಿಟ್ಟುಕೊಂಡಿದ್ದ ಅನೇಕ ಹಿರಿಯ ಲೇಖಕರಾದ ನಾಗಾರ್ಜುನ, ಕೇದಾರನಾಥ, ತ್ರಿಲೋಚನರು ಈ ದಿಸೆಯಲ್ಲಿ ಸಹಕಾರ ನೀಡುವವರಾಗಿದ್ದಾರೆ. ಒಂದು ಕಾಲದಲ್ಲಿ ಸಮತಾವಾದವನ್ನು ವಿರೋಧಿಸಿ ರೂಪವಾದದ ವ್ಯಾಮೋಹದಲ್ಲಿ ಸಿಕ್ಕಿಕೊಂಡಿದ್ದು ಈಗ ಪ್ರಜಾಪ್ರಭುತ್ವವಾದಿ ಚಳುವಳಿಯ ಪ್ರಗತಿಯಿಂದ ತಮ್ಮ ಧೋರಣೆಯನ್ನು ಬದಲಾಯಿಸಿ ಪ್ರಗತಿಶೀಲತೆಯತ್ತ ತಿರುಗಿದ ಕೆಲವು ಕವಿಗಳ ಹೆಸರುಗಳು ಉಲ್ಲೇಖನೀಯ.

ಇವರಲ್ಲಿ ಮೊದಲ ಸಾಲಿನ ಕವಿಗಳು ತಮ್ಮ ಕಾವ್ಯಗಳಲ್ಲಿ ಜೀವನದ ಸಮಸ್ಯೆಗಳ ತೀಕ್ಷ್ಣತೆಯನ್ನು ಅಥವಾ ಬದುಕಿನಲ್ಲಿರುವ ವೈರುಧ್ಯಗಳ ವಿಶ್ಲೇಷಣೆಯನ್ನು ಅಥವಾ ಜನರ ಕ್ರಾಂತಿಭಾವನೆಯ ಕನಸುಗಳನ್ನು ಪ್ರತಿಮೆಗಳ ಮೂಲಕ ತಮ್ಮದೇ ಆದ ಹೊಸ ಬಗೆಯ ಕಾವ್ಯರೂಪದ ಮೂಲಕ ಚಿತ್ರಿಸುತ್ತಾರೆ. ಸಾಮಾನ್ಯವಾಗಿ ಕವಿ ತನ್ನ ಕಾವ್ಯದ ನಾಯಕನ ಮೂಲಕ ಎಲ್ಲ ವಿಚಾರಗಳನ್ನು ಹೇಳಿಸುವುದು ಅಂತಹುದರಲ್ಲಿ ಒಂದು ಕ್ರಮ. ಧೂಮಿಲ್ ಅವರ **ಮೋಚೀರಾಮ**, ಅಶೋಕ್ ಚಕ್ರಧರ ಅವರ **ಖಚೇರಾ**ಗಳು ಹಿಂದೀ ಸಾಹಿತ್ಯದಲ್ಲಿ ಈ ಹೊಸ ಶೈಲಿಯನ್ನು ಪ್ರಾರಂಭಿಸಿದುವು. ಇನ್ನೂ ಕೆಲವರು ತಮ್ಮ ಕಾವ್ಯಗಳಲ್ಲಿ ವ್ಯಂಗ್ಯವನ್ನು ಅಳವಡಿಸಿಕೊಂಡಿದ್ದಾರೆ. ಅವರಲ್ಲಿ ಧೂಮಿಲ್, ಜಗೂಡಿ, ವಿಜೇಂದ್ರ ಅನಿಲ್, ಕುಮಾರೇಂದ್ರ ಪಾರಸ್‌ನಾಥಸಿಂಹ್, ಮುಂತಾದವರು ಮುಖ್ಯರು. ಜೀವನದ ವೈರುಧ್ಯಗಳನ್ನು ವೈಜ್ಞಾನಿಕದೃಷ್ಟಿಯಿಂದ ಅರ್ಥಮಾಡಿಕೊಂಡು ಅವುಗಳ ದ್ವಂದ್ವಾತ್ಮಕ ಸಂಬಂಧಗಳನ್ನು ವಿಶ್ಲೇಷಿಸಿ ಓದುಗರ ಮನಸ್ಸನ್ನು ಚಳುವಳಿಗೆ ಅಣಿಗೊಳಿಸುವ ಪ್ರಯತ್ನ ನಡೆದ ಕಡೆ ಒಂದು ರೀತಿಯ ಜಟಿಲ ಕಾವ್ಯರೂಪವು ಹುಟ್ಟಿಕೊಂಡಿತು. ಈ ವಿಧಾನವನ್ನು ಅನುಸರಿಸಿದವರಲ್ಲಿ ಮನಮೋಹನ್, ಅಲೋಕಿಧನ್ವಾ, ಋತುರಾಜ, ವಿಜೇಂದ್ರ, ಶ್ರೀಹರ್ಷ, ಇವರು ಪ್ರಮುಖರು. ಇನ್ನೂ ಕೆಲವರು ಬದುಕಿನ ನಿರ್ದಾಕ್ಷಿಣ್ಯ ವಾಸ್ತವ ಚಿತ್ರಣ ಕೊಡುವವರು. ಅಂಥಹವರ ಬರಹಗಳು ಕೇವಲ 'ಹೇಳಿಕೆ'ಗಳಂತಿದ್ದು ಕಾವ್ಯಸೂಕ್ಷ್ಮತೆಯನ್ನು ಪಡೆಯಲು ಸಮರ್ಥವಾಗಿಲ್ಲ. ಇವರಲ್ಲಿ ವೇಣುಗೋಪಾಲ್ ಮುಖ್ಯರು. ಒಟ್ಟಿನಲ್ಲಿ ಈ ಎಲ್ಲಾ ಕವಿಗಳ ಕೃತಿಗಳು ವಾಮಪಂಥೀಯ ಪ್ರಜಾಪ್ರಭುತ್ವವಾದಿ ಸಾಹಿತ್ಯ ಚಳುವಳಿಯ ವಿವಿಧ ಆಯಾಮಗಳನ್ನೂ ಅದರ ವ್ಯಾಪಕತೆಯನ್ನು ಪರಿಚಯಿಸುತ್ತವೆ. ಇಷ್ಟಾದರೂ ಕೂಡ ಈ ಎಲ್ಲ ಲೇಖಕರ ಕಾವ್ಯವಸ್ತು ಇನ್ನೂ ಮಧ್ಯಮ ವರ್ಗವನ್ನೇ ಲಕ್ಷ್ಯದಲ್ಲಿಟ್ಟುಕೊಂಡದ್ದು. ಇದೇ ಇವರ ದುರ್ಬಲತೆಯೂ ಹೌದು. ಜೀವನದಲ್ಲಿನ ಶೋಷಣೆ ಹಾಗೂ ಹೋರಾಟ ಚಿತ್ರಿಸುವಲ್ಲಿ ಇಲ್ಲಿನ ಬಹುಪಾಲು ಕವಿಗಳು ಹೆಚ್ಚು ಕಡಿಮೆ ಒಂದೇ ಬಗೆಯ ಭಾವನಾಲೋಕದಲ್ಲಿ ಸಂಚರಿಸುವರೇನೋ ಎನ್ನಿಸುತ್ತದೆ.

ಇದರ ಜೊತೆಗೆ ಜನಪದ ಸಾಹಿತ್ಯವನ್ನು ಅನುಕರಿಸಿದ ಅನೇಕ ಶೈಲಿಗಳು ಹೊರ ಬರುತ್ತಿವೆ. ಇವರಲ್ಲಿ ಸರ್ವೇಶ್ವರ ದಯಾಳ್ ಸಕ್ಸೇನಾ, ಶಲಬ್ ಶ್ರೀರಾಮಸಿಂಹ, ರಮೇಶ್

ದಾಟಿಕ್, ಕಾಂತಿಮೋಹನ್, ಮಹೇಂದ್ರನೇಹ–ರು ಮುಖ್ಯರು. ಇವರುಗಳು ಬದುಕಿನ ಹೋರಾಟಗಳಿಗೆ ಜನಪದ ಶೈಲಿಯಲ್ಲಿ ಅಭಿವ್ಯಕ್ತಿ ನೀಡುವುದರಲ್ಲಿ ಸಫಲರಾಗಿದ್ದಾರೆ. ಇವರುಗಳ ಕವನ ಮತ್ತು ಗೀತರೂಪಕಗಳು ಮೊದಲಿನ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಕವಿಗಳನ್ನು ನೆನಪಿಗೆ ತರುತ್ತವೆ. ಅಲ್ಲದೆ ಇವರ ಕೃತಿಗಳು ರೈತರ ಕಾರ್ಮಿಕರ ಸಂಘಟನೆಗಳಲ್ಲಿ ಗಮನಾರ್ಹ ಪಾತ್ರವಹಿಸುವುದರ ಜೊತೆಗೆ ಲೋಕಪ್ರಿಯತೆಯನ್ನು ಪಡೆದಿವೆ.

ಈ ಕವಿಗಳ ವರ್ಗಪ್ರಜ್ಞೆಯಲ್ಲಿ ಅನೇಕ ಸ್ತರಗಳನ್ನು ಗುರುತಿಸಬಹುದು. ಆದರೆ ಇವರೆಲ್ಲರೂ ಮಾರ್ಕ್ಸ್‌ವಾದಿ–ಲೆನಿನ್‌ವಾದಿ ದರ್ಶನವನ್ನು ತಮ್ಮ ಬರಹಗಳಿಗೆ ಆಧಾರವಾಗಿಟ್ಟುಕೊಂಡವರು. ಇವರಲ್ಲಿ ವಿಭಿನ್ನ ತಾತ್ತ್ವಿಕ ಧೋರಣೆ ಉಳ್ಳ ವಾಮ ಪಂಥೀಯ ಪಕ್ಷಗಳ ಕಾರ್ಯಕರ್ತರೂ ಇದ್ದಾರೆ. ಇವರಲ್ಲಿ ಬಹುಮಂದಿ ಲೇಖಕರು ಮಾರ್ಕ್ಸ್‌ವಾದಿ ವಿಚಾರಗಳನ್ನು ಬೌದ್ಧಿಕ ಮಟ್ಟದಲ್ಲಿ ಮಾತ್ರ ಸ್ವೀಕರಿಸುತ್ತಿದ್ದಾರೆ. ಅವರ ಕೃತಿಗಳಲ್ಲಿ ವೈಯಕ್ತಿಕ ರೋಷ, ಕ್ರಾಂತಿಭಾವನೆಗಳ ರಮ್ಯ ಕಂಡುಬರುತ್ತವೆ. ಆದರೂ ಇವರಿಂದ ಕೆಲವು ಒಳ್ಳೆಯ ಕೃತಿಗಳು ಬಂದಿವೆ. ಇವರಲ್ಲಿ ಹೆಚ್ಚು ಮಂದಿ ಲೇಖಕರು ವಿಶಿಷ್ಟ ಸ್ಥಾನವನ್ನು ಬಯಸುವ ಪ್ರತಿಷ್ಠಿತವಾದ (Elitism) ಬೂರ್ಜ್ವಾತನದ ಅವಕಾಶವಾದ (opportunism) ಮುಂತಾದ ದೌರ್ಬಲ್ಯಗಳಿಗೊಳಗಾದವರು. ಇದೇ ಅವರ ಮಿತಿಯನ್ನು ನಿರ್ಣಯಿಸುತ್ತದೆ.

ಮೊದಲಿನ ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ಸೇರಿದ ಲೇಖಕರಲ್ಲಿ ಶಕ್ತ ಹಾಗೂ ಜನಪ್ರಿಯ ಬರಹಗಾರರಾದ ನಾಗಾರ್ಜುನರು ಇತ್ತೀಚಿನ ದಿನಗಳಲ್ಲಿ ತುಂಬಾ ಕ್ರಿಯಾಶೀಲರಾಗಿದ್ದಾರೆ. ಅವರು ಪಶ್ಚಿಮ ಬಂಗಾಳದಲ್ಲಿ ನಡೆದ ಚುನಾವಣಾ ಗಡಿಬಿಡಿಗಳನ್ನು ಕುರಿತು ಬರೆದ ಪ್ರಸಿದ್ಧ ನೀಳ್ಗವಿತೆ (ಸಾಮಯಿಕ್‌ದಲ್ಲಿ ಪ್ರಕಟಿತ)ಯಲ್ಲಿ 'ಈಗಲಾದರೂ ನಿಲ್ಲಿಸು ದೇವಿ ಈ ಚುನಾವಣೆಯ ನಾಟಕವನ್ನು....'ದೇವಿ ನೀನಾದರೋ ಕಪ್ಪುಹಣದ ಕುದುರೆಯನ್ನೇರಿನಿಂತಿರುವೆ' (ಉತ್ತರಾರ್ಧದಲ್ಲಿ ಪ್ರಕಟಿತ)ಗಳಲ್ಲಿನ ಭಾವನೆಗಳು ಸಮಕಾಲೀನ ಸಾಹಿತ್ಯಕ್ಕೆ ಪ್ರೇರಣೆಯಾಗಿವೆ. ಅಲ್ಲದೆ ಜಾನಪದ ರೀತಿಯ ಸಾಹಿತ್ಯಕ್ಕೆ ಉತ್ತಮ ಉದಾಹರಣೆಗಳಾಗಿವೆ. ಆದರೆ ಇವರ ಕೃತಿಗಳಲ್ಲಿ ಮಾರ್ಕ್ಸ್‌ವಾದಿ ವಿಚಾರಧಾರೆಯ ವೈಜ್ಞಾನಿಕ ದೃಷ್ಟಿಕೋನದ ಅಭಾವವಿರುವುದರಿಂದ ಎಷ್ಟೋವೇಳೆ ಅನೇಕ ಸಾಹಿತ್ತ್ಯಿಕ ತೊಂದರೆಗೊಳಗಾಗುತ್ತಾರೆ. ನಿಜ ಹೇಳಬೇಕೆಂದರೆ, ಇಂಥ ಕವಿಗಳು ತಮ್ಮ ಸ್ವಂತ ಅನುಭವಗಳನ್ನು ಸಮಾಜದ ಅನುಭವಗಳೊಂದಿಗೆ ಹಾಗೂ ವಿಶ್ವದೃಷ್ಟಿಯತ್ತ ತಾದ್ಯಾತ್ಮಗೊಳಿಸಲು ಹಾಗೂ ತಮ್ಮ ಅನುಭವಗಳಿಗೆ ವೈಜ್ಞಾನಿಕ ಆಧಾರಗಳನ್ನು ನೀಡಲು ಅಸಮರ್ಥರಾಗಿರುತ್ತಾರೆ. ಇದರಿಂದಾಗಿ ಇವರುಗಳು ಜನಸಾಮಿಪ್ಯದಿಂದ ತಮಗೆಬದಗುವ ಅನುಭವಗಳ ಮಟ್ಟಿಗೆ ಪ್ರಜಾಪ್ರಭುತ್ವವಾದಿಗಳಾಗಿರುತ್ತಾರೆಯೇ ಹೊರತುಸಮಾಜದ ಕೆಲವು ತಿರುಗುಮುರುಗು ಸನ್ನಿವೇಶಗಳಲ್ಲಿ ತಮ್ಮನ್ನು ಸಾಹಿತ್ಯಿಕವಾಗಿ ರಕ್ಷಿಸಿಕೊಳ್ಳಲು ವಿಫಲರಾಗುತ್ತಾರೆ. ಆದರೂ ಇವರುಗಳು ಇಂದಿನ ವಾಮಪಂಥೀಯ ಪ್ರಜಾಪ್ರಭುತ್ವವಾದಿ ಸಾಹಿತ್ಯ ಚಳುವಳಿಯ ಅವಿಭಾಜ್ಯ ಅಂಗವೆಂದೇ ಒಪ್ಪಿಕೊಳ್ಳ

ಬೇಕಾಗುತ್ತದೆ.

ಇನ್ನೊಂದು ವರ್ಗದ ಬರಹಗಾರರು ಮಧ್ಯಮವರ್ಗದ ಗುಣವಾದ ಸಂಶಯವಾದ ಹಾಗೂ ಪ್ರಜಾಪ್ರಭುತ್ವವಾದೀ ಭಾವನೆಗಳೆರಡನ್ನೂ ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸಿರುತ್ತಾರೆ. ಇತ್ತೀಚೆಗೆ ಇವರೂ ತಮ್ಮ ಸಂಶಯವಾದವನ್ನು ದೂರಗೊಳಿಸುವ ಪ್ರಯತ್ನದಲ್ಲಿದ್ದಾರೆ.

ಕಥಾ ಸಾಹಿತ್ಯದಲ್ಲೂ ಸಹ ವಾಮಪಂಥೀಯ ಪ್ರಜಾಪ್ರಭುತ್ವವಾದಿ ಸಾಹಿತ್ಯ ಚಳುವಳಿ ಸ್ವಲ್ಪವೇ ಕಾಲದಲ್ಲಿ ಹೊಸ ಮಜಲುಗಳನ್ನು ನಿರ್ಮಿಸಿದೆ. ಕಾಶಿನಾಥ ಸಿಂಹ, ದೂಧ್‌ನಾಥ್‌ಸಿಂಹ್, ಅಸ್‌ಗರ್‌ವಜಾಹತ್, ನೀರಜ್‌ಸಿಂಹ್. ಸನತ್‌ಕುಮಾರ್, ಮಧುಕರ್‌ಸಿಂಹ, ಹೃಷಿಕೇಶ್, ಶ್ರೀಹರ್ಷ್, ಅವಧ್ ನಾರಾಯಣ್, ಇಸ್ರಾಯಲ್, ಮಾರ್ಕಂಡೇಯ, ಸತೀಶ್‌ಜಮಾಲಿ, ಶೇಖರ್‌ಜೋಷಿ, ಅಮರಕಾಂತ್, ಭೈರವಪ್ರಸಾದ್ ಗುಪ್ತ, ಭೀಮಸೇನ್‌ತ್ಯಾಗಿ, ಪಂಕಜವಿಷ್ಟ ರಮೇಶ್ ಉಪಾಧ್ಯಾಯ, ಪ್ರದೀಪ್ ಭಾಂಡವ್-ಮುಂತಾದವರು ಅತ್ಯಧಿಕ ಚರ್ಚೆಗೊಳಗಾದ ಕತೆಗಾರರಾಗಿದ್ದಾರೆ. ಅವರಲ್ಲೂ ನೀರಜ್‌ಸಿಂಹ, ಸನತ್‌ಕುಮಾರ, ಶ್ರೀಹರ್ಷ, ಅನಯ್, ಅವಧ್‌ನಾರಾಯಣ್—ಇವರು ಹೆಚ್ಚುಹೆಚ್ಚಾಗಿ ಕಾರ್ಮಿಕರ, ರೈತರ, ಶೋಷಣಾಬದುಕು, ಹೋರಾಟ ಹಾಗೂ ಅವರ ಮೇಲಾಗುತ್ತಿರುವ ಅತ್ಯಾಚಾರಗಳ ವಾಸ್ತವ ಚಿತ್ರಣವನ್ನು ಕೃತಿಗಳಲ್ಲಿ ತರುತ್ತಿದ್ದಾರೆ. ಆದ್ದರಿಂದಲೇ ವಾಮಪಂಥೀಯ ಸಮಕಾಲೀನ ಸಾಹಿತ್ಯ ಚಳುವಳಿ ಅಗ್ರಸ್ಥಾನದಲ್ಲಿದೆ ಎನ್ನಬಹುದು, ಮಾರ್ಕಂಡೇಯ, ಅಮರಕಾಂತ, ಶೇಖರಜೋಷಿ—ಅವರು ರೂಪವಾದವನ್ನು ವಿರೋಧಿಸಿ ; ಬಡಜನತೆಯ ವಾಸ್ತವ ಚಿತ್ರಣಕ್ಕೆ ಪ್ರಾಧಾನ್ಯತೆ ಕೊಡುವುದರ ಮೂಲಕ ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ಸಂಬಂಧಿಸಿದವರಾಗಿದ್ದಾರೆ. ಕಥಾಕ್ಷೇತ್ರದಲ್ಲಿ ಹೊಸ ಹೊಸ ಬಗೆಯ ಪ್ರತಿಮೆಗಳಿಂದ ಕತೆಗಳನ್ನು ಬರೆಯಲು ಪ್ರಾರಂಭಿಸಿದವರಲ್ಲಿ ಅಸಗರ್ ದಜಾಹತ್ ಮುಖ್ಯರು. ಇವರು ಸಾಕಷ್ಟು ಜನಪ್ರಿಯತೆಯನ್ನು ಗಳಿಸುತ್ತಿದ್ದಾರೆ.

ಕಾವ್ಯಕ್ಕೆ ಹೋಲಿಸಿದರೆ ಕಥಾಸಾಹಿತ್ಯದಲ್ಲಿ ಬದುಕಿನ ವಾಸ್ತವ ಚಿತ್ರಣ ಸಮರ್ಥವಾಗಿ ಮೂಡಿಬಂದಿದೆ. ಆದರೆ ಇಂದಿಗೂ ಕಥಾಸಾಹಿತ್ಯದಲ್ಲಿ ರೂಪವಾದಿ ಹಾಗೂ ಬೂರ್ಜ್ವಾ ವಿಚಾರಧಾರೆಗಳಿಂದ ಕೂಡಿದ ಲೇಖಕರು ಇನ್ನೂ ಸಕ್ರಿಯವಾಗಿದ್ದು ಪ್ರಗತಿಶೀಲ ಸಾಹಿತ್ಯ ಚಳುವಳಿಯನ್ನೂ ಹತ್ತಿಕ್ಕಲು ಎಲ್ಲಾ ಪ್ರಯತ್ನವನ್ನೂ ಮಾಡುತ್ತಿದ್ದಾರೆ. ಕಾದಂಬರಿ ಕ್ಷೇತ್ರದಲ್ಲಿ ಯಾವ ಒಂದು ಪಂಥವೂ ನಿಶ್ಚಿತವಾಗಿ ಆರಂಭವಾಗಿಲ್ಲ. ನಾಟಕ ಕ್ಷೇತ್ರದಲ್ಲಂತೂ ವಾಮಪಂಥೀಯ ಪ್ರಜಾಪ್ರಭುತ್ವವಾದಿ ನಾಟಕಗಳು ಇನ್ನುಮೇಲೆ ಹೊರಬರಬೇಕಾಗಿದೆ. ಆದರೂ ಕೆಲವು ಪ್ರಗತಿಪರ ನಾಟಕಕಾರರನ್ನು ಹೆಸರಿಸಬಹುದು. ಅವರಲ್ಲಿ ಅಸ್‌ಗರ್‌ದಜಾಹತ್. ಶಿವರಾಮ್, ಕಾಂತಿಮೋಹನ್. ಸರ್ವೇಶ್ವರದಯಾಲ್. ಅಶೋಕ್ ಚಕ್ರಧರ್—ಮುಂತಾದವರು ಕೆಲವು ಪ್ರಯತ್ನಮಾಡಿದ್ದಾರೆ. ಆದರೆ ನಾಟಕ ಕ್ಷೇತ್ರದಲ್ಲಿ ಪ್ರಗತಿಶೀಲ ಚಳುವಳಿ ತುಂಬಾ ಅತೃಪ್ತಿಕರವಾಗಿದ್ದು ದುರ್ಬಲವಾಗಿದೆ

ಎಂದೇ ಹೇಳಬೇಕು.

ವಿಮರ್ಶಾಕ್ಷೇತ್ರದಲ್ಲಿಯೂ ವಾಮಪಂಥೀಯ ಪ್ರಜಾಪ್ರಭುತ್ವವಾದಿ ಸಾಹಿತ್ಯಚಳುವಳಿ ಗಟ್ಟಿಗೊಳ್ಳುತ್ತಿದೆ. ವಿಭಿನ್ನ ತಾತ್ತ್ವಿಕ ಧೋರಣೆಗಳನ್ನುಳ್ಳ ಪತ್ರಿಕೆಗಳ ಮೂಲಕ ವಿಮರ್ಶಾತ್ಮಕ ಬರಹಗಳು, ಟಿಪ್ಪಣಿಗಳು, ಚರ್ಚೆಗಳು ನಡೆದು ಹಿಂದೀಸಾಹಿತ್ಯದ ವಿಮರ್ಶೆ ತೀವ್ರವಾಗಿ ಬೆಳೆಯುತ್ತಿದೆ. ಇಲ್ಲಿಯೂ ಮಾರ್ಕ್ಸ್‌ವಾದಿ-ಲೆನಿನ್‌ವಾದಿ ಸೌಂದರ್ಯ ಶಾಸ್ತ್ರವು ಇವುಗಳಿಗೆ ಮೂಲಾಧಾರವಾಗಿದೆ ಎಂಬುದು ಗಮನಾರ್ಹ ಸಂಗತಿ. ಇದಕ್ಕೆ ಅದರ ವೈಚಾರಿಕ ಸ್ಪಷ್ಟತೆ ಮತ್ತು ಶ್ರೇಷ್ಠತೆಗಳಿಂದಾಗಿ ಹೆಚ್ಚು ಪ್ರಭಾವಶಾಲಿಯಾಗುತ್ತಿದೆ ಎನ್ನಬಹುದು. ಡಾ. ಓಂಪ್ರಕಾಶ್ ಅಗರ್‌ವಾಲ್, ಭಗವಾನ್‌ಸಿಂಹ, ಕಾಂತಿ ಮೋಹನ್, ವಿಮಲ್‌ವರ್ಮ, ಚಂದ್ರಭೂಷಣ್ ತಿವಾರಿ, ಚಂಚಲ್ ಚೌಹಾನ್, ಅಶೋಕ್‌ಚಕ್ರಧರ್, ದ್ವಾರಕಾಪ್ರಸಾದ್, ಕುಮಾರ್ ಪಾಲ್‌ಸಿಂಹ್, ಸವ್ಯಸಾಚಿ, ಜನೇಶ್ವರ್ ವರ್ಮ, ಕರ್ಣಸಿಂಹ್ ಚೌಹಾನ್, ರಾಜೀವ ಸಕ್ಸೇನಾ, ರಾಜಕುಮಾರ್ ಸೈನಿ, ರಮೇಶ್ ಕುಂತಲ್ ಮೇಘ, ಮೇನೆಜರ್ ಪಾಂಡೆ, ವಿಶ್ವನಾಥ್ ತ್ರಿಪಾಠಿ ಲಾಲ್, ಬಹದ್ದೂರ್‌ವರ್ಮ, ರಾಮ್‌ಗೋಪಾಲ್ ಪಾಂಡೆ, ಶಿವಕುಮಾರ್ ಮಿತ್ರ, ಸುರೇಂದ್ರ ಚೌಧರಿ—ಮುಂತಾದ ವಿಮರ್ಶಕರು ಈ ಕ್ಷೇತ್ರದಲ್ಲಿ ಮುಖ್ಯರು.-ಮಾರ್ಕ್ಸ್‌ವಾದಿ ಲೆನಿನ್‌ವಾದಿ ದರ್ಶನ ಇವರ ವಿಮರ್ಶೆಗೆ ಆಧಾರವಾಗಿದೆ. ಇವರು ಸಾಹಿತ್ಯದಲ್ಲಿ ವರ್ಗ ವಿಶ್ಲೇಷಣೆ, ಲೇಖಕರ ಸಾಮಾಜಿಕನಿಷ್ಠೆ, ಸಮಾಜಪರಿವರ್ತನೆಯಲ್ಲಿ ಸಾಹಿತ್ಯ ಮತ್ತು ಸಾಹಿತಿಯ ಪಾತ್ರವಸ್ತು, ಶೈಲಿಗಳ ನಡುವಿನ ಸಂಬಂಧ, ರೂಪವಾದಿ ಸಾಹಿತಿಗಳಲ್ಲಿರುವ ಪ್ರತಿಗಾಮಿತನ ಮುಂತಾದ ಹತ್ತಾರು ಸಮಸ್ಯೆಗಳನ್ನು ಈ ಹೊಸ ವಿಮರ್ಶಕರು ಎತ್ತುವುದರ ಮೂಲಕ ಹೊಸ ಸೌಂದರ್ಯಶಾಸ್ತ್ರವೊಂದರ ಬೆಳವಣಿಗೆಗೆ ಸಹಕಾರಿಯಾಗುತ್ತಿದ್ದಾರೆ.

ಇಂದಿನ ಹಿಂದೀ ಸಾಹಿತ್ಯ ಚಟುವಟಿಕೆಗಳು ತುಂಬಾ ಉತ್ಸಾಹದಾಯಕವಾಗಿ ಕಂಡು ಬಂದರೂ ಈ ಚಳುವಳಿಗಳಿಗೆ ಕೆಲವು ಮಹತ್ವದ ಮಿತಿಗಳಿವೆ. ಹಿಂದೀ ಕ್ಷೇತ್ರದಲ್ಲಿ ವಾಮಪಂಥೀಯ ಪ್ರಜಾಪ್ರಭುತ್ವವಾದಿ ರಾಜಕೀಯ ಚಳುವಳಿ ಹಿಂದೆಬಿದ್ದಿರುವ ಈ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿಯು ಬೆಳೆಯಲು ಹವಣಿಸುತ್ತಿದೆ. ಇದರಿಂದಲೇ ಮಧ್ಯಮವರ್ಗದ ಭಾವನೆಗಳೂ ಆ ಸಂಬಂಧದಿಂದ ಬರುವ ದೌರ್ಬಲ್ಯಗಳೂ ಹಾಗೆಯೇ ಉಳಿದುಕೊಂಡುಬರುತ್ತಿವೆ. ಇದನ್ನು ಎಲ್ಲ ಕ್ಷೇತ್ರಗಳಲ್ಲೂ, ಕಾಣಬಹುದು. ಇದರ ಜೊತೆಗೆ ಎಡಪಕ್ಷಗಳಲ್ಲಿ ಉಂಟಾಗಿರುವ ಭಿನ್ನಾಭಿಪ್ರಾಯಗಳು ಮತ್ತು ಅವುಗಳ ನಾಯಕತ್ವದಲ್ಲಿ ಯುವಜನಾಂಗದ ಆಶೋತ್ತರಗಳ ಅಭಿವ್ಯಕ್ತಿಗೆ ಇರುವ ತೊಡಕು ಪ್ರತಿಗಾಮಿಶಕ್ತಿಗಳು ಮತ್ತೆ ಮತ್ತೆ ಸಂಘಟಿತರಾಗಿ ಮೇಲೇರಿ ಬರುತ್ತಿರುವುದು ಕೆಲವು ಮುಖ್ಯ ಸಮಸ್ಯೆಗಳಾಗಿವೆ. ಆದರೆ ಪ್ರಸಕ್ತ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಬೆಳೆಯಲು ಆಶಾದಾಯಕ ಅವಕಾಶಗಳಿವೆ. ಎಡಪಕ್ಷಗಳ ವಿಶಾಲ ತಳಹದಿಯ ಒಗ್ಗಟ್ಟು ಪ್ರಗತಿಶೀಲ ಸಾಹಿತ್ಯ ಚಳುವಳಿಯ ಭವಿಷ್ಯವನ್ನು ಇನ್ನೂ ಅರ್ಥಪೂರ್ಣ

ಮಾಡಿದೆ. ಆಳುವ ವರ್ಗಗಳ ಶಕ್ತಿ ದಿನೇ ದಿನೇ ಕುಗ್ಗುತ್ತಿದೆ. ಮತ್ತು ಅದರ ಸಾಂಸ್ಕೃತಿಕ ಚಟುವಟಿಕೆಗಳು ಲೋಕಪ್ರಿಯತೆಯನ್ನು ಕಳೆದುಕೊಳ್ಳುತ್ತಿವೆ. ಇದೀಗ ವಾಮಪಂಥೀಯ ಪ್ರಜಾಪ್ರಭುತ್ವವಾದಿ ಸಾಹಿತ್ಯಚಳುವಳಿ ತನ್ನೆಲ್ಲ ಕಷ್ಟಪರಿಸ್ಥಿತಿಗಳನ್ನು ದಾಟಿ ಮುಂದೆ ಹೋಗುವ ಅವಕಾಶಗಳನ್ನು ನಿರ್ಮಿಸಿಕೊಳ್ಳುತ್ತಿದೆ.

---

ಅನಂತಿ ಕುವರ್ ದಾವೆ

# ಗುಜರಾತಿ ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ

ಗುಜರಾತಿ ಸುಮಾರು ಒಂಭತ್ತು ಶತಮಾನಗಳ ಹಿಂದೆ ಭಾಷೆಯಾಗಿ ಚಿಗುರೊಡೆಯಿತು. ಅಂದಿನಿಂದ ಸುಮಾರು 185೦ರಲ್ಲಿ ಮಹಾ ದೇಶಭಕ್ತ ಕವಿ ನರ್ಮದ್ ಸ್ಪಷ್ಟ ಧೋರಣೆ ಹಾಗೂ ಉತ್ಕಟೇಚ್ಛೆಗಳಿಂದ ಸಾಹಿತ್ಯಿಕ ಕ್ಷೇತ್ರದಲ್ಲಿ ಕಾಣಿಸಿಕೊಳ್ಳುವವರೆಗೆ ಗುಜರಾತಿ ಸಾಹಿತ್ಯ ಧಾರ್ಮಿಕ ನಂಬುಗೆ, ಭಕ್ತಿ ಮುಂತಾದವುಗಳಿಂದಲೇ ತುಂಬಿತ್ತು.

ಭಾರತದ ಇತರ ಭಾಷೆಗಳ ಚರಿತ್ರೆಯಲ್ಲಿ ಕಾಣುವಂತೆ ಇಲ್ಲಿಯೂ ಕೂಡ ರಾಜಮಹಾರಾಜರ ಕಾಲದಲ್ಲಿ ಅವರ ವರ್ಗಹಿತವನ್ನು ಸಾಹಿತ್ಯರಚನೆ ಮೂಲಕ ಕಾಯುವಂತಹ ಕವಿಗಳನ್ನು ನಾವು ಕಾಣುತ್ತೇವೆ. ಪ್ರಭುಗಳಿಗೆ ಅಂಕಿತವಾದ ಆಸ್ಥಾನ ಕಾವ್ಯಗಳು, ಪುರಾಣಗಳು ಅಂದಿನ ಜನಪ್ರಿಯ ಸಾಹಿತ್ಯರೂಪಗಳಾಗಿದ್ದವು. ಅಂತೆಯೇ ಧರ್ಮಪಂಥದ ಪ್ರತಿಪಾದಕರೇ ಸಾಹಿತ್ಯದಲ್ಲಿ ನಾಯಕರಾಗಿ ಮೆರೆದರು. ಧರ್ಮಪಂಥಗಳು ಎತ್ತಿ ಹಿಡಿಯಲ್ಪಟ್ಟವು (12ನೇ ಶತಮಾನದ ಅಂತ್ಯದಿಂದ 15ನೇ ಶತಮಾನದವರೆಗೆ) ಶಾಲಿಭದ್ರ ಸೂರಿ, ಮಹೇಂದ್ರ ಸೂರಿ, ವಿನಯ್ ಶ್ಯಾಮಸುಂದರ್, ಸುಂದರ್, ಮಾಣಿಕ್ಯ ಸುಂದರ್ ಮುಂತಾದವರಿಂದ ಪೋಷಿಸಲ್ಪಟ್ಟ ಜೈನಧೋರಣೆಯೆ ಆಗಿನ ಸಾಹಿತ್ಯದಲ್ಲಿ ಎದ್ದು ತೋರುತ್ತದೆ. 15ನೇ ಶತಮಾನದಲ್ಲಿ ಜೈನಧೋರಣೆಗೆ ಸಮಾನಾಂತರವಾಗಿ ಜೈನೇತರ ಧೋರಣೆಗಳಲ್ಲಿ ಮುಖ್ಯವಾದ ಹಿಂದೂ ಕೃಷ್ಣಪಂಥವು ಉದ್ಭವಿಸಿತು. ಅದರ ಪ್ರತಿಪಾದಕರಲ್ಲಿ ಮುಖ್ಯರೆಂದರೆ ವೈಷ್ಣವ ಪಂಥದಲ್ಲಿ ವಿಶ್ವಾಸವುಳ್ಳ ಋಷಿಕವಿ ನರಸಿಂಹ ಮೆಹ್ತಾ. ಇವನು ಅಸ್ಪೃಶ್ಯತೆಯ ನಿವಾರಣೆಯನ್ನು ಬೋಧಿಸಿದ ಮೊಟ್ಟಮೊದಲ ಸುಧಾರಣಾವಾದಿ ಕವಿ. ಅಲ್ಲದೇ ಹರಿಜನರನ್ನು ಅಸ್ಪೃಶ್ಯರಂತೆ ಕಾಣುತ್ತಿದ್ದ ಅಂದಿನ ಸಮಾಜದ ದಬ್ಬಾಳಿಕೆಯನ್ನು ಲಕ್ಷಿಸದೆ ಅಸ್ಪೃಶ್ಯರ ಸಂಗದಲ್ಲಿ ಕೆಲವು ದಿನ ವಾಸಿಸುವುದರ ಮೂಲಕ ತಾನು ನುಡಿದಂತೆ ನಡೆದೂ ತೋರಿದನು. ಆದರೆ ನರಸಿಂಹನ ಸಮಾನತೆಯ ಕಲ್ಪನೆಯೂ 'ದೇವರ ದೃಷ್ಟಿಯಲ್ಲಿ ಜಾತಿ-ಪಂಥ, ಯಾವುದೇ ಭೇದವಿಲ್ಲದೆ ಎಲ್ಲ ಮಾನವರೂ ಸಮಾನರು' ಎಂಬ ಧಾರ್ಮಿಕ ಸುಧಾರಣಾವಾದಿ ಸಿದ್ಧಾಂತದ ಮೇಲೆ ಆಧರಿಸಿತ್ತು ಎಂಬುದನ್ನು ಗಮನವಿಡಬೇಕು.

ಹೀಗಾಗಿ ಗುಜರಾತಿಯಲ್ಲಿ ವರ್ಗಪ್ರಜ್ಞೆ ಚಿಗುರೊಡೆಯುವುದಕ್ಕೆ ಯಾವುದೇ ಭೌತಿಕ ಪರಿಸ್ಥಿತಿಯು ಕಾರಣವಾಗಿರದೆ ಧಾರ್ಮಿಕ ನಂಬಿಕೆಯೆ ಕಾರಣವಾಯಿತು. ಅಂದಿನ ಸಮಾಜವೂ ವರ್ಗಸಮಾಜವಾಗಿದ್ದರೂ ಆ ಸಾಮಾಜಿಕ ಸತ್ಯಗಳ ಕಡೆ ತಪ್ಪಿಯೂ ಕಣ್ಣು ಹಾಯಿಸುವ ಪ್ರವೃತ್ತಿ ಆಗಿನ ಕವಿಗಳಿಗೆ ಇರಲಿಲ್ಲ. ಅವರು ಯಾವಾಗಲೂ

ಆಧ್ಯಾತ್ಮಿಕ ವಾಗ್ವಾದದಲ್ಲಿ ಮುಳುಗಿರುತ್ತಿದ್ದರು.

ಆಧ್ಯಾತ್ಮಿಕತೆಯ ಜಾಡನ್ನು ಬಿಟ್ಟು ಸಾಮಾಜಿಕ ವಾಸ್ತವತೆಯನ್ನು ಎತ್ತಿ ತೋರಿಸಿದ ಮೊಟ್ಟ ಮೊದಲ ಕವಿಯೆಂದರೆ ಬಹುಶಃ 17ನೇ ಶತಮಾನ ಜನಪ್ರಿಯ 'ಆಖ್ಯಾನ ಕವಿ' ಪ್ರೇಮಾನಂದ. ಅವನ "ಸುದಾಮಾಖ್ಯಾನ"ದಲ್ಲಿ ಸುದಾಮನ ಹೆಂಡತಿ ಹೀಗೆ ವಾದಿಸುತ್ತಾಳೆ:

"ನೀತಿಬೋಧೆ ಬೇಕಾದಷ್ಟಾಯಿತು! ನನಗೆ ಬೇಕಾಗಿರುವುದು
ಊಟ, ಹಸಿವಿನಿಂದ ಸಾಯುತ್ತಿರುವ ಮಕ್ಕಳಿಗೆ ಊಟ.
ಜ್ಞಾನದ ಬಗೆಗಿನ ನಿನ್ನ ಮಾತು ಹಾಳಾಗಲಿ, ಬರಿ
ಹೊಟ್ಟೆಯಿಂದ ಯಾರೂ ದೇವರನ್ನು ಪ್ರಾರ್ಥಿಸಲಾರರು"

ಪ್ರೇಮಾನಂದ ನಿಜವಾಗಿಯೂ ಜನತೆಯ ಕವಿ. ಅವನು ರಾಮಾಯಣ, ಮಹಾಭಾರತಗಳನ್ನು ಆಧರಿಸಿದ 'ಆಖ್ಯಾನ' (ಮಾಣ ಎಂಬ ಜಾನಪದ ಉಪಕರಣದೊಂದಿಗೆ ಹೇಳುವ ಪದ್ಯ ರೂಪದ ಕತೆ) ಗಳನ್ನು ಹೇಳುತ್ತ ಜನರ ಮಧ್ಯೆಯೆ ತಿರುಗಾಡುತ್ತಿದ್ದನು. ಅವನು ಪುರಾಣಗಳ ವಸ್ತುವನ್ನು ಕೇವಲ ಹಿನ್ನೆಲೆಯಾಗಿ ಉಪಯೋಗಿಸಿ, ಸಮಕಾಲೀನ ಸಮಾಜದ ವಾಸ್ತವಿಕತೆಯನ್ನು ಬಿಂಬಿಸುವ ತನ್ನದೇ ಆದ ನಿರೂಪಣೆಯನ್ನು ಕೊಡುತ್ತಿದ್ದನು. ತನ್ನ ಕಾಲದ ಸಾಮಾಜಿಕ ದೋಷಗಳನ್ನು ಅವನು ತೀಕ್ಷ್ಣವಾದ ವ್ಯಂಗದ ಮೂಲಕ ಬಹಿರಂಗಪಡಿಸುತ್ತಿದ್ದನು. ತನ್ನ "ಕುವೇರ್‌ಬಾಯಿನೋ ಮಾಮೇರು" ಎಂಬ ಗ್ರಂಥದಲ್ಲಿ ಪ್ರೇಮಾನಂದನು ಬಡತನದ ವಾಸ್ತವತೆಯನ್ನು ಚಿತ್ರಿಸಿದ್ದಾನೆ.

ನಡು ಗುಜರಾತಿ ಸಾಹಿತ್ಯದಲ್ಲಿಯ ಧಾರ್ಮಿಕ-ಸುಧಾರಣಾವಾದಿ ಧೋರಣೆ ಆಖೋನ ನಿಷ್ಠುರವಾದ ಕವನಗಳಲ್ಲಿ ವಿಪುಲವಾದ ಅಭಿವ್ಯಕ್ತಿಯನ್ನು ಪಡೆದಿವೆ. ಆಖೋ ತನ್ನ ಕವನಗಳ ಮೂಲಕ, ಮೂಢನಂಬಿಕೆ ದುರಾಚಾರಗಳಿಂದ ತುಂಬಿದ, ಅವನತಿಯ ಹಾದಿಯಲ್ಲಿರುವ ಧಾರ್ಮಿಕ ಸಮಾಜದ ಧೂರ್ತತನವನ್ನು ಬಯಲಿಗೆಳೆದಿದ್ದಾನೆ. ಭೋಜಾ ಭಗತನದೂ ಇದೇ ಧೋರಣೆಯಾಗಿತ್ತು. ನಡು ಗುಜರಾತಿ ಸಾಹಿತ್ಯದ ಕೊನೆಯ ಕವಿಯೆಂದು ಹೇಳಲಾಗುವ ದಯಾರಾಮನವರೆಗೂ ಈ ಧೋರಣೆ ಮುಂದುವರೆಯಿತು. ಆದರೆ ಈ ಧೋರಣೆಯಲ್ಲಿ ವಾಸ್ತವತಾದೃಷ್ಟಿಯ ಮೇಲೆ ಆಧರಿಸಿದ ಪ್ರಗತಿಪರ ವಸ್ತು ಇರಲಿಲ್ಲ. ಈ ಸುಧಾರಣಾವಾದಿ ಕವಿಗಳಲ್ಲಿ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಅಂಧತೆಯಲ್ಲಿ ಸಾಮಾಜಿಕ ಪ್ರಜ್ಞೆ ಮಸುಕಾಗಿಹೋಗಿತ್ತು.

ಧರ್ಮಾಂಧತೆಯ ಕೂಪದಿಂದ ಹೊರಬಂದು ಗುಜರಾತಿ ಕವಿ ಪ್ರಪಂಚದ ಬಗ್ಗೆ ಯೋಚಿಸತೊಡಗಿದ್ದು 19ನೇ ಶತಮಾನದ ಉತ್ತರಾರ್ಧದಲ್ಲಿ. ರೈತರ ದುಡಿಮೆಯ ಮೇಲೆ ಜನತೆಯ ಅಜ್ಞಾನದ ಮೇಲೆ ಬೆಳೆದು ಕೊಬ್ಬಿದ್ದ ವಸಾಹತುಶಾಹಿ ಆಳ್ವಿಕೆಗೆ "1857ರ ಬಂಡಾಯ"ದಿಂದ ಮೊದಲ ಧಕ್ಕೆ ತಗುಲಿತು. ಸಶಸ್ತ್ರ ದಂಗೆಯಿಂದ ಬ್ರಿಟಿಷರ ಜೊತೆಯಲ್ಲಾದ ಮೊದಲ ಹೋರಾಟವು ಅದೇ ತಾನೆ ಸಾಮ್ರಾಜ್ಯಶಾಹಿಯ ಸ್ವಭಾವವನ್ನು ಅರಿಯತೊಡಗಿದ್ದ ಭಾರತೀಯ ದೇಶಭಕ್ತರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿತು.

ಗುಜರಾತಿಯ ಅನೇಕರ ಸಾಹಿತ್ಯರೂಪಗಳ ಮೂಲಕರ್ತನಾದ ನರ್ಮದ್ ಅಂತಹ ವ್ಯಕ್ತಿಗಳಲ್ಲಿ ಒಬ್ಬ. ಗುಜರಾತಿ ಗದ್ಯರೂಪದ ಜನಕನಾದ ನರ್ಮದ್ "ಡಾಂಡಿಯೋ" ಎಂಬ ಪತ್ರಿಕೆಯನ್ನು ಆರಂಭಿಸಿದನು. ಇದು ಸಾಮಾಜಿಕ ಮತ್ತು ಆರ್ಥಿಕ ಶೋಷಣೆಗಳನ್ನು ಬಯಲಿಗೆಳೆದು ಜನತೆಯಲ್ಲಿ ದೇಶಭಕ್ತಿಯ ಭಾವನೆಯನ್ನು ಹುಟ್ಟಿಸುವಂತೆ ಮಾಡಲು ಸಹಾಯಕವಾಯಿತು. ವಿಶಾಲ ತಳಹದಿಯ ಸ್ವಾತಂತ್ರ್ಯ ಹೋರಾಟದ ಒಂದು ಅಂಗವೆಂಬಂತೆ ಈತನು ಬಡತನ ಮತ್ತು ಅಜ್ಞಾನ ನಿವಾರಣೆಯನ್ನು ತತ್‌ಕ್ಷಣದ ಕಾರ್ಯಕ್ರಮವನ್ನಾಗಿ ಎತ್ತಿಕೊಂಡದ್ದು. ವಿಧವಾವಿವಾಹ, ರೈತರ ಮೇಲೆ ತೆರಿಗೆ ನಿವಾರಣೆ, ಮುಂತಾದ ಸಾಮಾಜಿಕ, ಧಾರ್ಮಿಕ ಕೆಡಕುಗಳ ಸುಧಾರಣೆಯನ್ನು ಪ್ರತಿಪಾದಿಸಿದನು. ಜನತೆಯಲ್ಲಿ ರೊಚ್ಚನ್ನೆಬ್ಬಿಸುವಂತ ತೀಕ್ಷ್ಣವಾದ ಶೈಲಿಯಲ್ಲಿ ನರ್ಮದ್ ಬರೆಯುತ್ತಿದ್ದನು.

ನರ್ಮದ್ ಅಲ್ಲದೆ ಮತ್ತೆ ಕೆಲವರು ಸಾಮಾಜಿಕ ಪ್ರಜ್ಞೆ ಮತ್ತು ವರ್ಗದೃಷ್ಟಿಯನ್ನು ತೋರಿದರು. ಮನ್‌ಸುಖ್‌ರಾಮ ನರ್‌ಭೇರಾಮ ತನ್ನ "ಆರ್ಯೋದಯಾನಿ ಎತ್ಕಂಡ" (1877)ದಲ್ಲಿ ಹೀಗೆ ಬರೆದಿದ್ದಾನೆ: "ಹತ್ತಿಯನ್ನು ಬೆಳೆಯುವ ರೈತನೇ ಚಳಿಗಾಲದಲ್ಲಿ ಬಟ್ಟೆಯಿಲ್ಲದೆ ನಡುಗುತ್ತಾನೆ."

'ನೀಲಕಂಠ ಕವಿತ'ದ ಲೇಖಕ "ಬಡ ರೈತನ ಮೊರೆ" ಎಂಬ ಕವನವನ್ನು ಬರೆದಿದ್ದಾನೆ. ಹರಿಹರ್ಷನ್ ಧೃವ ಕೂಡ ಬಡವನ ಕಾರ್ಪಣ್ಯವನ್ನು ಚಿತ್ರಿಸಿದ್ದಾನೆ. ಆದರೆ ಸ್ಪಷ್ಟವಾದ ವರ್ಗವಿಭಜನೆ ಮಾಡಿದ್ದೆಂದರೆ ಪಾರ್ಸಿ ಕವಿ ಜಹಂಗೀರ್ ಎ. ತಲ್ಯಾರ್ ಖಾನ್. ಈತನು ತನ್ನ 'ಕಾವ್ಯ ಗುಟಿಕಾ' (1906)ದಲ್ಲಿ ಹೀಗೆ ಹೇಳಿದ್ದಾನೆ:

"ಹಸಿವೆಯಲ್ಲಿಯೇ ಬದುಕುವ ಸಾಯುವ
ಬಡವನ ಪಾಡು ಗೊತ್ತ ನಿಮಗೆ?
ಓಹ್! ಹೇಗೆ ಗೊತ್ತಾದೀತು ನಿಮಗೆ ಬತ್ತಲೆ ಬಡವನ ಪಾಡು?
ನೀವು ಧನಿಕರು, ಕೊಬ್ಬಿದನರು,
ಹೇಸಳತೆಯಲ್ಲಿ ಹೊರಳಾಡುವವರು.
ಅವರ ಕಣ್ಣೀರು ನಿಮ್ಮನ್ನು ಕಲುಕದು.

ಗಾಂಧೀಜಿಯ ಆಗಮನದಿಂದಾಗಿ ಭಾರತದ ವಿಮೋಚನಾ ಚಳವಳಿಯ ದಿಕ್ಕಿನಲ್ಲಿ ಮಹತ್ವದ ಬದಲಾವಣೆಯಾಯಿತು. ಬ್ರಿಟಿಷ್ ವಿರುದ್ಧ ಹೋರಾಟ ಹೆಚ್ಚು ವಿಶಾಲವೂ ತೀವ್ರವೂ ಆಯಿತು. ಗುಜರಾತಿ ಸಾಹಿತ್ಯವೂ ಕಾಲದ ತಿರುಳನ್ನು ಅಳವಡಿಸಿಕೊಂಡಿತು. ಇದರಿಂದ ದೇಶಭಕ್ತಿ, ಮಾನವೀಯತೆ ಭಾವನೆಗಳುಳ್ಳ ಅನೇಕ ಲೇಖಕರು, ಕವಿಗಳು ಹುಟ್ಟಿಕೊಂಡರು. ರಷ್ಯಾದ ಅಕ್ಟೋಬರ್ ಮಹಾ ಕ್ರಾಂತಿಯೂ ಕೂಡ ಸಾಹಿತ್ಯಕ್ಕೆ ಹೊಸ ಬಲ ಮತ್ತು ಆಯಾಮವನ್ನು ಕೊಟ್ಟಿತು. ಗಾಂಧೀಯುಗವು (1920–1947) ಗುಜರಾತಿ ಸಾಹಿತ್ಯದ ವಸ್ತುವಿನಲ್ಲಿ ಗುಣಾತ್ಮಕ ಬದಲಾವಣೆಯನ್ನೂ ಕಂಡಿತು. ಕವಿಯು ತನ್ನ ಬರವಣಿಗೆಯಲ್ಲಿ ಹೆಚ್ಚು ಸಮರ್ಥವೂ ಮತ್ತು ಸ್ವಚ್ಛನಿಲುವುಳ್ಳವನೂ ಆದನು. ಮೊಳಗುವ ಕಹಳೆ

ಯಂಥ ಹೆಚ್ಚು ಹೆಚ್ಚು ಕೃತಿಗಳು ಬೆಳಕಿಗೆ ಬಂದಂತೆ, ಸಾಹಿತ್ಯ ವಿಮರ್ಶೆಯಲ್ಲಿ ಗಟ್ಟಿ ಯಾಗುತ್ತಿದ್ದ 'ಕಲೆಗಾಗಿ ಕಲೆ' ಕಲ್ಪನೆ ಕೊಚ್ಚಿಹೋಯಿತು.

ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರೂ ಲೇಖಕರೂ ಆದ ಇಂದುಲಾಲ್ ಯಾಜ್ಞಿಕ್ ಅವರು 1922ರಲ್ಲಿ ಎಲ್ಲ ಭಾಷೆಗಳಲ್ಲಿನ ದೇಶಭಕ್ತಿ ಗೀತೆಗಳ ಸಂಕಲನವನ್ನು ಪ್ರಕಟಿಸಿದರು. 1928ರ ಬಾರ್ಡೋಲಿ ಸತ್ಯಾಗ್ರಹವು ಸ್ವಾತಂತ್ರ್ಯ ಹೋರಾಟದ ಇತಿ ಹಾಸದಲ್ಲಿ ಒಂದು ಮುಖ್ಯ ಘಟನೆ. ತಮ್ಮ ಹಕ್ಕುಗಳಿಗಾಗಿ ರೈತರು ಮಾಡಿದ ನೇರ ಹೋರಾಟ ಅದು. ಜನತೆಗೆ ಹೆಚ್ಚು ಹತ್ತಿರ ಬರಲು ಫೂಲ್‌ಚಂದ್ ಶಾಹ್, ಜೋತ್ಸ್ನಾ ಬೇನ್ ಶುಕ್ಲ ಮತ್ತು ಜುಗತ್‌ರಾಮ್ ದವೆ ಮುತ್ತಿತರರು ತಮ್ಮ ಹಾಡು ಕವನಗಳಲ್ಲಿ ಜಾನಪದ ಪದ್ಯಶೈಲಿಯನ್ನೂ, ಜಾನಪದ ರಾಗಗಳನ್ನೂ ಅಳವಡಿಸಿಕೊಂಡರು. ಕಾರ್ಮಿಕರ ರೈತರ ಶೋಷಣೆಯನ್ನು ಖಂಡಿಸಿದ ಸಾಹಿತಿಗಳ ನಾಡಿನಲ್ಲಿ ರಾಷ್ಟ್ರಶಾಯರ್ (ರಾಷ್ಟ್ರ ಕವಿ) ಪ್ರಶಸ್ತಿ ಪಡೆದಿರುವ ಜವೇರ್‌ಚಂದ್ ಮೇಘಾಣಿಯೇ ಮೊದಲಿಗರಾಗಿದ್ದರು. ಅವರು ತಮ್ಮ ಒಂದು ಕವನದಲ್ಲಿ ಕವಿಗಳಿಗೆ ಸಾಮಾಜಿಕ ಅರಿವು, ವರ್ಗಪ್ರಜ್ಞೆ ಬೆಳೆಸಿಕೊಳ್ಳಲು ಕರೆ ಇತ್ತಿದ್ದಾರೆ. 1930ರ ದಶಕದಲ್ಲಿ ಅವರ ಪ್ರವರ್ಧಮಾನರಾಗಿದ್ದ ಕಾಲವು ಪ್ರಗತಿಪರ ಗುಜರಾತಿ ಸಾಹಿತ್ಯದಲ್ಲೊಂದು ಮೈಲಿಗಲ್ಲು. ಮೇಘಾಣಿಯವರ 'ಕಾಲ್ ಜಾಗೆ' 'ಜತಿಂದಾಸ್ನು ಮೃತ್ಯು' 'ಭಗತ್‌ಸಿಂಹ್' 'ಆಗೆ ಕದಮ್' 'ವೈಶಾಖಿ ದಾವಾನಲ್' ಆವೋಲ್' 'ಹಾಲಾಡುರ್' ಮುಂತಾದ ಕವನಗಳು ಪ್ರಗತಿಪರ ಸಾಹಿತ್ಯದಲ್ಲಿ ಅತ್ಯಮೂಲ್ಯ ವಾದ ಕೃತಿಗಳು. ಸ್ನೇಹರಶ್ಮಿ, ಉಮಾಶಂಕರ್ ಜೋಶಿ, ಸುಂದರಂ, ದೇಶಲ್ಜಿ ಪರ್ಮಾರ್ ಮತ್ತು ತ್ರಿಭುವನ್ ವ್ಯಾಸ್ ಇವರೂ ಕೂಡ ಬ್ರಿಟಿಷ್ ಸಾಮ್ರಾಜ್ಯದ ಕೊನೆಗಾಣಿಕೆಗೆ ಕರೆಕೊಟ್ಟು, ಅದರಂತೆಯೇ ಬಡವರ ಶೋಷಣೆಯ ಅಂತ್ಯಕ್ಕೆ ಕರೆಕೊಟ್ಟು ಕವನಗಳನ್ನು ಹಾಡುಗಳನ್ನು ಬರೆದರು.

ಸುಂದರಂ ಅವರ 'ಕೋಯ ಭಗತ್ನಿ ವಾಣಿ' ಎಂಬ ಇಡೀ ಕವನಸಂಕಲನ ಕಾರ್ಮಿಕರ ಹಿತವನ್ನು ಎತ್ತಿ ಹಿಡಿಯಿತು. ಇವರ ತಮ್ಮ 'ವಸುಧ' ಮತ್ತು 'ಕಾವ್ಯ ಮಂಗಲ' ಎಂಬ ಸಂಕಲನಗಳಲ್ಲಿ ಮತ್ತು "ಖೋಲಕಿ" ಮತ್ತು "ನಾಗರಿಕ" "ಪಿಯಾಸಿ" "ಹಿರಾಕಣಿ ಅನೆ ಬಿಜಿ ವಾತೋ" ಎಂಬ ಕಥಾ ಸಂಕಲನಗಳಲ್ಲಿ ಶೋಷಣೆಯ ಸಾಮಾಜಿಕ ಮೂಲ ಗಳನ್ನು ಬಯಲಿಗೆಳೆದಿದ್ದಾರೆ. ಉಮಾಶಂಕರ್ ಜೋಶಿಯವರ 'ವಿಶ್ವಶಾಂತಿ' ಗಂಗೋತ್ರಿ, 'ನಿಶೀಥ್' ಮುಂತಾದ ಕವನ ಸಂಕಲನಗಳು, 'ಶಹೀದ್' ಮತ್ತು 'ಸಪ್ನ ಭಾರ' ಎಂಬ ಏಕಾಂಕಿ ಸಂಕಲನಗಳು, 'ಶ್ರಾವಣಿ ಮೇಳೋ'ದಲ್ಲಿ ಅವರ ಕತೆಗಳು ಪ್ರಗತಿಪರ ಧೋರಣೆ ಸಾಹಿತ್ಯದ ಸಂಪತ್ತಿಯನ್ನು ಎದ್ದು ತೋರುತ್ತವೆ. ಅವರು ಬಂಡವಾಳಶಾಹಿಗಳಿಗೆ challenge ಮಾಡುತ್ತಾರೆ. 'ಜಠರಾಗ್ನಿ' ಎಂಬ ಎಂಬ ತಮ್ಮ ಒಂದು ಪದ್ಯದಲ್ಲಿ ಅವರು ಬಂಡವಾಳಶಾಹಿಗಳನ್ನು ಎಚ್ಚರಿಸುತ್ತಾರೆ;

"ನಿಮ್ಮ ಗಗನಚುಂಬಿಗಳನ್ನು ಏರಿಸುತ್ತಾ ಹೋಗಿ.
ನಿಮ್ಮ ದೇವಸ್ಥಾನಗಳನ್ನು ಕಟ್ಟಿ, ಸಂಪತ್ತನ್ನು ಬೆಳೆಸುತ್ತಾ ಹೋಗಿ

ಆದರೆ ಒಮ್ಮೆ ಹಸಿವೆಯ ಬೆಂಕಿ ತಲೆ
ಎತ್ತಿತೆಂದರೆ ನಿಮ್ಮ ಆಸ್ತಿಗಳ ಅವಶೇಷವೂ ನಿಮಗೆ ಸಿಗಲಿಕ್ಕಿಲ್ಲ."

ಉಮಾಶಂಕರ್ ಜೋಶಿಯವರ 'ಶಹೀದ್' ನಾಟಕದಲ್ಲಿಯ ಒಂದು ಪಾತ್ರ ದೃಢವಾದ ಮಾತಿನಲ್ಲಿ ಕೆಳಗಿನಂತೆ ಹೇಳುತ್ತದೆ:

"ನಮ್ಮ ಬಡತನವನ್ನು, ಸಂಕಷ್ಟಗಳನ್ನು' ದಾಸ್ಯವನ್ನು
ಬೆವರಿನಿಂದ ನಿವಾರಿಸಲು ನಮಗೆ ಸಾಧ್ಯವಾಗದಿದ್ದರೆ
ರಕ್ತದಿಂದಲಾದರೂ ನಿವಾರಿಸಬೇಕಾಗುತ್ತದೆ."

ಶೋಷಿತರ ಆರ್ಥಿಕ ವಿಮೋಚನೆ ಶಾಂತಿಯುತ ಮಾರ್ಗದಿಂದ ಸಾಧ್ಯವಾಗದಿದ್ದರೆ ಸಶಸ್ತ್ರ ಹೋರಾಟವಾದರೂ ಸರಿಯೇ ಎಂದಿದ್ದಾರೆ ಜೋಶಿಯವರು.

ಕೃಷ್ಣಲಾಲ್, ಶ್ರೀಧರಾನಿ, ಕರ್ಸನ್‌ದಾಸ್, ಮಾಣಿಕ್,'ಪೂಜಾಲಾಲ್', 'ಗೋವಿಂದ ಸ್ವಾಮಿ', 'ಸ್ವಪ್ನಸ್ಥ' ಉಪವಾಸಿ ಮುಂತಾದವರೂ ಪ್ರಗತಿಪರ ಧ್ಯೇಯದ ಬಾವುಟವನ್ನು ಎತ್ತಿಹಿಡಿದರು.

ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಮತ್ತು ಅದರ ನಂತರದ ಕಾಲದಲ್ಲಿ 'ಸ್ವಪ್ನಸ್ಥ' ರಿಗೆ ತನ್ನ ಉದ್ದೇಶ ಬಹಳ ಸ್ಪಷ್ಟವಾಗಿತ್ತು. ಈ ದೃಷ್ಟಿಯಿಂದ ಅವರ 'ರಾವಣ್ ಹತ್ತೊ' ಎಂಬ ಕವನ ಸಂಕಲನ ಅತಿಮುಖ್ಯವಾದುದು. ಸಾಹಿತ್ಯದಲ್ಲಿ ಆಡುಮಾತಿನ ಪಡೆನುಡಿಯನ್ನು ಉಪಯೋಗಿಸಿದ ಖ್ಯಾತ ನಾಟಕಾರರ ನಿರ್ದೇಶಕ ಜಶ್ವಂತ್ ಠಾಕರ್, ಕವಿ ಮಗನ್‌ಲಾಲ್ ಚಂದಾಲಿಯಾ ಇವರಿಗೂ ಸ್ಪಷ್ಟವಾದ ಲೋಕದೃಷ್ಟಿ ಮತ್ತು ಸಂಕಲ್ಪ ಶೀಲ ಕೆಚ್ಚು ಇತ್ತು.

ಕಾದಂಬರಿ ಕ್ಷೇತ್ರದಲ್ಲಿ ರಮಣಲಾಲ್ ವಸಂತಲಾಲ್ ದೇಸಾಯಿ ಶೋಷಿತ ಜನಾಂಗದ ಪ್ರತಿನಿಧಿಯಾಗಿದ್ದರು. ಇವರು ತಮ್ಮ ಕಾದಂಬರಿಗಳಲ್ಲಿ ಗಾಂಧಿಯ ಮಾನವತಾವಾದವನ್ನು ಮಾರ್ಕ್ಸ್‌ವಾದದೊಂದಿಗೆ ಹದವಾಗಿ ಬೆರೆಸಿದರು. ಅವರ 'ಗ್ರಾಮಲಕ್ಷ್ಮಿ,' 'ದಿವ್ಯಚಕ್ಷು' 'ಹೃದಯ ವಿಭೂತಿ' 'ಪೂರ್ಣಿಮಾ' 'ಸ್ನೇಹಯಜ್ಞ' ಮತ್ತು ಮಹೋನ್ನತವಾದ 'ಭಯಾನಾತ್' ಮುಂತಾದ ಕಾದಂಬರಿಗಳಲ್ಲಿ ಆಗಿನ ಸಮಾಜದ ಶೋಷಣೆಯ ಕಾರಣಗಳ ಸ್ಫುಟವಾದ ಚಿತ್ರವನ್ನು ಚಿತ್ರಿಸಿದ್ದಾರೆ. ದೇಸಾಯಿಯವರಿಗೆ ಸ್ಪಷ್ಟವಾದ ವರ್ಗದೃಷ್ಟಿ ಮತ್ತು ಕಾರ್ಮಿಕ ವರ್ಗದವರ ಹಿತದ ಚಿಂತನೆ ಇದ್ದವು. ಅವರು'ಮಾರ್ಕ್ಸ್ ವಾದಿಯೆಂಬುದನ್ನು ಘೋಷಿಸಿದ್ದರು ಮತ್ತು ಮಾರ್ಕ್ಸ್‌ವಾದದ ದೃಷ್ಟಿಕೋಣದಿಂದ ಸಾಹಿತ್ಯವಿಮರ್ಶೆಯ ಬಗ್ಗೆ ಅನೇಕ ಪ್ರಬಂಧಗಳನ್ನು ಬರೆದರು. ಪನ್ನಾಲಾಲ್ ಪಟೇಲ್, ಚುನಿಲಾಲ್ ಮಡಿಯ, ಪೆಟ್ಲಿಕರ್ ಮುಂತಾದವರು ತಮ್ಮದೇ ಆದ ರೀತಿಯಲ್ಲಿ ಬಡತನದ ಸಂಕಷ್ಟಗಳನ್ನು ಚಿತ್ರಿಸಿದರು.

ಸ್ವಾತಂತ್ರ್ಯನಂತರ ಪ್ರಗತಿಪರ ಸಾಹಿತ್ಯದ ರಚನೆಕಾರರೆಲ್ಲ ತಮ್ಮ ಮಾರ್ಗವನ್ನೇ ಬದಲಾಯಿಸಿದರು. ಸ್ವಾತಂತ್ರ್ಯವನ್ನು ಪಡೆದು ಎಲ್ಲವನ್ನೂ ಸಾಧಿಸಿಬಿಟ್ಟೆವೇನೋ ಎಂಬಂತೆ ಗುಜರಾತಿ ಸಾಹಿತ್ಯ ಹೊಸ ತಿರುವು ಪಡೆಯಿತು. ಇದು ಒಂದು ರೀತಿಯಲ್ಲಿ

ಪ್ರಗತಿಪರ ಕಲಾರಚನೆಗೆ ಪೂರ್ಣ ವಿರಾಮವೇ ಆಗಿತ್ತು. ಪುರೋಗಾಮಿ ಮತ್ತು ಉದ್ದೇಶ ಪೂರ್ಣ ವಸ್ತುವಿನ ಜಾಗದಲ್ಲಿ ಮನೋವೈಜ್ಞಾನಿಕ ವಿಶ್ಲೇಷಣೆ, ಭಾವಾತಿರೇಕದ ವಸ್ತುಗಳು ಕಾಣಿಸಿದವು. ಈಗಿನ ಗುಜರಾತಿ ಸಾಹಿತ್ಯ ಹೇಳುವುದು ಮನುಷ್ಯ—ಸಾಮಾನ್ಯೀಕೃತ ಮನುಷ್ಯರ ಬಗ್ಗೆ, ಅವನ ಮನೋವಿಕಲ್ಪ, ನಿರರ್ಥಕ ಅಸ್ತಿತ್ವ ಇವುಗಳ ಬಗ್ಗೆ ಮಾತ್ರ. ಮನುಷ್ಯ ಮತ್ತು ಸಮಾಜದ ಬಗ್ಗೆ ನಾಸ್ತಿತ್ವದ ದೃಷ್ಟಿಕೋಣವನ್ನು ಬಳಸುವ ಪಾಶ್ಚಾತ್ಯ ಸಾಹಿತ್ಯವು ಗುಜರಾತಿ ಸಾಹಿತ್ಯದ ಮೇಲೆ ತನ್ನ ಕರಿಛಾಯೆಯನ್ನು ಹರಡಿದೆ. ಸ್ವರೂಪ (form) ಮತ್ತು ವಸ್ತು (content) ಇವುಗಳ ಬಗ್ಗೆ ನಡೆದ ವಾಗ್ವಾದದಲ್ಲಿ ಸ್ವರೂಪ ಗೆದ್ದಿದೆ, ಮತ್ತು ವಸ್ತುವಿನ ನಷ್ಟದಿಂದ ಇದನ್ನು ಸಾಧಿಸಲಾಗಿದೆ. ಲೇಖಕನಿಗೆ ಸುತ್ತಲಿನ ಸಮಾಜದ ಬಗ್ಗೆ ಯಾವ ಜವಾಬ್ದಾರಿಯೂ ಇಲ್ಲವಾಗಿದೆ. ಗಾಂಧಿಯುಗದಲ್ಲಿ ನ್ಯಾಯನಿಷ್ಠರಾಗಿದ್ದ ಉಮಾಶಂಕರ್ ಜೋಶಿ, ಸುಂದರಮ್, ಉಪವಾಸಿ, ಸ್ನೇಹರಶ್ಮಿ ರಂಥವರೂ ತಮ್ಮ ಮಾರ್ಗವನ್ನೇ ಬದಲಾಯಿಸಿದರು. ಉಮಾಶಂಕರ್ ಮತ್ತು ಉಪವಾಸಿ ಇವರು ರಾಜಕೀಯದ ಧುಮುಕಿ, ಮೂಲತಃ ಕಾರ್ಮಿಕವರ್ಗದ ಹಿತಕ್ಕೆ ವಿರುದ್ಧವಾಗಿರುವ ಪಕ್ಷಗಳಿಗಾಗಿ ಕೆಲಸ ಮಾಡುತ್ತಿದ್ದಾರೆ. ಸುಂದರಮ್ ಅರವಿಂದೋ ಆಶ್ರಮ ಸೇರಿಕೊಂಡು ಬರವಣಿಗೆಯಲ್ಲಿ ಪ್ರಖರತೆಯನ್ನು ಕಳೆದುಕೊಂಡಿದ್ದಾರೆ.

ಸ್ವಾತಂತ್ರ್ಯೋತ್ತರದ ಅವಧಿಯಲ್ಲಿ ಪುರೋಗಾಮಿ ಧ್ಯೇಯವನ್ನು ಎತ್ತಿಹಿಡಿದ ಲೇಖಕರಲ್ಲಿ ಡಾ|| ಜಯಂತ್ ಖತ್ರಿ ಅದ್ವಿತೀಯರು. ಹಿಂದುಳಿದ ಕಚ್ ಜಿಲ್ಲೆಗೆ ಸೇರಿದ ಸಣ್ಣ ಕತೆಗಾರರಾದ ಇವರಿಗೆ ಹರಿತವಾದ ಲೇಖನಿ, ಸ್ಪಷ್ಟವಾದ ಲೋಕದೃಷ್ಟಿ ಇದೆ.

---

ಸುಧಾಕರ ಜೋಶಿ
ಮತ್ತು
ಅನಿಲ್ ಬಾಂದೇಕರ್

# ಸಮಕಾಲೀನ ಮರಾಠೀ ಸಾಹಿತ್ಯ : ತನ್ನತನದ ಪ್ರಶ್ನೆ

ಪ್ರಜ್ಞೆಯ ಸ್ವರೂಪವನ್ನು ಅದರ ನಿರ್ಮಾಣಕ್ಕೆ ಕಾರಣವಾದ ಸಮಾಜವೇ ನಿರ್ಧರಿಸುತ್ತದೆ. ಆದರೆ ಪ್ರಜ್ಞೆಯ ಸ್ವರೂಪನಿರ್ಣಯ ವಿಧಾನದ ಬಗ್ಗೆ ಅನೇಕರಿಗೆ ತಿಳುವಳಿಕೆ ಇಲ್ಲದಿರುವುದರಿಂದ ಅಂಥ ಪ್ರಜ್ಞೆಯು ಸ್ವತಂತ್ರವಾಗಿದ್ದು, ಅವರವರ ಅನುಭವ ಮತ್ತು ಇತಿಹಾಸಗಳಿಂದ ನಿರ್ಣಯಿಸಲ್ಪಡುತ್ತದೆ ಎಂದು ಭಾವಿಸುತ್ತಾರೆ*

ಕಲೆ ಮತ್ತು ಸಾಹಿತ್ಯ ಎಲ್ಲವೂ ಮಾನವ ಪ್ರಜ್ಞೆಯ ಉತ್ಪನ್ನಗಳು. ಒಬ್ಬ ಕಲಾವಿದ ಅಥವಾ ಒಬ್ಬ ಲೇಖಕನಸೃಷ್ಟಿಗೆ ಸಾಮಾಜಿಕ ಶಕ್ತಿಗಳು ಮತ್ತು ಅವನಿಗಿರುವ ಪರಿಸರ ಕಾರಣವೆನ್ನುವ ಹಾಗೆಯೆ ಪ್ರಜ್ಞೆಯೂ ಇಂಥ ಪ್ರತಿಕ್ರಿಯೆಯ ಒಂದು ವಿಶೇಷ ಉತ್ಪನ್ನ. ಮೂಲ ಪ್ರತಿಮಾ ರೂಪಗಳು ಲೇಖಕನ ಸುಪ್ತಮನಸ್ಸಿನಿಂದ ಅವನ ಪ್ರಜ್ಞೆಯ ಹೊರ ಪದರಕ್ಕೆ ಹರಿದು ಬರುತ್ತದೆ; ಮತ್ತು ಇಂಥ ಪ್ರತಿಮಾರೂಪವು ಅಸ್ಪಷ್ಟವಾದ ಮತ್ತು ಅ-ಸಾಮಾಜಿಕವಾದ ಸಾಮಗ್ರಿಯನ್ನು ನಿರ್ಮಿಸುತ್ತದೆ ಎನ್ನುವ ಸಿದ್ಧಾಂತ ವರ್ಗಭ್ರಮೆ ಯಲ್ಲದೆ ಬೇರೇನೂ ಅಲ್ಲ. ಇದನ್ನೇ ಕೆಲವು ಲೇಖಕರು ತಮ್ಮ ವೈಯಕ್ತಿಕತೆ ಎಂದು ಕರೆದುಕೊಳ್ಳುತ್ತಾರೆ. ಈ ವರ್ಗಭ್ರಮೆ ಲೇಖಕನೊಂದಿಗೆ ಸಹಕರಿಸುವುದರಿಂದ ಅವನು ಸಾಮಾಜಿಕ ಬದ್ಧತೆಯಿಂದ ತಪ್ಪಿಸಿಕೊಳ್ಳಲು ಸಾಕಷ್ಟು ಅವಕಾಶಗಳನ್ನು ಕಲ್ಪಿಸಿ ಕೊಡುತ್ತದೆ. ಮಹಾರಾಷ್ಟ್ರ ಸಮಾಜ, ಸಮಕಾಲೀನ ಮರಾಠೀ ಸಾಹಿತ್ಯದ ವಿವಿಧ ಅಂಶಗಳಿಗೆ ಎಷ್ಟರಮಟ್ಟಿಗೆ ಜವಾಬ್ದಾರಿಯಾಗಿದೆ ಎಂಬುದನ್ನು ಗಮನಿಸಬೇಕಾಗುತ್ತದೆ.

ಮಹಾರಾಷ್ಟ್ರದ ಸಮಾಜ ಬಹುಮಟ್ಟಿಗೆ ಊಳಿಗಮಾನ್ಯ ಪದ್ಧತಿಯ ಸ್ವರೂಪದ್ದು. ಭೂಮಾಲೀಕರ ಹಿತಸಾಧನೆಯಾಗುವ ರೀತಿಯಲ್ಲೇ ಉತ್ಪಾದನಾ ಸಂಬಂಧಗಳನ್ನು ಮತ್ತು ಉತ್ಪಾದನಾ ಶಕ್ತಿಗಳನ್ನು ಇಲ್ಲಿ ಉಳಿಸಿಕೊಂಡು ಬರಲಾಗುತ್ತಿದೆ. ಜಾತಿ ಪದ್ಧತಿಯ ಕಟ್ಟುನಿಟ್ಟಾದ ಅನುಸರಣೆಯಿಂದಾಗಿ ಹಿಂದೆ ಯಾವ ವರ್ಗ ಉತ್ಪಾದನಾ ವಿಧಾನಗಳನ್ನು ತನ್ನ ಹತೋಟಿಯಲ್ಲಿ ಹೊಂದಿತ್ತೋ ಅದೇ ವರ್ಗ ಈಗಲೂ ಆ ಹತೋಟಿ ಯನ್ನು ಉಳಿಸಿಕೊಂಡು ಬಂದಿದೆ. ಅಷ್ಟೇ ಅಲ್ಲದೆ ಏನೂ ಇಲ್ಲದವರ ವರ್ಗವನ್ನು ಇನ್ನೂ ನಿರ್ಗತಿಕ ಮಟ್ಟಕ್ಕಿಳಿಸುವ ಪ್ರವೃತ್ತಿಯೂ ಕಾಣುತ್ತದೆ.

ಸಾಂಸ್ಕೃತಿಕ ಅಭಿರುಚಿಯ ದೃಷ್ಟಿಯಿಂದ ಮರಾಠೀ ಸಮುದಾಯವನ್ನು ಗ್ರಾಮೀಣ ಮತ್ತು ನಗರವಾಸಿ ಎಂದು ಎರಡು ವಿಭಾಗಗಳಾಗಿ ಮಾಡಬಹುದು. ಕಲೆ ಸಾಹಿತ್ಯವನ್ನು

---

[1] ಕ್ರಿಸ್ಟೊಫರ್ ಕಾಡ್‌ವೆಲ್ : ಇಲ್ಯೂಷನ್ ಅಂಡ್ ರಿಯಾಲಿಟಿ, ಪುಟ 288.

ಹೆಚ್ಚಾಗಿ ನಿರ್ಮಿಸುವವರು ಮತ್ತು ಬಳಸುವವರು ನಗರವಾಸಿ ವರ್ಗದವರು. ಸರ್ಕಾರಿ ಕಚೇರಿಗಳು, ಖಾಸಗೀ ಕಂಪೆನಿಗಳು ಮತ್ತು ಉದ್ಯಮಗಳು ಇರುವ ದೊಡ್ಡ ನಗರ ಮತ್ತು ಪಟ್ಟಣಗಳಲ್ಲಿ ಈ ವಿಭಾಗದ ಜನರು ಹೆಚ್ಚಾಗಿ ವಾಸಿಸುತ್ತಾರೆ. ಸರ್ಕಾರಿ ಕಚೇರಿಗಳ ಮತ್ತು ಖಾಸಗೀ ಉದ್ಯಮಗಳ ನೌಕರ ವರ್ಗದವರು ಹಾಗೂ ಇತರ ಗುಮಾಸ್ತ ವರ್ಗದವರು, ಪ್ರಾಧ್ಯಾಪಕರುಗಳು, ವೈದ್ಯರುಗಳು, ಇಂಜಿನಿಯರುಗಳು ಮತ್ತು ನಾಜೂಕತೆಯನ್ನು ಬೆಳಸಿಕೊಂಡ ಸಣ್ಣ ವಾಣಿಜ್ಯೋದ್ಯಮಿಗಳು ಮಹಾರಾಷ್ಟ್ರ ಸಮಾಜದ ಮಧ್ಯಮ ವರ್ಗದವರಾಗಿದ್ದಾರೆ. ಇವರೇ ಹೆಚ್ಚು ಮಟ್ಟಿಗೆ ಮರಾಠೀ ಸಾಹಿತ್ಯದ ಓದುಗ ಹಾಗೂ ಲೇಖಕ ಬಳಗದವರು. ಇದರ ಜೊತೆಗೆ ಶ್ರಮಿಕ ವರ್ಗದ ಜನರು ಅಲ್ಲಿ ಇಲ್ಲಿ ಸ್ವಲ್ಪಮಟ್ಟಿಗೆ ಓದುಗಾರಿಕೆಯನ್ನು, ಬರವಣಿಗೆಯನ್ನೂ ಬೆಳಸಿಕೊಂಡವರಿದ್ದಾರೆ. ನಗರ ಮತ್ತು ಪಟ್ಟಣಗಳಲ್ಲಿ ವಾಸಿಸುವ ದುಡಿಯುವ ವರ್ಗವು ಓದು ಮತ್ತು ಬರಹಗಳಲ್ಲಿ ಬೂರ್ಜ್ವಾ ಆಶೋತ್ತರಗಳೊಡನೆ ಸಾಮೀಪ್ಯ ಪಡೆಯುವುದರಿಂದ ಅದೂ ಬೂರ್ಜ್ವಾಕರಣ ಕ್ಕೊಳಗಾಗುತ್ತದೆ. ಹೀಗೆ "ಬೂರ್ಜ್ವಾ ಆಗುವ" ಪ್ರಕ್ರಿಯೆ ಸಾಕಷ್ಟು ಸೂಕ್ಷ್ಮವಾಗಿ ನಡೆಯುವಂಥದು — ಸದ್ಯದ ಬೂರ್ಜ್ವಾಗಳ ಸರಳೀಕರಿಸಿದ ಜೀವನ ವಿಧಾನದ ಬಗೆಗಿನ ಭ್ರಮೆ ಮತ್ತು ಮಾಲೀಕ ವರ್ಗ ನೀಡುವ ಸಂಬಳದ ಹೆಚ್ಚಳ ಮತ್ತು ಬೋನಸ್ ಇತ್ಯಾದಿ ವರ್ಗ ಭ್ರಮೆ ಹುಟ್ಟಿಸುವ ಲಾಭಗಳಿಂದಾಗಿ ದುಡಿಮೆಗಾರ ವರ್ಗದಲ್ಲಿ ಕ್ರಾಂತೀಕಾರೀ ಧೋರಣೆಗಳಿದ್ದಲ್ಲಿ ಅವು ಕ್ರಮೇಣ ದುರ್ಬಲಗೊಳ್ಳುತ್ತವೆ.

ಮಹಾರಾಷ್ಟ್ರದ ಮಧ್ಯಮ ವರ್ಗವು ವಿಜ್ಞಾನ ಮತ್ತು ಸಮಾಜವಾದವನ್ನು ಮೇಲ್ಮೈ ಮಟ್ಟದಲ್ಲಿ ಒಪ್ಪಿಕೊಳ್ಳುತ್ತದೆ. ಅಪರಿಮಿತ ಸೌಕರ್ಯಗಳನ್ನು ತಮಗೆ ಒದಗಿಸಿಕೊಟ್ಟ ವಿಜ್ಞಾನದ ಬಗ್ಗೆ ಸ್ವಾರ್ಥಪೂರ್ಣ ನಂಬಿಕೆಯಿರುವಂತೆಯೇ, ದೇವರು, ಸಂಪ್ರದಾಯ, ಪರಂಪರೆ ಮತ್ತು ಮಾನವನ ಮುಕ್ತಚೇತನ ಮುಂತಾದ ಪ್ರಕೃತಿಯನ್ನು ಮೀರಿದ ದಿವ್ಯ ಶಕ್ತಿಯಲ್ಲಿ ನಂಬಿಕೆ ಇರುವುದರಿಂದ, ಇಂಥ ವಿಚಿತ್ರ ಮಿಶ್ರಣದ ಆಲೋಚನೆ ಗಳನ್ನು ಈ ಮಧ್ಯಮ ವರ್ಗ ಹೊಂದಿದೆ. ಇದರಿಂದಾಗಿ ಅದು ಜೀವ ಉಳಿಸಿಕೊಳ್ಳಲು ಅಗತ್ಯವಿರುವಷ್ಟು ಆರ್ಥಿಕಭದ್ರತೆಗಳಿಸಿಕೊಳ್ಳಲೂ ವಿಫಲವಾಗುತ್ತದೆ. ಮರಾಠೀ ಸಾಹಿತ್ಯದ ಬಹುಮಂದಿ ಲೇಖಕರು ಈ ಮಧ್ಯಮ ವರ್ಗದಿಂದ ಬಂದವರು ಅಥವಾ ಬೂರ್ಜ್ವಾ ಕರಣಕ್ಕೊಳಗಾದ ದುಡಿಯುವ ವರ್ಗದಿಂದ ಬಂದವರೇ ಆಗಿದ್ದಾರೆ. ಲೇಖಕ, ಓದುಗ ಹಾಗೂ ಪ್ರಕಾಶಕರ ಆರ್ಥಿಕ ವರ್ಗೀಕರಣ ಬಹುಶಃ ಅನವಶ್ಯಕ. ಕಾರಣ, ಈ ಎಲ್ಲರ ಗುಣಸ್ವಭಾವ ಮತ್ತು ಪ್ರಜ್ಞೆಯ ಸ್ವರೂಪ ಒಂದೆ ರೀತಿಯದ್ದಾಗಿರುತ್ತದೆ. ಕೆಲವೊಂದು ಅಪವಾದಗಳನ್ನು ಬಿಟ್ಟರೆ ಬಹುತೇಕ ಲೇಖಕ, ಓದುಗ ಮತ್ತು ಸಂಪಾದಕ ವರ್ಗದಲ್ಲಿನ ಜನ, ಬೂರ್ಜ್ವಾಗಳಿಗೆ ಉದಾಹರಣೆಯಾಗಿದ್ದಾರೆ. ಇವರು ಸಂತೋಷ ಹಾಗೂ ಮನೋರಂಜನೆಯೇ ಸಾಹಿತ್ಯ ಎಂದು ನಂಬಿದವರು.

ಸಾಹಿತ್ಯವು ಒಂದು ಸಾಮಾಜಿಕ ಚಟುವಟಿಕೆ. ಈ ದೃಷ್ಟಿಯಿಂದ ಬರೆಯಲು ಇರುವ ಒತ್ತಾಯದ ಅಗತ್ಯವು ಲೇಖಕನಿಗೆ ಅನ್ನಿಸಬೇಕು. ಸಮಾಜದ ಸಂದರ್ಭದಲ್ಲಿ ಸಮಾಜಕ್ಕೆ

ಅಸ್ಥಾಯಿಸಿ ಹೇಳುವುದಾದರೆ ಇಂಥ ಅಗತ್ಯದ ಎಚ್ಚರ ಅದರ ಬಿಡುಗಡೆಗೆ ದಾರಿ ಮಾಡಿ ಕೊಡುತ್ತದೆ. ಸಾಹಿತ್ಯವು ಒಂದು ಓದುವ ವರ್ಗವನ್ನು ಗಮನಿಸಿ ಬರುವುದರಿಂದ ಓದುವ ವರ್ಗದಲ್ಲೂ ಇಂಥ ಅರಿವು ಪ್ರತಿಬಿಂಬಿತವಾಗುತ್ತಿರಬೇಕು. ಈ ದೃಷ್ಟಿಕೋನದಿಂದ ಮರಾಠೀ ಓದುವ ಬಳಗವನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. (1) ಕಿರು ಬೂರ್ಜ್ವಾ ಪ್ರಜ್ಞೆಯ ಓದುವ ವರ್ಗ (2) ಬೂರ್ಜ್ವಾ ಪ್ರಜ್ಞೆಯ ಓದುವ ವರ್ಗ (3) ಪ್ರಗತಿಪರ ಓದುಗ ವರ್ಗ. ಕಿರು ಬೂರ್ಜ್ವಾ ವರ್ಗಕ್ಕೂ ಬೂರ್ಜ್ವಾ ವರ್ಗಕ್ಕೂ ಸ್ಪಷ್ಟ ಗಡಿರೇಖೆಗಳಿಲ್ಲ. ಅವು ಆಗಿಂದಾಗ್ಗೆ ಸ್ಥಳ ಬದಲಿಸುತ್ತಿರುತ್ತವೆ. ಮರಾಠೀ ಓದುಗ ಬಳಗ ದಲ್ಲಿ ಧಾರ್ಮಿಕ ಹಾಗೂ ಲಘು ಸಾಹಿತ್ಯದ ಬಗ್ಗೆ ಆಸಕ್ತಿ ಬೆಳೆಯುತ್ತಿರುವುದರ ಅರ್ಥ ಈ ಕಿರುಬೂರ್ಜ್ವಾ ಪ್ರಭಾವವೇ. ಇದಕ್ಕೆ ಅದೇ ವರ್ಗವನ್ನು ಪ್ರತಿನಿಧಿಸುವ ಪ್ರಕಾಶಕರೂ ಕಾರಣ. ಈ ಪ್ರಕಾಶಕರ ಸತತ ಪ್ರಯತ್ನದಿಂದಾಗಿ ಇಂಥ ಸಾಹಿತ್ಯ ವಿಪುಲವಾಗಿ ಬೆಳೆಯು ತ್ತಿದೆ. (ಉದಾಹರಣೆಗೆ: ರಾಜಾಸ್, ಮೇನಕ, ಶ್ರೀ, ಸ್ಪೈನ್‌ಜಾನ್, ರಮ್ಯಕಥಾ, ಪ್ರಸಾದ್ ಮುಂತಾದ ಪ್ರಕಟಣೆಗಳು) ಈ ಪ್ರಕಾಶಕರು ಬರಹಗಾರರೊಡನೆ ಸೇರಿ ತೀರ ಹಗುರ ಹಾಗೂ ಕೀಳು ಅಭಿರುಚಿಯ ಪುಸ್ತಕ ಮತ್ತು ಪತ್ರಿಕೆಗಳನ್ನು ಮರಾಠೀ ಸಾಹಿತ್ಯದಲ್ಲಿ ತುಂಬಲು ಒಂದು ಪಿತೂರಿಯನ್ನು ಮಾಡುವಂತೆಯೇ ಮಾಡುತ್ತಿದ್ದಾರೆ ಎನ್ನಬಹುದು. ಇದರ ಬಗ್ಗೆ ವಿವರಗಳನ್ನು ಮುಂದಿನ ಪ್ಯಾರಾಗಳಲ್ಲಿ ಚರ್ಚಿಸಲಾಗುವುದು.

ಕೆಲವರು ಧಾರ್ಮಿಕ ಸಾಹಿತ್ಯ ಓದುವುದರಲ್ಲಿ ಅಪಾರ ಆಸಕ್ತಿ ತಳೆಯುತ್ತಾರೆ. ಇವರು ಬಹಳಮಟ್ಟಿಗೆ ನಿವೃತ್ತರಾದವರು, 'ಸಾಂಸ್ಕೃತಿಕ ಮಾರಾಟಗಾರರು' ಎಂದು ಹೆಸರಿಸ ಬಹುದಾದ ಪುನರುಜ್ಜೀವನ ವಾದಿಗಳು. ಧಾರ್ಮಿಕ ವಿಚಾರಗಳನ್ನು ಪ್ರಕಟಿಸುವ ಪತ್ರಿಕೆ ಗಳು (ಪ್ರಸಾದ್, ಜೀವನ್, ವಿಕಾಸ್, ಪ್ರಧನ್ಯಲೋಕ್, ಈಶಾವಾಸ್ಯ), ಪುನರ್ಮುದ್ರಣ ಪಡೆಯುವ ಪುರಾಣ ಗ್ರಂಥಗಳು, ಸಾಧುಸಂತರ ಮತ್ತು ಪವಾಡಪುರುಷರ ಜೀವನ ಚರಿತ್ರೆಗಳು, ಮತ್ತು ಪುರಾತನ ಗ್ರಂಥಗಳ ಮೇಲಿನ ಭಾಷ್ಯಗಳು ಈ ವರ್ಗಕ್ಕಾಗಿ ಸೃಷ್ಟಿ ಯಾಗುತ್ತಿರುವ ಸಾಹಿತ್ಯ ಎನ್ನಬಹುದು. ಇಂಥ ಸಾಹಿತ್ಯವನ್ನು ಸರ್ಕಾರಿ ಸಹಾಯ ದಿಂದ ಕಡಿಮೆ ಬೆಲೆಗೆ ಮಾರದಿದ್ದರೆ, ಜನರು ಕೊಂಡುಕೊಳ್ಳದಿರುವುದರಿಂದ ಅದರ ಓದುಗ ಬಳಗ ತುಂಬ ಮಿತಿಯಾದದ್ದು; ಒಂದು ರೀತಿಯಲ್ಲಿ ಅದೃಷ್ಟವೇ ಸರಿ.

ಸಾರ್ವಕಾಲಿಕವಾದ ಅಥವಾ ತಾತ್ಕಾಲಿಕವಾಗಿ ಉಜ್ವಲಗೊಳ್ಳುವ ಸಾಮಾಜಿಕ ರಾಜಕೀಯ ಸಂಗತಿಗಳನ್ನು ಕುರಿತ ಬರವಣಿಗೆಗಳು ಮರಾಠೀ ಸಾಹಿತ್ಯದಲ್ಲಿ ಇತ್ತೀಚೆಗೆ ಗಮನಾರ್ಹ ಸಂಖ್ಯೆಯಲ್ಲಿ ಬರುತ್ತಿವೆ. (ಉದಾ : ಛಾಯಾದಾತಾರ್ ಅವರು ಬರೆದ ಸ್ತ್ರೀಮುಕ್ತಿ, ಪ್ರಹ್ಲ ವಿದ್ಯಾಮಂದಿರ್‌ರವರ 'ಬಾಂಬೆ : ಒಂದು ಅಮಾನಗರದ ಸಮಸ್ಯೆ', ವಸಂತ್ ಉಪಾಧ್ಯೆ ಅವರ "ಉಸಾ ಕಾಡೂನ್ ಪನ್ಯಾಕಡೆ")

ಇಂಥ ಬರವಣಿಗೆಗಳು ಓದುಗ ಬಳಗವನ್ನು ಸಮಸ್ಯೆಗಳತ್ತ ಎಚ್ಚರಿಸುವುದರಲ್ಲಿ, ಸಾಧ್ಯ ವಾದರೆ ಅವನ್ನು ಕ್ರಿಯಾಶೀಲರನ್ನಾಗಿ ಮಾಡುವುದರ ಉದ್ದೇಶದಿಂದ ಬರುತ್ತಿವೆ. ಇಂತಹ ಬರಹಗಾರರು ಸಾಮಾಜಿಕ ಕ್ಷೇತ್ರಗಳಲ್ಲಿ ಕೆಲಸಮಾಡುತ್ತಿರುವ ಬುದ್ಧಿಜೀವಿಗಳೇ

ಆಗಿರುತ್ತಾರೆ. ಇಂಥ ಸಾಹಿತ್ಯವನ್ನು ಅದರ ವಸ್ತು ಮತ್ತು ದೃಷ್ಟಿಕೋನಗಳನ್ನವಲಂಬಿಸಿ ನಾಲ್ಕು ಭಿನ್ನ ಧೋರಣೆಯ ಗುಂಪುಗಳಾಗಿ ವಿಂಗಡಿಸಬಹದು. ಒಂದು, ಯಥಾಸ್ಥಿತಿ ವಾದಿಗಳು–ಇವರಲ್ಲಿ ಭಾಷಾ ಮತ್ತು ಪ್ರಾಂತೀಯ ವಾದಿಗಳು ಹಾಗೂ ಗತ ವೈಭವ ವರ್ಣನೆಕಾರರು ಸೇರುತ್ತಾರೆ. ಎರಡು, ಎಡ ಬಲವಿಲ್ಲದ ಮಧ್ಯದವರು ಹಾಗೂ ವೈಯುಕ್ತಿಕವಾದಿಗಳು. ಮೂರು, ದಲಿತ ಸಾಹಿತಿಗಳು. ನಾಲ್ಕು, ಪ್ರಗಪರ ಸಾಹಿತಿಗಳು, ಈಗಿನ "ವಸ್ತುಸ್ಥಿತಿ ಎಲ್ಲ ಕಾಲಕ್ಕೂ ಹೀಗೆ ಉಳಿದುಕೊಂಡು ಬರಲು ತಕ್ಕದ್ದಾಗಿದೆ" ಎಂಬ ಧೋರಣೆಯನ್ನು ಪ್ರತಿಪಾದಿಸಲು ಲೇಖಕರು ಕೆಲವು ಪತ್ರಿಕೆಗಳನ್ನು ಮತ್ತು ನಿಯತ ಕಾಲಿಕೆಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಇವರಿಗೆ ಸಂಪಾದಕ ಮತ್ತು ಲೇಖಕ ಕೆಲಸವೆರಡೂ ಒಂದೆ. (ಉದಾ : ಜಿ ವಿ. ಬೆಹಾರೆ ಅವರ "ಸೋಬತ್", ವಿಕ್ರಂ ಸಾವರ್‌ಕರ್ "ಪ್ರಾಜ್ವಂಲತ್', ಪೊಟ್ನಿಸ್ ಅವರ "ಗಾವ್‌ಕರಿ", ಬಾಳ್‌ಠಾಕರೆ ಅವರ "ಮಾರ್ಮಿಕ್", ದಿಲೀಪ್‌ದೇವ್‌ದಾರ್ ಅವರ "ಮಾಸಸ್" ಇತ್ಯಾದಿ) ಕೊನೆಯಲ್ಲಿ ಹೆಸರಿಸಿದ ಪತ್ರಿಕೆ ಒಂದು ಪಕ್ಕ ಬಿಸಿಲ್ಗುದರೆಯೇ ಸರಿ. ಈ ಎಲ್ಲಾ ಪತ್ರಿಕೆಗಳೂ ಬೂರ್ಜ್ವಾ ನಡವಳಿಕೆಗೆ ಹೊಂದಿಕೊಂಡಿರುವ ಮಧ್ಯಮ ವರ್ಗದ ಜನರ ಪ್ರಕಟಣೆಗಳು. ಬಾಳ್‌ಠಾಕರೆಯಂಥ ಭಾಷಾ ಹಾಗೂ ಪ್ರಾಂತೀಯವಾದಿಗಳು ಮತ್ತು ಆ ಬಣ್ಣಕ್ಕೆ ಸೇರಿದ ಹಿಂಬಾಲಕರು ಮುಂಬೈ ಮತ್ತು ಪುಣೆಗಳಂಥ ನಗರಗಳಲ್ಲಿ ಭಾಷಾ ವ್ಯಾಮೋಹದ ವಿಷಪ್ರವಾಹವನ್ನು ಹರಿಸುವುದರಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ. (ಬಾಳ್‌ಠಾಕರೆ ಅವರು ಎಷ್ಟೋ ಬಾರಿ ತಮ್ಮನ್ನು "ಸೇನಾಪತಿ" ಎಂದು ಕರೆದುಕೊಳ್ಳುತ್ತಾರೆ). ಈ ಗುಂಪಿನ ಜನಕ್ಕೆ ಮಧ್ಯಯುಗದ ಮಹಾರಾಜ ಶಿವಾಜಿಯೇ ಆರಾಧ್ಯ ದೇವತೆ. ಪುರಂದರೆ, ದಾಂಡೇಕರ್ ಮತ್ತು ಕೆಲವರು ಸಾಹಿರ್‌ಗಳು ಶಿವಾಜಿಯ ಬಗ್ಗೆ ಕತೆ, ಕವನ, ಲಾವಣಿ ಹಾಗೂ ದಂತಕಥೆಗಳನ್ನು ಕಟ್ಟಿ ಹರಡುತ್ತಿದ್ದಾರೆ. ಈ ಜನ ಶಿವಾಜಿಯನ್ನು "ಗೋ ಬ್ರಾಹ್ಮಣ ಪ್ರತಿಪಾಲಕ ಎಂದು ವರ್ಣಿಸಿ ಭಜನೆ ಮಾಡುತ್ತಾರೆಯೇ ವಿನಾ ಶಿವಾಜಿಯು ಉತ್ತರ ಭಾರತದ ಅರಸನೊಬ್ಬನ ದಬ್ಬಾಳಿಕೆಯನ್ನು ತಡೆಯಲು ತನ್ನ ಮುಂಖಡತ್ವದಲ್ಲಿ "ಬಹುಜನ ಸಮಾಜ" ಸ್ಥಾಪಿಸಿದ ವ್ಯಕ್ತಿ ಎಂಬುದನ್ನು ಮರೆತಿರುವುದು ದುರದೃಷ್ಟದ ಸಂಗತಿ. ದತ್ತ ಪ್ರಸನ್ನ ಕಾಟದಾರೆ, ಪಿ.ಜಿ. ಕೃಷ್ಣಸಾಗರ, ಪಿ.ಬಿ. ಭಾವೆ, ದಾದಾಮಿಯಾ, ನಚಿಕೇತ, ನಾರದ, ನೀರದ ಮುಂತಾದ ಕೆಲವು ಬರಹಗಾರರು ಹಿಂದೂ ಪ್ರಜ್ಞೆಯನ್ನು ಬೆಳೆಸುವುದಕ್ಕೆಂದೇ ತಮ್ಮ ಸಮಯವನ್ನು ಮೀಸಲಾಗಿಟ್ಟಿರುವ ಲೇಖಕರು ಮತ್ತು ಸಂಪಾದಕರು. ಪ್ರಗತಿಪರ ಆಲೋಚನೆಯ ವಿರೋಧವೇ ಈ ಲೇಖಕರ ಬರಹಗಳ ಮುಖ್ಯ ವಿಷಯವಾಗಿರುತ್ತದೆ. ತಮ್ಮದೇ ಆದ ಆರ್ಥಿಕ ಮೂಲಗಳನ್ನು ಹೊಂದಿರುವ ಲೇಖಕರು ಮತ್ತು ಸಂಪಾದಕರು (ಉದಾ: ಕಿರ್ಲೋಸ್ಕರ್) ಬಂಡವಾಳಶಾಹಿಯ ವಿಶೇಷ ಏಜೆಂಟರಂತೆ ಕೆಲಸ ಮಾಡುತ್ತಿದ್ದಾರೆ. ಇವರಿಗೆ ಸಾಹಿತ್ಯ ಸಾಮಾಜಿಕ, ರಾಜಕೀಯ, ಆರ್ಥಿಕ ರಂಗಗಳಲ್ಲಿ ಎಡ ಬಲಗಳಿಲ್ಲದ ಮಧ್ಯಸ್ಥಾನವಾದ, ವೈಯಕ್ತಿಕವಾದ ಮುಂತಾದುವನ್ನು ಹರಡಲು ಗುರಿಯಿಟ್ಟುಕೊಂಡಹಾಗಿದೆ. ಎಂ. ಎಸ್. ಕಿರ್ಲೋಸ್ಕರ್

ಮತ್ತು ಅವರ ಗುಂಪಿನ ಪತ್ರಿಕೆಗಳು, ಅತಿ ಹೆಚ್ಚಿನ ಪ್ರಶಂಸೆಗೆ ಪಾತ್ರವಾಗಿರುವ ವಿನೋಬಾ ಭಾವೇಯವರ ಬರಹಗಳು, ಜಯಂತರಾವ್ ತಿಲಕ್ ಮತ್ತು ಅವರ 'ಕೇಸರಿ' ಪತ್ರಿಕೆ ಮುಂತಾದುವು ಈ ದಿಸೆಯಲ್ಲಿ ಕೆಲವು ಪ್ರಭಾವಶಾಲಿ ಶಕ್ತಿಗಳು. ಇವರು ತಮ್ಮ ಬರವಣಿಗೆಗಳಲ್ಲಿ ಎಡಪಂಥವನ್ನಾಗಲೀ ಬಲಪಂಥವನ್ನಾಗಲೀ ಅನುಸರಿಸುವುದಿಲ್ಲ. ಬುದ್ಧಿ ಮಾರ್ಪಾಟು, ಹಸಿರುಕ್ರಾಂತಿ, ಸಂದರ್ಶನಗಳು, ಮಹಿಳೆ ಮತ್ತು ಗೃಹಾಲಂಕಾರ, ಭೂಧಾನ, ಗೋವಿನ ಪಾವಿತ್ರ್ಯ, ನಗರಗಳ ಸೌಂದರ್ಯವರ್ಧನೆ, ಕಾಲೇಜು ಜೀವನ, ನಗರಗಳಲ್ಲಿ ಹಳ್ಳಿಗರ ಜನಸಂಖ್ಯಾ ಹೆಚ್ಚಳ, ಶ್ರಮದಾನ ಶಿಬಿರಗಳ ಪ್ರಾಮುಖ್ಯತೆ, ಮುಂತಾದವು ಇವರ ಪ್ರಿಯವಾದ ವಸ್ತುಗಳಾಗಿವೆ.

ಬಂಡವಾಳಶಾಹಿಯ ಆಂತರಿಕ ವೈರುಧ್ಯಗಳಿಂದ ಹುಟ್ಟಿದ ಅನೇಕ ಸಮಸ್ಯೆಗಳನ್ನು ಆಳಕ್ಕೆ ಇಳಿದು ವಿಶ್ಲೇಷಿಸದೆ ಮೇಲು ನೋಟದ ವಿವರವನ್ನಷ್ಟೇ ಕೊಡುವುದರಿಂದ ಈ ತಟಸ್ಥ ಗುಂಪಿನ ಲೇಖಕರ ಸಾಮಾಜಿಕ-ರಾಜಕೀಯ ವಿಚಾರಧಾರೆ ಆಕರ್ಷಕವಾಗಿ ಕಾಣುವ ತಪ್ಪು ಇದ್ದೇ ಇರುತ್ತದೆ. ಸಾಮಾಜಿಕ-ರಾಜಕೀಯವಾಗಿ ಪ್ರಬಲವಾಗಿರುವ ಬೂರ್ಜ್ವಾ ವಿಚಾರಧಾರೆಗೆ ಈ ಲೇಖಕರು ಬದ್ಧರಾಗಿದ್ದರೂ ಪ್ರಗತಿಪರ ಶಕ್ತಿಗಳ ಬಗ್ಗೆ ಅನುಕಂಪ ತೋರಿಸುವುದನ್ನು ಮರೆಯುವುದಿಲ್ಲ. ಇಂಥ ಇಬ್ಬಂದಿತನವನ್ನು ಈ ಲೇಖಕರು ತಮ್ಮ ಸಾಹಿತ್ಯದಲ್ಲಿ ಪ್ರಜ್ಞಾಪೂರ್ವಕವಾಗಿ ಬೆಳಸಿಕೊಂಡು ಬಂದಿದ್ದಾರೆ. ಏಕೆಂದರೆ ಇವರು ಸುಖೀ ರಾಜ್ಯದಲ್ಲಿ ಸಮಾಜವಾದಿ ಶಕ್ತಿಗಳು ಬೆಳೆಯುವುದನ್ನು ಖಂಡಿಸುವಷ್ಟು ಧೈರ್ಯವಂತ ರಾಗಿಲ್ಲದಿರುವುದೇ ಕಾರಣ. ಯಥಾಸ್ಥಿತಿವಾದಿಗಳ ಮತ್ತು ಅವರ ಅನುಯಾಯಿಗಳಾದ ಭಾಷಾ ಹಾಗೂ ಪ್ರಾಂತೀಯವಾದಿಗಳ ಹಾಗೂ ಗತವೈಭವ ವರ್ಣನೆಕಾರರ ಇರುವಿಕೆ ಎಚ್ಚೆತ್ತ ಮರಾಠೀ ಸಮಕಾಲೀನ ಪ್ರಗತಿಪರ ಸಾಹಿತ್ಯಕ್ಕೆ ಬಲವಾದ ಸವಾಲನ್ನು ಒಡ್ಡುತ್ತಿದೆ. ಹೇಗೆಂದರೆ ಇದರಿಂದ ಹೊಸ ಸಾಹಿತ್ಯ ಪ್ರತಿಭೆ ಮತ್ತು ಪ್ರತಿಭಾವಂತ ಲೇಖಕರು ತಳೆಯುವ ಸಹಜ ಪ್ರಗತಿಪರ ಧೋರಣೆಯಿಂದ ದಾರಿತಪ್ಪಿಸಿ ಹಳೆತಾಗಿ ಸವೆದು ಹೋಗಿರುವ ಮಧ್ಯಮ ವರ್ಗದ ವಸ್ತು, ಆಲೋಚನೆ, ಕಲ್ಪನೆಗಳತ್ತ ಆಕರ್ಷಿಸುತ್ತಾರೆ. ಒಟ್ಟಿನಲ್ಲಿ ಈ ಶಕ್ತಿಗಳು ಫ್ರೇಜರ್‌ನ ಮಾತಿನಲ್ಲಿ ಹೇಳುವುದಾದರೆ "ಸಾಮಾಜಿಕ ಬದಲಾವಣೆಯನ್ನು ತಡೆಯುವ ಕಿರು ಬೂರ್ಜ್ವಾ ಪ್ರಯತ್ನಗಳಾಗಿ ಬಂಡಾಯಗಾರ ಬುದ್ಧಿ ಜೀವಿ ಅಥವಾ ಶೋಧನೆ ಮಾಡಬಯಸುವ ಬುದ್ಧಿಜೀವಿಗಳಿಗಾಗಿಲ್ಲ. ಆದ್ದರಿಂದಲೇ ಇವು ದೈನಂದಿನ ವ್ಯವಹಾರಕ್ಕಾಗಿ ಇರುವಬುದ್ಧಿಜೀವಿಗಳಿಗಾಗಿ, ಒಂದು ಕೇಂದ್ರದಿಂದ ಈ ಸಣ್ಣ ಗುಂಪಾದ ಕಿರುಬೂರ್ಜ್ವಾಗಳಿಗಾಗಿ ಕೆಲಸ ಮಾಡುತ್ತಿರುತ್ತವೆ.[1]

ಹಿಂದೂ ಮತದ ಒಳಗೆ ಪರಂಪರಾನುಗತವಾಗಿ ತುಳಿತಕ್ಕೆ ಒಳಗಾಗಿದ್ದ ವರ್ಗಗಳು ಡಾ. ಬಿ. ಆರ್. ಅಂಬೇಡ್ಕರ್ ಅವರ ನಾಯಕತ್ವದಲ್ಲಿ ಆ ತುಳಿತದಿಂದ ತಪ್ಪಿಸಿಕೊಂಡು ಹೊರಬರಲು ಪ್ರಯತ್ನಿಸಿತು. 'ದಲಿತಪಜ್ಞೆ' ಎಂಬ ಹೆಸರಿನಿಂದ ಹೊರಟ ಈ ಶಕ್ತಿಯುತ

[1] ಜಿ. ಎಸ್. ಫ್ರೇಜರ್ : ದಿ ಮಾಡರ್ನ್ ರೈಟರ್ ಅಂಡ್ ಹಿಸ್‌ವರ್ಲ್ಡ್. ಪುಟ 332

ಸಾಮಾಜಿಕ ಮತ್ತು ಸಾಹಿತ್ಯಕ ಚಳುವಳಿ ಹಿಂದೂ ಸಮುದಾಯದ ಸಾಮಾಜಿಕ-ಆರ್ಥಿಕ-ರಾಜಕೀಯ ತತ್ತ್ವಗಳಿಗೆ ತಿರುಗುಬಾಣವಾಗಿ ಪರಿಣಮಿಸಿತು. ಈ ದಲಿತ ಲೇಖಕರು 1967ರವರೆಗೂ ಒಟ್ಟುಮರಾಠೀ ಲೇಖಕರ ಗುಂಪಿನಲ್ಲೇ ಇದ್ದರು. ಆದರೆ ಈ ದಲಿತ ಲೇಖಕರು ತಮ್ಮ ಬರವಣಿಗೆಗೂ ಮರಾಠೀ ಪತ್ರಿಕೆಗಳ ಸಂಪಾದಕರು ತಮ್ಮಿಂದ ಬಯಸುತ್ತಿದ್ದ ಮಧ್ಯಮವರ್ಗ ಸ್ವಭಾವದ ಬರವಣಿಗೆಗೂ ಇರುವ ಅಗಾಧ ವ್ಯತ್ಯಾಸವನ್ನು ಅರಿತುಕೊಳ್ಳುತ್ತ ಹೋದಹಾಗೆಲ್ಲ ತಮ್ಮದೇ ಆದ ಪತ್ರಿಕೆಯ ಪ್ರಕಟನೆಯನ್ನು ಆರಂಭಿಸುವುದು ಅನಿವಾರ್ಯವೆಂದುಕೊಂಡರು. ಔರಂಗಾಬಾದಿನಿಂದ ಹೊರಟ 'ಅಸ್ಮಿತಾದರ್ಶ' ಎಂಬ ಪತ್ರಿಕೆ ಈ ದಿಸೆಯಲ್ಲಿ ಪ್ರಥಮ ಪ್ರಯತ್ನವಾಯಿತು. ಡಾ|| ಎಂ.ಎನ್. ವಂಕಾಡೆ ದಯಾಪವಾರ್, ಎಂ.ಬಿ. ಚಿಟ್ನಿಸ್, ರಾಜಾಢಾಲೆ. ಕೇಶವ್ ಮ್ಶೆತ್ರಂ. ಗಂಗಾಧರ್ ಪಂಪೋಚೆ, ಎ ಕೆ. ಘೋರ್ಪಡೆ, ವಾಮನ್‌ನಿಂಬಾಲ್‌ಕರ್, ಯಶವಂತ್ ಮನೋಹರ್ ಮತ್ತು ವಾಮನ್ ಕಾರ್ದಾಕ್ ಮುಂತಾದವರು ದಲಿತ ಬರಹಗಾರರಲ್ಲಿ ಮುಖ್ಯರು. ಇವರ ಜೊತೆಗೆ ಸಾಮಾಜಿಕ ಪ್ರಜ್ಞೆಯನ್ನು ಬೆಳಸಿಕೊಂಡ ಬೇರೆ ದಲಿತೇತರ ಲೇಖಕರೂ ಸೇರಿಕೊಂಡರು. ಅವರಲ್ಲಿ ನರಹರ್ ಕರೂಂದೆಕರ್, ಆರ್. ಬಿ. ಬಾಬಾ ಆಥೋಜೋಷಿ. ವಿಜಯ ತೆಂಡೂಲ್ಕರ್ ಮುಖ್ಯರು. ಪರಿಶಿಷ್ಠ ಜನಾಂಗದ ಮೇಲೆ ನಡೆಯುತ್ತಿರುವ ಸಾಮಾಜಿಕ ಆರ್ಥಿಕ ಶೋಷಣೆ ಮತ್ತು ಜಾತಿ ಪದ್ಧತಿಯನ್ನು ಕುರಿತ ವಿದ್ವತ್ಪೂರ್ಣ ಪ್ರಬಂಧಗಳಿಂದ ಹಿಡಿದು, ಸಣ್ಣ ಕತೆಗಳು, ಕವನ, ಕಾದಂಬರಿ, ನಾಟಕ ಮುಂತಾದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿ ಈ ಲೇಖಕರು ಕೆಲಸ ಮಾಡಿದ್ದು ಅದರಲ್ಲಿ ವ್ಯವಸ್ಥೆ ವಿರುದ್ಧ ತಮ್ಮ ತೀವ್ರರೋಷವನ್ನು ಕ್ರಾಂತಿಕಾರಿ ಮನೋಭಾವವನ್ನು ಮತ್ತು ಪರಂಪರೆಯನ್ನು ಅಲ್ಲಗಳೆಯುವ ದಿಟ್ಟ ಧೋರಣೆಯನ್ನು ತೋರಿಸುತ್ತಾರೆ.

ಹಿಂದಿನಿಂದಲೂ ಸವರ್ಣೀಯರ ಕೈಯಲ್ಲಿ ಅನುಭವಿಸಿದ ಅಪಮಾನ ಮತ್ತು ತುಳಿತಗಳನ್ನು ಖಂಡಿಸಿ ಬರೆಯುತ್ತಿರುವ ಈ ದಲಿತ ಲೇಖಕರ ಬರವಣಿಗೆಗಳಲ್ಲಿ ಕಹಿ ಆದರ ಪ್ರಾಮಾಣಿಕ ಮತ್ತು ಕೊಂಚಮಟ್ಟಿಗೆ ದ್ವೇಷದ ಧ್ವನಿ ಇದೆ. (ಈ ದ್ವೇಷ ಸಮರ್ಥನೀಯವಾದದ್ದೆ) ಉದಾಹರಣೆಗೆ: ಬಾಬುರಾವ್ ಬಾಗುಲ್ ಬರೆದ 'ಜೆವಾ ಮ್ಯೆ ಜಾತ್ ಚೋರ್ಲ್ಲಿ ಹೋತಿ' (ನಾನು ಜಾತಿಯನ್ನು ಕದ್ದಾಗ) ಮತ್ತು ವಾಮನ್ ನಿಂಬಾಳ್‌ಕರ್ ಅವರ 'ಗಾವ್‌ಕುಸಾಬರೀಚೆ ಕವಿತಾ' (ಹಳ್ಳಿಯ ಅಂಗಳದ ಹೊರಗಿನ ಹಾಡುಗಳು) ಇವುಗಳನ್ನು ಹೆಸರಿಸಬಹುದು. ಇಂಥ ಬರವಣಿಗೆ ಸುಖೀರಾಜ್ಯದ ಸ್ಥಾಪನೆ ಮತ್ತು ಅನೇಕ ಕಾನೂನುಗಳಿದ್ದಾಗ್ಯೂ ಮುಂದುವರಿಯುತ್ತಿರುವುದು ಮರಾಠೀ ಸಾಹಿತ್ಯಕ್ಕೆ ಏನು, ಬಹುಶಃ ಭಾರತೀಯ ಬೇರಾವ ಭಾಷೆಗಳಲ್ಲೂ ಹಿಂದೆಂದೂ ಕಾಣದ ವಿಶೇಷ ಸಂಗತಿಯಾಗಿದೆ. ಈ ಹೊಸ ರೀತಿಯ ಸಂವೇದನೆ, ಮುಖ್ಯಮರಾಠೀ ಸಾಹಿತ್ಯದ ಅಂಗೀಕೃತ ಸಿದ್ಧ ಸಂವೇದನೆಗಿಂತ ತೀರ ಭಿನ್ನವಾಗಿದ್ದು ಮರಾಠೀ ವಿಮರ್ಶಕರಲ್ಲಿ ಮತ್ತು ಸಾಹಿತಿಗಳಲ್ಲಿ ದಲಿತ ಸಾಹಿತ್ಯವನ್ನು ಬೇರೆಯದೆ ಆದ ಒಂದು ನೆಲೆಗಟ್ಟಿನಲ್ಲಿ ನೋಡಬೇಕೆಂಬ ಪ್ರವೃತ್ತಿಗೆ ಮತ್ತು ಚರ್ಚೆಗೆ ದಾರಿಮಾಡಿಕೊಟ್ಟಿದೆ. (ಉದಾಹರಣೆಗೆ-ರಾವ್‌ಪಟವರ್ಧನ್ ಅವರು

ತಮ್ಮ ಪತ್ರಿಕೆ 'ಸತ್ಯಕಥಾ'ದಲ್ಲಿ ಮಾರ್ಚ್ 1976ರಲ್ಲಿ ಬರೆದ ಸಂಪಾದಕೀಯ ಲೇಖನ).
ಈ ವಿಷಯದ ಮೇಲೆ ಕಳೆದ ಹತ್ತು ವರ್ಷಗಳಿಂದಲೂ ಚರ್ಚೆನಡೆಯುತ್ತಿದೆ. ಈ ಚರ್ಚೆ ಮತ್ತು ಅದರ ಔಚಿತ್ಯ ಎರಡೂ ಅಪ್ರಕೃತ. ಯಾಕೆಂದರೆ ಇಂಥ ಪ್ರತ್ಯೇಕ ವ್ಯವಸ್ಥೆಯು ಬಂಡವಾಳಶಾಹಿ ವೈರುಧ್ಯಗಳನ್ನು ಎತ್ತಿ ತೋರಿಸುವಲ್ಲಿ ಸಹಾಯ ಮಾಡಿವೆ. ಎಲ್ಲಿಯವರೆಗೆ ಲೇಖಕರು ಬೂರ್ಜ್ವಾ ಪತ್ರಿಕೆಗಳಲ್ಲಿ ಬರೆಯುತ್ತಿದ್ದರೋ ಅಲ್ಲಿಯವರೆಗೂ ಅವರೂ ಬೂರ್ಜ್ವಾಗಳಾಗಿದ್ದರು. ಈ ಸಮಾಜವು ಒಂದಕ್ಕೊಂದು ಹೆಣೆದುಕೊಂಡಿರುವ ಸಮಾಜ ಮತ್ತು ಅದರ ವೈಯಕ್ತಿಕವಾದ ಮತ್ತು ಮುಕ್ತ ಮಾರುಕಟ್ಟೆ ಅಂಥ ಹೆಣೆದುಕೊಳ್ಳುವ ಪ್ರಕ್ರಿಯೆಯ ವಿಧಾನಗಳೇ ಹೌದು. ದಲಿತ ಸಾಹಿತ್ಯ ಚಳುವಳಿಗೆ ಇರಬೇಕಾದ ಪ್ರತ್ಯೇಕತೆ ಮನ್ನು ಚರ್ಚಿಸುವ ಮತ್ತು ಅದರ ಔಚಿತ್ಯವನ್ನು ಪ್ರಶ್ನಿಸುವ ಜನರು ಇಂಥ ಸಮಾಜ ದಿಂದ ಬಂದ ಪ್ರತಿನಿಧಿಗಳೇ ಆಗಿದ್ದಾರೆ. ಇವರಿಗೆ ಪ್ರಕಟಣೆಯ ಅದರ ವ್ಯವಹಾರದ ಮೇಲೆ ಇರುವ ನಿರಂತರ ಹಿಡಿತ ತಪ್ಪಿಹೋಗುವುದು ಇಷ್ಟವಿಲ್ಲ. ಹಾಗಾಗಿಯೇ ದಲಿತ ಸಾಹಿತ್ಯದ ಪ್ರತ್ಯೇಕ ಚಳುವಳಿಯನ್ನು ಅವರು ವಿರೋಧಿಸುತ್ತಾರೆ. ಎಷ್ಟೋ ಸಂಪ್ರದಾಯಬದ್ಧ ವಾಗಿದ್ದರೂ ವಿದ್ಯಾವಂತ ಸಮಾಜವೊಂದು ಇಂಥ ಧೋರಣೆಯನ್ನು ತಳೆಯುವುದು ಅದರ ವೈರುಧ್ಯವಾಗುತ್ತದೆ. ಇಂಥ ವೈರುಧ್ಯಗಳು ಇತ್ತೀಚಿಗೆ ಬೆಳಕಿಗೆ ಬಂದುದರಿಂದ ದಲಿತ ಸಾಹಿತ್ಯದ ಪ್ರತ್ಯೇಕ ಚಳುವಳಿಗೆ ಸಹಜವಾಗಿಯೇ ದಾರಿ ಮಾಡಿಕೊಟ್ಟಿತು. ಆದರೆ ದಲಿತ ಸಾಹಿತ್ಯ ಚಳುವಳಿಯ ಒಂದು ದುರ್ಬಲ ಅಂಶವೆಂದರೆ, ಅದು, ತುಳಿತಕ್ಕೊಳಗಾದ ಇತರ ವರ್ಗಗಳು ತಮ್ಮಷ್ಟೇ ಶೋಷಣೆಗೊಳಗಾಗಿದ್ದಾರೆ ಮತ್ತು ಅವರಿಗೂ ದನಿಯೆತ್ತುವ ಅವಕಾಶಬೇಕು ಎಂಬ ಅಂಶವನ್ನು ಗಮನಿಸದಿರುವುದು. [ಉದಾಹರಣೆಗೆ: ಮಾಂಗ್, ಗಾರೋಡಿ, ರಾಮೋಷಿ, ಆದಿವಾಸಿ, ಮುಂತಾದ ಜನಾಂಗಗಳಿಗೆ ಇಲ್ಲಿ ಮನ್ನಣೆ ಸಿಕ್ಕಿಲ್ಲ].

ಮರಾಠೀ ಸಮಾಜದ ಓದುಗ, ಲೇಖಕ ಹಾಗೂ ಪ್ರಕಾಶಕ ಬಳಗವು ಬೂರ್ಜ್ವಾ ಅಭಿರುಚಿಯನ್ನು ಹೊಂದಿದ್ದರೂ ಕೆಲವರು ಪ್ರಗತಿಪರ ವಿಚಾರಧಾರೆಯನ್ನು ಮರಾಠೀ ಸಾಹಿತ್ಯದಲ್ಲಿ ಉಳಿಸಿ ಬೆಳೆಸಿಕೊಳ್ಳಲು ಪ್ರಯತ್ನ ಮಾಡಿದ್ದಾರೆ. ಅಂಥವರಲ್ಲಿ ಡಿ. ಕೆ. ಬೇಡೇಕರ್, ಶರತ್ ಚಂದ್ರ ಮುಕ್ತಿಬೋದ್, ವಿಂದಾ ಕರಂಡೀಕರ್, ಯದುನಾಥ ಥಟ್ಟೆ, ಎನ್. ಜಿ. ಗೋರೆ, ಎಸ್. ಎಮ್. ಜೋಷಿ, ಬಾಲಾಜಿಹುದ್ದಾರ್, ಶಾರದ್ ಪಾಟೀಲ್, ದಿನಕರ್ ಸಕ್ರೀಕರ್, ಜಿ.ಪಿ. ದೇಶಪಾಂಡೆ, ಕುಮಾರ್ ಶಿರಾಳ್‌ಕರ್, ಸುಲಭಾಬ್ರಹ್ಮೆ,ಛಾಯಾದಾತಾರ್, ಗೋದಾವರಿ, ಪರುಳೇಕರ್, ಗೀತಾಸಾನೆ, ಎಸ್.ಕೆ. ಲಿಜೆಯೆ, ನಳನಿಸಂಡಿತ್, ವೀಣಾಸುರಾನಾ, ಸುಧೀರ್ ಬೇಡೇಕರ್ ಮುಂತಾದವರು ಇದ್ದಾರೆ. ಇವರಲ್ಲಿ ಹೆಚ್ಚು ಜನರು ಸಾಮಾಜಿಕ ವಿವಿಧ ಕಾರ್ಯಕ್ಷೇತ್ರಗಳಲ್ಲಿ ತೊಡಗಿ ರುವವರು. ಇವರ ರಾಜಕೀಯ ಬಣ್ಣವು ನಸುಗೆಂಪು, ಅಥವಾ ದಟ್ಟಕೆಂಪು, ಆಗಿದ್ದು ಅದು ಅವರು ಅನುಸರಿಸುವ ರಾಜಕೀಯ ಧೋರಣೆಗೆ ತಕ್ಕಂತೆ ಇದೆ. ವರ್ಗ ದೃಷ್ಟಿಯಿಂದ ನೋಡುವುದಾದರೆ ಇವರೆಲ್ಲರೂ ಮಧ್ಯಮ ವರ್ಗಕ್ಕೆ ಸೇರಿದವರು. ಇವರಲ್ಲಿ ಹೆಚ್ಚು ಜನರು ತಮ್ಮ ಜೀವನದ ಬಹುಪಾಲನ್ನು ಶ್ರಮಿಕ ವರ್ಗದ ಮತ್ತು ಆದಿವಾದಿಗಳ ಅನೇಕ

ಹೋರಾಟಗಳಲ್ಲಿ ಬೆರೆತು ಕೆಲಸ ಮಾಡಿರುವುದರಿಂದ ಅವರ ಬರವಣಿಗೆಗಳು ತುಂಬ ಹರಿತವಾಗಿಯೂ ಸ್ಪಷ್ಟವಾಗಿಯೂ ಇವೆ.

ಶ್ರೀಮತಿ ಗೋದಾವರಿ ಪರುಳೆಕರ್ ಅವರ 'ಜೆವಾಮಾಣಸ್ ಜಾಗೇ ಹೋತೋ' [ಮಾನವ ಎಚ್ಚೆತ್ತಾಗ] ಎನ್ನುವ ಕೃತಿಯು ಠಾಣಾ ಜಿಲ್ಲೆಯ ವಾರ್ಲಿ ಎಂಬ ಆದಿವಾಸಿಗಳು ತಮ್ಮ ಜೀವನವನ್ನು ಉತ್ತಮಪಡಿಸಿಕೊಳ್ಳಲಿಕ್ಕಾಗಿ ಭೂಮಾಲಿಕರು ಮತ್ತು ನೌಕರಶಾಹಿಗಳು ಕೊಡುತ್ತಿದ್ದ ದಬ್ಬಾಳಿಕೆಯನ್ನು ಎದುರಿಸಿ ಹೋರಾಡಿದ ಕಥೆಯಿದೆ. ಗೀತಾಸಾನೆ ಅವರ 'ಚಂಬಾಲ್‌ಚಿ ದಸ್ಯು ಭೂಮಿ' [ಚಂಬಾಲ್‌ನ ದಾಸ್ಯ ಭೂಮಿ] ಯಲ್ಲಿ ಆ ಪ್ರದೇಶದ ಜನರು ಕಾನೂನುಬಾಹಿರರಾಗಲು ಇದ್ದ ಸಾಮಾಜಿಕ ಶಕ್ತಿಗಳ ಇತಿಹಾಸವನ್ನು ತಿಳಿಸುವ ವಸ್ತು ವಿವರಣೆ ಇದೆ.

'ಸಾಧನಾ', 'ಸಮಾಜ ಪ್ರಭೋಧನ್ ಪತ್ರಿಕಾ', 'ಮಾಗೋವಾ', 'ನವಿ ಕ್ಷಿತಿಜ್', 'ಎಲ್ಗರ್' ಮುಂತಾದ ಕೆಲವು ನಿಯತಕಾಲಿಕೆಗಳು ಪ್ರಗತಿಪರ ಬರವಣಿಗೆಯನ್ನು ಪ್ರಕಟಿಸುತ್ತವೆ. ಪ್ರಗತಿಪರ ಪ್ರಜ್ಞೆಯನ್ನು ಹರಡುವ ಈ ಚಳುವಳಿಯ ದುರದೃಷ್ಟಕರ ಎರಡು ಸಂಗತಿ ಎಂದರೆ ಅದರ ಮಿತ ಆರ್ಥಿಕ ಮೂಲಗಳು ಮತ್ತು ಮಿತ ಅಥವಾ ಇಲ್ಲವೇ ಇಲ್ಲದ ಮಾರುಕಟ್ಟೆ. ಇಂಥ ಪತ್ರಿಕೆಗಳು ಯಾವ ಪುಸ್ತಕದ ಅಂಗಡಿಗಳಲ್ಲೂ ದೊರೆಯುವುದಿಲ್ಲ ಎಂಬ ಸಂಗತಿ ಮರಾಠೀ ಓದುಗರ ಸಾಮಾನ್ಯ ಹಾಗೂ ಪ್ರಜ್ಞಾರಹಿತ ಅಭಿರುಚಿಯನ್ನು ತೋರಿಸುತ್ತದೆ. ಒಂದು ಪಕ್ಷ ಇಂಥ ಸಾಹಿತ್ಯ ಚಳುವಳಿ ಇಲ್ಲಿನ ಸಾಮಾಜಿಕ ರಾಜಕೀಯ ಪ್ರಭಾವಕ್ಕೊಳಗಾದ ಸಂದರ್ಭದಲ್ಲಿಲ್ಲಾ, ಅದು ತೀವ್ರ ಸಂಪ್ರದಾಯಕ್ಕೆ ಬದ್ಧವಾಗಿ ಕೇವಲ ಮನೋರಂಜನೆಯನ್ನು ಗುರಿಯಾಗಿಟ್ಟುಕೊಂಡದ್ದಾಗಿ ಪರಿಣಮಿಸುತ್ತಿತ್ತಲ್ಲದೆ ಸಮಾಜದ ನೈತಿಕ ಹಾಗೂ ಸಾಮಾಜಿಕ ಮೌಲ್ಯಗಳ ಮೂಲಸೆಲೆಗೆ ಪೆಟ್ಟುಕೊಡುವಂಥದ್ದೇನೂ ಆಗುತ್ತಿರಲಿಲ್ಲ. ಯಾಕೆಂದರೆ ಸಮಾಜದ ನೈತಿಕತೆ ಮತ್ತು ಘನತೆಯನ್ನು (ಅವರ ಅರ್ಥದಲ್ಲಿ) ಪ್ರಶ್ನಿಸಿವಂತಿರಬಾರದು. ಪ್ರಭುತ್ವದ ಸಾಮಾಜಿಕ–ರಾಜಕೀಯ ಚಟುವಟಿಕೆಗಳು ಯಾವಾಗಲೂ ಉದ್ದೇಶರಹಿತವಾದದ್ದೆ. ಒಂದು ಪಕ್ಷ ಪ್ರಭುತ್ವದಲ್ಲಿ ಕೆಲವು ಪ್ರಗತಿಪರ ವಿಚಾರಗಳು ನುಸುಳಿಕೊಂಡು ಬಂದಿದ್ದರೂ ಅವು ಜನಗಳಿಗೆ ತಲುಪುವಂತೆ ಮಾಡಲು ಯಾವ ಪ್ರಯತ್ನವೂ ಪ್ರಭುತ್ವದಿಂದ ನಡೆಯುವುದಿಲ್ಲ. ಅಕ್ಷರ ಅಭ್ಯಾಸದಿಂದ ಜನರ ಪ್ರಜ್ಞೆಯನ್ನು ಆಧುನೀಕರಿಸುವುದರಿಂದ ಉಂಟಾದ ಅವಕಾಶವು ಒಂದು ರೀತಿಯ ಏಕತಾನದ ಓದುಗಾರಿಕೆಯನ್ನು ಬಲಗೊಳಿಸಲು ಉಪಯೋಗಿಸಿಕೊಳ್ಳಲಾಗುತ್ತಿದೆ.

ಕವನ, ನಾಟಕ, ಕಥೆ, ಕಾದಂಬರಿಗಳಂಥ ಶುದ್ಧ ಸಾಹಿತ್ಯ ಧೋರಣೆಯ ಹಿನ್ನಲೆಯಲ್ಲಿ ಬರಹಗಾರ ಮತ್ತು ಓದುಗರಲ್ಲಿ (ಎಲ್ಲಾ ಓದುಗರಲ್ಲೂ ಅಲ್ಲ) ಉಂಟಾಗುತ್ತಿರುವ ಒಂದು ಎಚ್ಚರವನ್ನು ಗಮನಿಸಲೇಬೇಕು. ಈ ಎಚ್ಚರ ಮೂರು ವಿಧಗಳಲ್ಲಿ ಬಂದಿದೆ.

1) ಇತಿಹಾಸ ಮತ್ತು ಪುರಾಣಗಳ ಪುನರ್ ವ್ಯಾಖ್ಯಾನ.

2) ಸಾಹಿತ್ಯದ ಸ್ವರೂಪ ಮತ್ತು ವಸ್ತುಗಳ ಬದಲಾವಣೆಯ ಅಗತ್ಯ.

3) ಪ್ರಗತಿಪರ ವಸ್ತು.

ಪುರಾತತ್ತ್ವಶಾಸ್ತ್ರ ಮತ್ತು ಮಾನವ ಶಾಸ್ತ್ರದ ಇತ್ತೀಚಿನ ಸಂಶೋಧನೆಗಳ ಫಲವಾಗಿ, ಇತಿಹಾಸದ ನಾಯಕ ಶಿರೋಮಣಿಗಳ ಕಥೆಯನ್ನು ಪ್ರಶ್ನಿಸುವ ಮತ್ತು ಅವರಲ್ಲಿ ಸಹಜ ಸಾಮಾನ್ಯ ಮಾನವ ಗುಣಗಳನ್ನು ಗುರುತಿಸಿ ವಿಮರ್ಶಿಸುವ, ಈ ಮೂಲಕ ಪುರಾತತ್ತ್ವ ಶಾಸ್ತ್ರ ಮತ್ತು ಇತಿಹಾಸಕ್ಕೆ ಹೊಸ ವ್ಯಾಖ್ಯಾನ ಕೊಡುವ ಪ್ರಯತ್ನ ಮರಾಠಿ ಸಾಹಿತ್ಯ ದಲ್ಲಿ ಕಂಡುಬರುತ್ತಿದೆ. ಇಂಥಹ ಪ್ರಯತ್ನ, ನಡೆಸಿದವರಲ್ಲಿ ಡಿ|| ಇರಾವತಿ ಕರ್ವೆ, ದುರ್ಗಾಭಗವತಿ, ಪಿ.ಎನ್.ಓಕ್. ಆನಂದ್‌ಸಾಧಲೆ, ಶಿವಾಜಿ ಸಾವಂತ್, ರಣಜಿತ್ ದೇಸಾಯಿ, ಎನ್.ಎಸ್. ಇನಾಂದಾರ್, ಬಾಲಶಾಸ್ತ್ರಿ ಹರದಾಸ್, ಪಿ.ಜಿ. ಕೃಷ್ಣಸಾಗರ್ ಮುಂತಾದವರಿದ್ದಾರೆ. ಇರಾವತಿಕರ್ವೇ ಅವರ 'ಯುಗಾಂತ' ದುರ್ಗಾಭಗವತಿ ಅವರ 'ವ್ಯಾಸಪರ್ವ' ಬಾಲಶಾಸ್ತ್ರಿ ಹರದಾಸ್ ಅವರ 'ಮಹಾರಥಿ ಕರ್ಣ' ಮತ್ತು ಆನಂದ್ ಸಾಧಲೆ ಅವರ 'ಜಯನವಾಚ ಇತಿಹಾಸ್' ಮುಂತಾದ ಕೃತಿಗಳು ಪುರಾತತ್ತ್ವ ಮತ್ತು ಮಾನವ ಶಾಸ್ತ್ರದ ಸಂಶೋಧನೆಗಳನ್ನು ಉಪಯೋಗಿಸಿಕೊಂಡು ಮಹಾಭಾರತವನ್ನು ಪುನರ್ ವಿಶ್ಲೇಷಿಸ ಹೊರಟಿರುವ ಕೃತಿಗಳು. ವಸಂತ ಕಾನೇಟಕರ್, ರಣಜಿತ ದೇಸಾಯಿ, ಶಿವಾಜಿ ಸಾವಂತ್ ಮತ್ತು ಮಹದೇವ ಮೋರೆಯಂಥ ಇತರ ಕೆಲವರು ಮರಾಠಿ ಹಾಗೂ ಪೇಶ್ವೆಗಳ ಇತಿಹಾಸವನ್ನು ಬಳಸಿಕೊಂಡು ಸಾಹಿತ್ಯ ರಚನೆ ಮಾಡುತ್ತಿದ್ದಾರೆ. ಅವುಗಳಲ್ಲಿ ಶಿವಾಜಿ, ಔರಂಗಜೇಬ್ ಬಾಜಿರಾಯ, ರಘೋಬದಾದ, ಸಾಂಭಾಜಿ, ಮಹದೇವ್‌ರಾವ್ ಪೇಶ್ವೆಗಳ ಪಾತ್ರಗಳು ಇತಿಹಾಸದ ನಾಯಕ ಶಿರೋಮಣಿಗಳಂತೆ ಚಿತ್ರಿತವಾಗದೆ ಸಾಮಾನ್ಯ ಮನುಷ್ಯರ ನಡವಳಿಕೆಗಳನ್ನು ಒಪ್ಪಿಕೊಂಡವರಂತೆ ಇವೆ.

ವಸಂತ್‌ಕಾನೇಟ್‌ಕರ್ ಅವರ ಚಾರಿತ್ರಿಕ ನಾಟಕಗಳು ರಣಜಿತ್ ದೇಸಾಯ್, ಇನಾಂದಾರ್‌ಮೋರೆ, ಸಾವಂತರ ಕಾದಂಬರಿಗಳು ಮರಾಠಿ ಸಾಹಿತ್ಯದಲ್ಲಿ ಚಾರಿತ್ರಿಕ ಕಾದಂಬರಿ ಮತ್ತು ನಾಟಕ ಸಂಪ್ರದಾಯದ ಪರಿಕಲ್ಪನೆಗಳನ್ನೇ ಬದಲಾಯಿಸಿಬಿಟ್ಟವೆ. ಇತಿಹಾಸದ ನಾಯಕ ಶಿರೋಮಣಿಗಳನ್ನು ಇವರು ಚಿತ್ರಿಸುವಲ್ಲಿ ಸಹಜ ಸಾಮಾನ್ಯ ಮಾನವನ ನಡವಳಿಕೆಗೆ ಒತ್ತುಕೊಟ್ಟು ಚಿತ್ರಿಸುತ್ತಾರೆ.

ಡಿ| ಇರಾವತಿ ಕರ್ವೆ, ದುರ್ಗಾಭಗವತಿ ಇವರಿಬ್ಬರನ್ನು ಬಿಟ್ಟರೆ ಮೇಲೆ ಹೇಳಿದ ಇತರ ಎಲ್ಲಾ ಲೇಖಕರು, ಮರಾಠರು ಮತ್ತು ಪೇಶ್ವೆಗಳು ಆಗ ಬಲಪಡಿಸಲು ಯತ್ನಿಸಿದ ಹಿಂದೂ ಸಂಸ್ಕೃತಿಯ ಹೆಗ್ಗಳಿಕೆಯಲ್ಲಿ ತೀವ್ರ ನಂಬಿಕೆಯನ್ನು ಇಟ್ಟುಕೊಂಡವರಾಗಿದ್ದಾರೆ. ಇಂಥ ನಂಬಿಕೆಯನ್ನು ಮಾನವೀಯ ಅಂಶಗಳೊಂದಿಗೆ ಬೆರೆಸಿ, ಕಾದಂಬರಿ ಅಥವಾ ನಾಟಕದ ರೂಪವನ್ನು ಸಿದ್ಧಪಡಿಸುವುದು, ಪ್ರತಿಗಾಮಿ ಪ್ರಜ್ಞೆಯನ್ನು ಮತ್ತಷ್ಟು ಬಲಗೊಳಿಸಲು ಮಾಡುವ ಪ್ರಯತ್ನವೆಂದೇ ನಮಗೆ ತೋರುತ್ತದೆ. ಏಕೆಂದರೆ ಗತ ಕಾಲವನ್ನು ಇಪ್ಪತ್ತನೇ ಶತಮಾನದ ಮಧ್ಯಮ ವರ್ಗದ ಪ್ರಜ್ಞೆಯನ್ನು ಬೆರೆಸಿ ಸಾಮಾನ್ಯ ಮನುಷ್ಯನ ದೃಷ್ಟಿಯಿಂದ ನೋಡುವುದು ಅಂಥ ಸಂಸ್ಕೃತಿಯ ಪುನರುಜ್ಜೀವನಕ್ಕೆ ಹಂಬಲಿಸುವ ವಿಧಾನವಾಗಿಯೇ ಇದೆ. ನಾಯಕ ಶಿರೋಮಣಿಯು, ನಾಯಕ ಶಿರೋಮಣಿಯಾಗಿ ಆಗಿದ್ದು ನಮ್ಮಂಥ

ಸಾಮಾನ್ಯ ಮನುಷ್ಯನೂ ಆಗಿದ್ದಾಗ ಅವನು ನಮಗೆ ಹೆಚ್ಚು ಹತ್ತಿರದವನಾಗುತ್ತಾನೆ.

ಪರಿಣಾಮಕಾರಿಯಾಗಿ ತನ್ನ ಆಶಯವನ್ನು ಸಾಹಿತ್ಯಕ ಮಾಧ್ಯಮಗಳಲ್ಲಿ ಅಭಿವ್ಯಕ್ತಿಸ ಬೇಕೆನ್ನುವ ಆಸೆ ಬಹುಶಃ ಎಲ್ಲಾ ಭಾಷೆಯ ಲೇಖಕರಲ್ಲಿಯೂ ಇದ್ದು, ಇದರಿಂದ ಶೈಲಿ ಮತ್ತು ಸ್ವರೂಪದ ಸಂಪೂರ್ಣ ಬದಲಾವಣೆಗೆ ಕಾರಣವಾಗಿದೆ. ಮರಾಠಿ ಸಾಹಿತ್ಯವು ಈ ಪ್ರಕ್ರಿಯೆಗೆ ಹೊರತಾಗಿಲ್ಲ.

ಮುಕ್ತ ಛಂದಸ್ಸಿನ ಬಳಕೆ, ಮಧ್ಯಯುಗದ ಮರುಬಳಕೆ (ಕೀರ್ತಿಯವರು ಬಳಸುವ ತುಕಾರಾಮನ ಅಭಾಂಗ್‌ಛಂದಸ್ಸು ಅಥವಾ ಗ್ರೇಸರ ದಿಂಡಿ ಪ್ರಜ್ಞಾ ಪ್ರವಾಹದಂತಹ ಹೊಸ ತಂತ್ರಗಳು) ಮರ್ಢೇಕರ್ ಅವರ 'ರಾತ್ರಿಚ ದಿವಸ್' ಖಾನೋಲ್ಕರ್ ಅವರ 'ರಾತ್ರಾಕಾಲಿಗಗರ್‌ಕಾಲಿ' ನೆಮೋಡೆ ಅವರ 'ಕೋಸ್ಲಾ' ಅಥವಾ ಕಮಲ ದೇಸಾಯಿ ಅವರ ಸಂಕಲನ 'ರಂಗ್' ಮತ್ತು ಅತಿ ವಾಸ್ತವಿಕ ಕಾದಂಬರಿಗಳು 'ಕಾಲಾ ಸೂರ್ಯ' 'ಹಟ್ ಫಾಲಾನಾಂಬಾಯಡ್' ಡಾಡ್ಕೆ ಅವರ 'ಅಧೋಲೋಕ' ಅಸಂಗತ ನಾಟಕಗಳು, ಖಾನೋಲ್‌ಕರ್ ಅವರ ಏಕ್ ಶೂನ್ಯಬಾಜರಾವ್ ಅಥವಾ ಎಸ್. ರೀಗೆ ಅವರ 'ಗೋಚಿ' ಯಂಥ ಆತ್ಮೀಯ ನಾಟಕಗಳು ಇಂಥ ಕೆಲವು ಕೃತಿಗಳನ್ನು ಹೆಸರಿಸಬಹುದು.

ಈ ಹೊಸ ಪ್ರಜ್ಞೆ, ಕೆಲವು ಲೇಖಕರು ಸಮಕಾಲೀನ ರೀತಿಯ ಅಭಿವ್ಯಕ್ತಿ ಭಾಷಾ ಮಾಧ್ಯಮವನ್ನು ಪ್ರಜ್ಞಾಪೂರ್ವಕವಾಗಿ ಮೈಗೂಡಿಸಿಕೊಂಡ ಅಭಿವ್ಯಕ್ತಿಯಾಗಿರಬಹುದು. ಆದರೆ ಬಹಳಷ್ಟು ಜನರಿಗೆ ಹೊಸ ರೀತಿಯ ಅಭಿವ್ಯಕ್ತಿ ಸಹಜವಾಗೇ ಬಂದಿದೆ. ತನ್ನ ಎಲ್ಲಾ ಮೊನೆಚನ್ನು ಕಳೆದುಕೊಂಡಿರುವ ಪ್ರಚಲಿತ ಶೈಲಿ, ಆಧುನಿಕ ಜೀವನದ ತುಯ್ತಗಳಿಗೆ ಸ್ಪಂದಿಸುವಲ್ಲಿ ಆ ಶೈಲಿಗೆ ಇರುವ ಅಸಾಮರ್ಥ್ಯ, ಇವುಗಳನ್ನು ಗುರಿತಿಸುವ ಲೇಖಕರು ಹೊರರೂಪ ಶೈಲಿ, ತಂತ್ರಗಳ ಶೋಧನೆಯಲ್ಲಿ ತೊಡಗಿದರು. ಇಂಥ ಅನ್ವೇಷಣೆಗೆ ತನ್ನದೇ ಆದ ವರ್ಗ ಪರಿಮಿತಿಗಳಿವೆ. ಉದಾಹರಣೆಗೆ ಅತಿ ವಾಸ್ತವಿಕತೆ, ಪ್ರೇಕ್ಷಕನಿಗೆ ವಸ್ತು ಏನೆಂಬುದು ತಿಳಿಯದಂತೆ ಮಾಡುವ ಸಾಹಿತ್ಯ ಮತ್ತು ಕಲೆಯಲ್ಲಿ ವೈಯಕ್ತಿಕ ತೆಯು, ಅದರ ಚರಮಘಟ್ಟ. ಅತಿವಾಸ್ತವಿಕತೆ ಒಂದು ವಿಶಿಷ್ಟವರ್ಗದ ನಿರ್ಮಾಣ. ಎಷ್ಟೋ ಮಿತಿಗಳಿದ್ದರೂ ಈ ಹೊಸ ಅನ್ವೇಷಣೆಗಳು,ವಸ್ತು ಮತ್ತು ಶೈಲಿಯ ನಡುವಿನ ದ್ವಂದ್ವವನ್ನು ಮಸುಕುಗೊಳಿಸುವಲ್ಲಿ ಪರ್ಯವಸನವಾಗಿವೆ. ಆರ್. ಜೆ. ಜೋಷಿಯವರ 'ಚಿತ್ರಕವಿತ'ಕವನಗಳು ಮಹೇಶ ಎಲ್ಕುಂಚ್ವಾರ್ ಅವರ 'ಗಾರ್ಬೊ' 'ವಾಸನಾಖಾಂಡ' ಖಾನೋಲ್ಕರ್ ಅವರ 'ಕಾಲಾಯತಸ್ಮೈನಮಃ' 'ಅವಧ್ಯಾ' ನಾಟಕಗಳು ಢಾಕೆ 'ಅವರ ಯೋಗಭ್ರಷ್ಟ'ಪದ್ಯಗಳು ಎ.ವಿ.ಜೋಷಿ ಕೊಲಾಖಾಹೆ ಅಂಗ ಅವರ ಕಾದಂಬರಿ, ಜಿ. ಎ. ಕುಲಕರಣಿಅವರ 'ಹಿರ್ವೆರಾವೆ' 'ಕಾಜಲ್ಮಾಯ' ಕಥೆಗಳು, ಚಿತ್ರೆ ಅವರ 'ಆರ್ಫಿಯಸ್' ಮತ್ತು ಇತರ ಕಥೆಗಳು, ಗ್ರೇಸ್ ಅವರ 'ಸಂಧ್ಯಾಕಾಲಚ್ಯ ಕವಿತ' 'ಡಾರ್ಲಿಂಗ್ ಅನಿರಾಜ ಪುತ್ರ'ಕವನಗಳು, ವಿರಿಂದಾವನ ದಂಡನವತೆ ಮತ್ತು ಅಲೇಕರ್ ಅವರುಗಳ 'ಪ್ಲಾಟ್‌ಫಾರಂ' 'ಝುಟಪೂಲ್' 'ಇಂಟರ್‌ವ್ಯೂ' ಮುಂತಾದ ಒಂದಂಕದ ನಾಟಕಗಳು, ಅರುನ್‌ಕೋಲಾಟ್ಕರ್. ಸಾಯಿ ಪರಾಂಜಪೆ, ರಾಜ್ಯಾಧ್ಯಕ್ಷ, ಪ್ರಭಾಗಾನೋರಕರ್, ಇವರೆಲ್ಲರೂ ಕೃತಿಯ

ಬಂಧ ಮತ್ತು ಸ್ವರೂಪದ ಮೇಲೆ ಪ್ರಶಂಸನೀಯ 'ಹತೋಟಿ' ಹೊಂದಿರುವ ಲೇಖಕರು. ಇವರಲ್ಲಿ ಬಹಳಷ್ಟು ಜನಕ್ಕೆ ಆಧುನಿಕ ಪ್ರಜ್ಞೆ ಅವರ ಚರ್ಮದ ಬಣ್ಣದಷ್ಟೆ ಪರಿಚಯವಿದೆ. 'ಬಹಳಷ್ಟು ಜನ' ಅಂದಾಗ ತಾಂತ್ರಿಕವಾಗಿ ಮುಂದುವರೆದಿರುವ ಸಮಾಜದ ಜನರ ಸಾಮಾಜಿಕ ಸಂಕೀರ್ಣಸ್ಥಿತಿ, ದುಃಸ್ವಪ್ನದಂಥ ಬದುಕಿನ ಸಮಸ್ಯೆಗಳು ಇದನ್ನು ಅನುಭವಿಸುವ ಅವಕಾಶವೇ ಇಲ್ಲದಂಥ ಸಮಾಜದಲ್ಲಿ ಅಂದರೆ ಇನ್ನೂ ಸರಳ ಉತ್ಪಾದನಾ ಕ್ರಮವನ್ನು ಹೊಂದಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುತ್ತಿರುವ ಆದರೆ 'ಸಂಕೀರ್ಣತೆ'ಯನ್ನು ಆರೋಪಿಸಿಕೊಂಡು ಬರೆಯುತ್ತಿರುವ ಲೇಖಕರನ್ನು ಹೊರತುಪಡಿಸುವುದೇ ನಮ್ಮ ಉದ್ದೇಶವಾಗಿದೆ. ಅಣ್ಣ ತಂಗಿಯರ ಲೈಂಗಿಕ ಸಂಬಂಧ ಅಥವಾ ಸಾಂಸಾರಿಕ ಜೀವನದಲ್ಲಿ ಉಸಿರುಕಟ್ಟಿಸುವ ಸ್ಥಿತಿ. ದ್ವಂದ್ವ ವ್ಯಕ್ತಿತ್ವ, ಕ್ರೌರ್ಯ, ಸ್ವಹಿಂಸೆ, ಹಿಂಸಾ ತೃಪ್ತಿಯ ಭಾವಗಳು, ಇಂಥ ವಸ್ತುಗಳೆಲ್ಲಾ ನಮ್ಮ ಲೇಖಕರ ಆಲೋಚನೆ ಮತ್ತು ಪ್ರಜ್ಞೆಯ ಅಂಗಗಳಾಗಲಾರವು. ಸಾಮಾಜಿಕವಾಗಿ ಈ ವಸ್ತುಗಳು ಅಸಮಂಜಸವಾದವು. ಏಕೆಂದರೆ ಲೇಖಕನ ಪ್ರಜ್ಞೆ ಯಾವ ಸಮಾಜದ ಅವಿಭಾಜ್ಯ ಅಂಗವಾಗಿರುತ್ತದೋ ಆ ಸಮಾಜದ ಚಿಂತನೆಯ ವಲಯಕ್ಕೆ ಅಂಥ ಸಮಸ್ಯೆಗಳು ಸುಳಿಯದಿದ್ದಲ್ಲಿ ಲೇಖಕ ಅಂಥ ಪ್ರಜ್ಞೆಯನ್ನು ವೈಗೂಡಿಸಿಕೊಳ್ಳಲಾರ. ಅಂದರೆ ಪೂರ್ಣ ಪ್ರಮಾಣದ ಬಂಡವಾಳಷಾಹಿ ಸಮಾಜವಾಗಿ ಬೆಳೆದಿಲ್ಲದ ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳ ಲೇಖಕರು ಅಂಥ ಸಮಸ್ಯೆಗಳನ್ನು ಆರೋಪಿಸಿಕೊಂಡು ಬರೆಯುವುದು ಅಸಹಜವಾಗುತ್ತದೆ. ಹಾಗಾದರೆ ಇಂಥ ಲೇಖಕರನ್ನು ಇಂದಿನ ಅತ್ಯಂತ ಪ್ರಮುಖ ಲೇಖಕರೆಂದು ಪರಿಗಣಿಸುವುದು ಏಕೆ?. ಲೇಖಕನ ಪ್ರಾಮಾಣಿಕತೆಯನ್ನು ಅನುಮಾನಿಸದೇ ಇದ್ದರೂ ಅವನ ಪ್ರಜ್ಞೆ ಇಂಥ ಸಮಸ್ಯೆಗಳನ್ನು ಒಳಗೊಳ್ಳುವ ಸಾಮರ್ಥ್ಯ ಪಡೆದಿದ್ದರೂ ಅಂಥ ಪ್ರಜ್ಞೆ ಅವನು ತನ್ನ ಸಮಾಜದ ಬದುಕಿನೊಡನೆ ಇಟ್ಟುಕೊಂಡ ನಿಕಟ ಸಂಬಂಧದಿಂದ ಬೆಳೆದಿದ್ದಾಗಿರದೆ ಅವನು ಪುಸ್ತಕ ಸಿನೆಮಾ, ಧ್ವನಿಮುದ್ರಿಕೆಗಳಂಥ ಸಂಪರ್ಕ ಸಾಧನಗಳಿಂದ ಗಳಿಸಿ ಬೆಳೆಸಿಕೊಂಡ ಜ್ಞಾನದಿಂದ ಬರುವಂಥಾಗಿರುತ್ತದೆ. ಔಷದಿಗಳು ಹೇಗೆ ಮನುಷ್ಯನ ದೇಹ ಪ್ರಕೃತಿಯ ಮೇಲೆ ಪರಿಣಾಮಕಾರಿ ಪ್ರಭಾವ ಬೀರಬಲ್ಲುದೋ ಹಾಗೆ ಈ ಸಂಪರ್ಕ ಸಾಧನೆಗಳು ತಾವು ತಯಾರಾದ ಸಮಾಜದ ಸಮಸ್ಯೆಗಳನ್ನು ತಾವು ಸಂಬಂಧ ಪಡೆಯುವ ಸಮಾಜದ ಮೇಲೂ ಪರಿಣಾಮಬೀರಬಲ್ಲವು. ಹೀಗೆ ಹೊರಗಿನ ಸಂಪರ್ಕ ಸಾಧನಗಳಿಂದ ಗಳಿಸಿಕೊಂಡ ಕೃತಕಪ್ರಜ್ಞೆ ಲೇಖಕ ಬದುಕುತ್ತಿರುವ ಸಮಾಜದಲ್ಲಿಲ್ಲದ ಕಾರಣ ಅವನಿಗೆ ಅಸ್ತಿತ್ವದ ಸಮಸ್ಯೆಗಳನ್ನು ಏಳಿಸಬಹುದು ಅಥವಾ ತನ್ನ ಸಮಾಜದಲ್ಲಿ ತನಗೆ ಸ್ಥಾನವಿಲ್ಲವೆಂಬ ಭಾವನೆಯನ್ನು ಮೂಡಿಸಬಲ್ಲುದು. ಇಂಥ ಪ್ರಭಾವಕ್ಕೊಳಗಾಗಿ ಬಂದ ಲೇಖಕರು ಮತ್ತು ಓದುಗರು ಒಂದು ತಾತ್ತ್ವಿಕ ನಿಲುವನ್ನು ತೆಗೆದುಕೊಳ್ಳಲು ಹಿಂಜರಿಯುತ್ತಾರೆ. ಏಕೆಂದರೆ ತಮ್ಮ ಸುತ್ತ ವೈಯಕ್ತಿಕತೆ ಎಂಬ ಗೋಡೆಯನ್ನು ಕಟ್ಟಿಕೊಂಡು ಕತ್ತಲಿನಲ್ಲಿ ಬದುಕುತ್ತಿರುತ್ತಾರೆ. ಸಾಹಿತ್ಯ ವೈಯಕ್ತಿಕವಾದದ್ದೆಂದು, ಸಾಮಾಜಿಕ ರಾಜಕೀಯದಿಂದ ಅದು ಬೇರೆಯಾದದ್ದೆಂದು ಹೇಳಿ ತಮ್ಮ ತಪ್ಪು ನಿಲುವನ್ನೇ ಸಮರ್ಥಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಅವರ ಮಟ್ಟಿಗೆ ಸಾಹಿತ್ಯ

ವ್ಯಕ್ತಿಯು ತನ್ನತನವನ್ನು ಸಮಾಜದ ಹಿನ್ನಲೆಯಲ್ಲಿ 'ಶುದ್ಧವಾಗಿ' ಯಾವುದೇ ಸಾಮಾಜಿಕ ರಾಜಕೀಯ ಅಥವಾ ನೈತಿಕ ನಿಲುವಿನ ಧ್ವನಿಯಾಗದೆ ಅಭಿವ್ಯಕ್ತಿಸಬೇಕು. ಇನ್ನು ಕೆಲವರಿಗೆ ಸಾಹಿತ್ಯ ಸ್ವ-ಉದಾತ್ತೀಕರಣಕ್ಕಾಗಿ ಮಾತ್ರ. ಇನ್ನು ಕೆಲವರಿಗೆ ಅದು ಉದ್ದೇಶರಹಿತ, ಮತ್ತೆ ಕೆಲವರಿಗೆ ಸಾಹಿತ್ಯ 'ಸುಮ್ಮನೆ' ಇರುವಂಥದು.

ಬರೆಹಗಾರನ ವೈಯಕ್ತಿಕತೆ ಎಂಬ ಈ ನಿಲುವು ಮರಾಠಿ ಸಾಹಿತ್ಯದಲ್ಲಿ ತಪ್ಪು ಪರಿಕಲ್ಪನೆಗಳಿಂದ ಹುಟ್ಟಿಕೊಂಡಿದೆ. ತನ್ನ ಆತ್ಮದ ಸಂತೋಷಕ್ಕೆ ದಕ್ಕೆ ತರುವ ಎಲ್ಲಾ ಸಾಮಾಜಿಕ ಸಂಬಂಧಗಳ ವಿರುದ್ಧ ಹೋರಾಡುವಂಥ ನಾಯಕ ಶಿರೋಮಣಿ ಆಗಿ ತನ್ನನ್ನು ತಾನೇ ಭಾವಿಸಿಕೊಳ್ಳುತ್ತಾನೆ. ಒಂದೊ, ಅವನು ಸಾಮಾಜಿಕ ಸಂಬಂಧಗಳನ್ನು ಕಡಿದುಕೊಂಡು ಒಂಟಿಯಾಗಿ ಪರಕೀಯ ಪರಿಸ್ಥಿತಿಯನ್ನು ಅನುಭವಿಸುತ್ತಾನೆ. ಇಲ್ಲವೇ ಸಮಾಜದ ವಿರುದ್ಧ ಗೊತ್ತು ಗುರಿಯಿಲ್ಲದ ಬಂಡಾಯ ಮಾಡುತ್ತಾನೆ. 'ಅಥರ್ವ', 'ಅತ್ರ' 'ರುಚ' ಮುಂತಾದ 'ಚಿಕ್ಕ ಪತ್ರಿಕೆ'ಗಳ ಆಂದೋಲನವನ್ನುಪಯೋಗಿಸಿಕೊಂಡು ಆಧುನಿಕ ಮರಾಠೀ ಸಾಹಿತ್ಯದ ಕೆಲ ಲೇಖಕರು ಮಾಡಿದ ವ್ಯವಸ್ಥೆ-ವಿರೋಧಿ ಚಳುವಳಿ (Anti establishment movement) ಇದಕ್ಕೆ ಉದಾಹರಣೆಯಾಗಿದೆ. ಇದರಿಂದ ಸ್ವಲ್ಪ ಮಟ್ಟಿಗೆ ಮರಾಠಿ ಸಾಹಿತ್ಯದ ಶೈಲಿ ಮತ್ತು ಸ್ವರೂಪದ ಬೆಳವಣಿಗೆಯಾಗಿದೆ. ಆದರೆ ಇಂಥ ಕೆಲಸ ಮನುಷ್ಯನ ಸೃಜನಶೀಲತೆಯ ವ್ಯರ್ಥವೆಂದೇ ಹೇಳಬಹುದು. ಏಕೆಂದರೆ ಈ ಲೇಖಕರು ಯಾವುದನ್ನು ತಮ್ಮ ಪ್ರಜ್ಞೆ ಬೆಳೆಸುವ ಸ್ವಾತಂತ್ರ್ಯ ಅನ್ನುತ್ತಾರೋ, ಅದು ಸುಳ್ಳು ಸ್ವಾತಂತ್ರ್ಯ. ನಿಜವಾದ ಸ್ವಾತಂತ್ರ್ಯ ದೊರೆಯುವುದು ಸಮಾಜದ ಒಟ್ಟು ಸಂದರ್ಭದಲ್ಲಿ. ಅವನು ಸಮಾಜದ ಎಲ್ಲಾ ಚಟುವಟಿಕೆಗಳಲ್ಲೂ ಪೂರ್ಣವಾಗಿ ಭಾಗಿಯಾಗುವುದರಿಂದ. ಬರಹಗಾರ ಸಮಾಜದ ಚಟುವಟಿಕೆಗಳಲ್ಲಿ ಭಾಗವಹಿಸುವುದು ತನ್ನ ಬರಹಗಳ ಮೂಲಕ. ಸಮಾಜದಿಂದ ಹೊರತಾದ ವ್ಯಕ್ತಿಯೊಬ್ಬನ ಸ್ವಾತಂತ್ರ್ಯದ ಕಲ್ಪನೆ ಕೇವಲ ಭ್ರಮೆ. ಎಷ್ಟೇ ವೈಯುಕ್ತಿಕತೆಯಿಂದ ಕೂಡಿರಲಿ ಈ ಬದಲಾವಣೆಯ ದಿಕ್ಕನ್ನು ಸಮಕಾಲೀನ ಸಾಹಿತ್ಯದ ಮುಂಚೂಣಿಯಲ್ಲಿರುವ ಲೇಖಕರು ಗಮನಿಸಿದ್ದಾರೆ. ಆದರೆ ಬಹುಸಂಖ್ಯಾತ ಲೇಖಕರು ಹಾಗೂ ಓದುಗರ ಮೇಲೆ ಇದು ಯಾವ ಪರಿಣಾಮವನ್ನು ಮಾಡಿಲ್ಲ. ಉದಾಹರಣೆಗೆ, ಚಂದ್ರಕಾಂತ್ ಕಾಕೋಡ್ಕರ್, ಶಂಕರ್ ಪಾಟೀಲ್ ಬಿ. ಪಿ.ಕಾಳೆ, ಡಿ. ಬಿ. ಮೊಕಾಶಿ ಇನ್ನು ಅನೇಕ ಲೇಖಕ ಲೇಖಕಿಯರು. ಇವರು ಸಾಹಿತ್ಯ ಅಭಿರುಚಿಯನ್ನೇ ಬೆಳೆಸಿಕೊಳ್ಳದ ಸಾಮಾನ್ಯ ಓದುಗರಿಗಾಗಿ ತಾವು ಬರೆಯುತ್ತೇವೆಂದು ಹೇಳಿಕೊಳ್ಳುತ್ತಾರೆ. ಇವರಿಂದ ಬರುವ ಕಥೆಗಳು, ಕಾದಂಬರಿಗಳು, ಕವನಗಳು, ಅನುಕೂಲಕ್ಕೆ ತಕ್ಕಂತೆ ನಿರ್ಮಿಸಿಪ ಒಂದೇ ರೀತಿಯ, ರಮ್ಯವಾದವುಗಳಾಗಿದ್ದು ಎಂಥದೇ ಬುದ್ಧಿವಂತಿಕೆಯಿಲ್ಲದ ರಚನೆಗಳು. ಇವುಗಳೆಲ್ಲೆಲ್ಲಾ ಒಂದು ಸನ್ನಿವೇಶ, ಸಂಕೀರ್ಣತೆ, ಮತ್ತಷ್ಟು ಸಂಕೀರ್ಣತೆ, ಕೊನೆಗೊಂದು ಪರಿಹಾರ ಅನ್ನುವ ಏಕಸೂತ್ರ ಕಾಣುತ್ತದೆ. ಲೇಖಕರು, ಓದುಗರು ಮತ್ತು ಪ್ರಕಾಶಕರು ಕಿರುಬೂರ್ಜ್ವಾ ಭಾವನೆಗಳನ್ನು ಪ್ರತಿನಿಧಿಸುತ್ತಾರೆ. [illegible] ಮಧ್ಯಮವರ್ಗದಿಂದ ಬಂದ ಒಬ್ಬ

ಬ

ನಾಯಕ ಮತ್ತು ನಾಯಕಿ ಇದ್ದೇ ಇರಬೇಕು. ಈ ನಾಯಕ, ನಾಯಿಕೆಯರು ಯಾವಾಗಲೂ ದೈವಭಕ್ತರು ಮತ್ತು ಸಮಾಜದ ಅಂಗೀಕೃತ ನೈತಿಕ ತತ್ತ್ವವನ್ನು ಎತ್ತಿ ಹಿಡಿಯುವಂಥಹರು. ಈ ಲೇಖಕರ ಪೈಕಿ ಯಾರಾದ್ದಾದರೂ ಒಂದು ಪುಸ್ತಕ ಓದಿದರೆ ಎಲ್ಲರ ಪುಸ್ತಕಗಳನ್ನು ಓದಿದಂತೆಯೇ. ಅವು ಅಪ್ಪರಮಟ್ಟಿಗೆ ಒಂದೇ ರೀತಿಯಿರುತ್ತವೆ.

ತಮ್ಮ ವೈಯಕ್ತಿಕತೆಯೇ ಎಲ್ಲಕ್ಕಿಂತ ಮಿಗಿಲೆಂದು ಭಾವಿಸಿದ್ದ ಕೆಲವು ಲೇಖಕರು ತಮ್ಮ ಆ ನಿಲುವನ್ನು ಇತ್ತೀಚಿಗೆ ಬದಲಾಯಿಸಿದ್ದಾರೆ.[ಉದಾಹರಣೆಗೆ ವಸಂತಗುರ್ಜರ್ ತುಲಸಿಪರಾವ್, ವಿಜಯ ತೆಂಡೊಲ್ಕರ್. ಭಾವುಪಾದ್ಯೆ, ಅನಿಲ್ ಬಾಂದೇಕರ್,ಧಾಕೆ, ನಾಮದೇವ್ ಧಸಾಲ್, ರಾಜಾಧಾಲೆ, ಮುಂತಾದವರು] ಇವರ ಜೊತೆಗೆ ಮತ್ತೊಂದು ಬಗೆಯ ಲೇಖಕರ ಗುಂಪು ಸೇರಿದೆ. [ಉದಾಹರಣೆಗೆ ಸುಧೀರ್ ಬೇಡೇಕರ್, ಛಾಯಾ ದಾತಾರ್, ಬಾಬುರಾವ್, ಬಾಗುಲ್, ಶಾರದ್ ಪಾಟೀಲ್, ಅರುಣ್ ಸಾಧು, ಸತೀಷ್ ಕಲಸೇಕರ್] ಇವರಲ್ಲಿ ಕೆಲವರು ಹಿಂದೆ ಕೇವಲ ಕುಪಿತ ಯುವಕರಾಗಿದ್ದರು. ಕೆಲವರು ಸಿನಿಕರಾಗಿದ್ದರು. ಇನ್ನು ಕೆಲವರು ಯಾವಾಗಲೂ ಗೊಂದಲದಲ್ಲಿರುತ್ತಿದ್ದರು. ಆದರೆ ಒಂದೆರಡು ಬರಹಗಾರರು ಸ್ವಲ್ಪ ಖಚಿತ ನಿಲುವನ್ನು ಪಡೆದಿದ್ದರು. ಉದಾ : ಸುಧೀರ್ ಬೇಡೇಕರ್, ಬಾಬುರಾವ್ ಬಾಗುಲ್, ಇತ್ಯಾದಿ. ಇವರು ತಮ್ಮ ಹಿಂದಿನ ಧೋರಣೆಯ ಬಗ್ಗೆ ಭ್ರಮನಿರಸನ ಹೊಂದಿ, ಈಗ ಸ್ಪಷ್ಟವಾಗಿ ಮಾರ್ಕ್ಸ್‌ವಾದೀ ಸಾಹಿತ್ಯ ಧೋರಣೆಗಳನ್ನು ಒಪ್ಪಿಕೊಂಡಿದ್ದಾರೆ. 'ಸಾಧನಾ' 'ಸಮಾಜ ಪ್ರಭೋಧನ'. ಮಗೋವ, 'ಅಸ್ಮಿತಾದರ್ಶ' ಮುಂತಾದ ಪತ್ರಿಕೆಗಳಲ್ಲಿ ಇವರ ಬರಹಗಳು ಪ್ರಕಟಗೊಳ್ಳುತ್ತವೆ. ಮೊದಮೊದಲಿಗೆಇವರು ಮರಾಠಿ ಸಾಹಿತ್ಯದಲ್ಲಿ ನಡೆದ ವ್ಯವಸ್ಥೆ–ವಿರೋದಿ ಚಳುವಳಿ ಎಂಬ ಅಸ್ಪಷ್ಟ ತಾತ್ತ್ವಿಕ ಧೋರಣೆಯನ್ನು ಪ್ರತಿಪಾದಿಸುತ್ತಿದ್ದವರು. ಆದರೆ, ನಿಧಾನವಾಗಿ ಜೀವನದ ಸಂಕೀರ್ಣ ಸನ್ನಿವೇಶಗಳು, ಉಳ್ಳವರು ಇಲ್ಲದವರನ್ನು ಶೋಷಿಸಿ ಬಳಸಿಕೊಳ್ಳುತ್ತಿರುವ ರೀತಿ, ಬೃಹತ್ ಕೈಗಾರಿಕಾ ಕೇಂದ್ರವಾದ ಮುಂಬಯಿ ಅಂಥ ನಗರಗಳಲ್ಲಿ ಮನುಷ್ಯನ ಒಂಟಿತನ, ನೈತಿಕ ನಂಬಿಕೆಗಳ ಪೊಳ್ಳುತನ, ನಂಬಿಕೆಗಳಲ್ಲಿ ಉಂಟಾದ ಬಿಕ್ಕಟ್ಟು ಮುಂತಾದವು ಅವರ ತಿಳುವಳಿಕೆಗೆ ಸ್ಪಷ್ಟವಾಗಿ ಸಿಕ್ಕಿದಾಗ, ತಾವು ಕಾಣುತ್ತಿರುವುದನ್ನು ಅವರು ಕವನ, ನಾಟಕ, ಕಥೆ, ಕಾದಂಬರಿಗಳಲ್ಲಿ ಅಭಿವ್ಯಕ್ತಿಸಲು ಪ್ರಯತ್ನಿಸಿದರು (ಉದಾ : ಬಾಬುಪಾಧ್ಯೆ ಅವರ ಬ್ಯಾರಿಸ್ಟರ್' ಅನಿರುದ್ಧ ದೂಪೇಶ್ವರ್ ಅವರ ಹೋಮ್‌ಸಿಕ್ ಬ್ರಿಗೇಡ್'—ಕಾದಂಬರಿಗಳು) ಇವರ ಬರವಣಿಗೆಯಲ್ಲಿ ಯಾವುದೇ ಒಂದು ರೀತಿಯ ಸಾಮಾಜಿಕ ಅಥವಾ ರಾಜಕೀಯ ನಿಲುವಿನ ಧ್ವನಿ ಇರಲಿಲ್ಲ. ಜೀವನದ ಮೂಕಪ್ರೇಕ್ಷಕರಂತೆ, ತಮಗೆ ಕಂಡದ್ದನ್ನು ಅಭಿವ್ಯಕ್ತಿಸಲು ಪ್ರಯತ್ನಪಟ್ಟರು. ಆದರೆ ಈ ರೀತಿ ಕಂಡದ್ದಕ್ಕೆ ಕಾರಣ ಹುಡುಕದೆ ಕೇವಲ ಘಟನೆಗಳ ನಿಜ ಚಿತ್ರಣದ ಬರವಣಿಗೆಯಿಂದ ಅಥವಾ ತಮ್ಮದೇ ಒಂದು ಸಾಹಿತ್ಯ ಮಾಧ್ಯಮವನ್ನು ಸೃಷ್ಟಿಸುವುದರಿಂದ [ಚಿಕ್ಕ ಪತ್ರಿಕೆಗಳ ಆಂದೋಲನ] ತಾವು ವ್ಯವಸ್ಥೆ ವಿರುದ್ಧ ಕೇವಲ ಕೋಳಿ ಜಗಳವನ್ನು ಮಾತ್ರ ಮಾಡಿದಂತಾಗುತ್ತದೆ ಅನ್ನುವುದನ್ನು ಮನಗಂಡರು. ಅಷ್ಟೆ ಅಲ್ಲದೆ ಒಂದು ನಿರ್ದಿಷ್ಟ,

ಸಾಮಾಜಿಕ-ರಾಜಕೀಯ ಧೋರಣೆಯನ್ನು ಬೆಳೆಸಿಕೊಳ್ಳದೇ ಇದ್ದಲ್ಲಿ ಇಂಥ 'ಕೋಳಿ ಜಗಳ' ದಿನದಿನಕ್ಕೂ ಅರ್ಥ ಕಳೆದುಕೊಂಡು ಕೊನೆಗೆ ಪೂರ್ಣವಾಗಿ ಹಾಳಾಗಿ ವ್ಯವಸ್ಥೆಗೆ ಉಪಯೋಗಕಾರಿಯಾಗಿಯೇ ಪರಿಣಮಿಸಿ ಬಿಡುತ್ತದೆ ಅನ್ನುವುದನ್ನು ಮನಗಂಡವು. ಶರಚ್ಚಂದ್ರ ಮುಕ್ತಿಭೋದ್, ವಿಂದಾಕರಂಡೀಕರ್, ದಿ|| ಅನ್ನಬಾಹುಸಾಥೆ ದಿ|| ಅಮರ್ ಶೇಖ್, ಗಾಂವಕರ್ ಮುಂತಾದವರು ಹೀಗೆ ಅರಿತುಕೊಂಡವರಲ್ಲಿ ಕೆಲವರು. ಈ ಲೇಖಕರು ಶ್ರಮಿಕವರ್ಗದ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದಾರೆ ಎಂದು ಹೇಳಲಾಗದಿದ್ದರೂ 'ಶ್ರಮಿಕವರ್ಗದ' ಸಮಸ್ಯೆಗಳನ್ನು ಅರಿತುಕೊಂಡು ಅದನ್ನು ಸಾಹಿತ್ಯ ಮಾಧ್ಯಮಗಳಲ್ಲಿ ಅಭಿವ್ಯಕ್ತಿಸುವ ಪ್ರಯತ್ನವಂತೂ ಮಾಡಿಯೇ ಇದ್ದಾರೆ. [ನಾಮ್‌ದೇವ್ ಡಸಾಳರ ಗೋಲ್‌ಪಿತ' ನಾರಾಯಣಾ ಸರ್ವೆ ಅವರ 'ಮೇಜ್ ವಿದ್ಯಾಪೀಠ' ಮುಂತಾದ ಕೃತಿಗಳಲ್ಲಿ ದುಡಿಮೆಗಾರರು ಬಳಸುವ ಭಾಷೆಯನ್ನು ಆಯ್ಕೆಮಾಡಿರುವುದಲ್ಲದೆ ಅವರ ಶಬ್ದಗಳನ್ನೇ ಬಳಸಿದ್ದಾರೆ.]

ಮರಾಠಿ ಸಾಹಿತ್ಯದ ವರ್ಗಸ್ವಭಾವಗಳನ್ನು ಹುಡುಕುವಾಗ ಇಲ್ಲಿನ ಲೇಖಕಿಯರು ಸೃಷ್ಟಿಸಿರುವ ಸಾಹಿತ್ಯವನ್ನು ಗಮನಿಸಬೇಕಾಗುತ್ತದೆ. ಬಹಳಷ್ಟು ಲೇಖಕಿಯರೂ ತಮ್ಮ ಸಹವೃತ್ತಿ ಲೇಖಕರಂತೆ ಬೂರ್ಜ್ವಾ ತಾತ್ತ್ವಿಕ ದಾಟಿಯಿಂದ ಹೊರಬಂದಿಲ್ಲ ಅನ್ನುವುದು ನಾವು ಇತ್ತೀಚೆಗೆ ನಡೆಸಿದ ಸಮೀಕ್ಷೆಯಿಂದ ಗೊತ್ತಾಯಿತು. ಲೇಖಕಿಯರ ಬಹಳಷ್ಟು ಬರಹಗಳಲ್ಲಿ, ಹೆಣ್ಣು ಎಲ್ಲದಕ್ಕೂ ಗಂಡನ್ನು ಅವಲಂಬಿಸಿ ಬದುಕಬೇಕಾಗಿರುವುದನ್ನೋ ಅಥವಾ ಗಂಡಿಗೆ ಹೆಚ್ಚಿನ ಸ್ಥಾನಮಾನವನ್ನು ಕೊಡುವುದರಿಂದಲೋ ಮುಕ್ತಾಯವಾಗುತ್ತವೆ. ಅಥವಾ ಗಂಡಿನ ಭಾವನಾತ್ಮಕ ಪ್ರೇಮ ಇಲ್ಲವೇ ಮಧ್ಯಮವರ್ಗದ ಸಾಮಾಜಿಕ ಸಂಬಂಧಗಳ ಬಗ್ಗೆ ಇರುವ ಭಾವನೆಗಳನ್ನು ಚಿತ್ರಿಸುತ್ತವೆ. ತಾತ್ತ್ವಿಕ ಧೋರಣೆಯ ಮಾತಿರಲಿ ಪಾತ್ರಗಳ ಮನಸ್ಸನ್ನು ಅರಿಯುವ ಮನೋವಿಶ್ಲೇಷಣೆಯ ದೃಷ್ಟಿಯೂ ಇವರ ಕೃತಿಗಳಲ್ಲಿ ಇರುವುದಿಲ್ಲ.

ಇಂಥ ಹೇಳಿಕೆಗಳಿಗೆ ಅಪವಾದವೆಂಬಂತೆ ಕೆಲವು ಲೇಖಕಿಯರು ಸಾಹಿತ್ಯ ರಚನೆ ಮಾಡಿದ್ದಾರೆ. ಉದಾಹರಣೆಗೆ : ಗೋದಾವರಿ ಪರುಳೇಕರ್, ವಿಮಲ್‌ಬಾಗಲ್, ಗೀತಾ ಸಾನೆ, ಛಾಯಾ ದಾತಾರ್, ದುರ್ಗಾ ಭಗವತಿ, ದಿ|| ಇರಾವತಿ ಕರ್ವೆ, ಕಮಲ್ ದೇಸಾಯ್, ವಿಜಯ ರಾಜ್ಯಾಧ್ಯಕ್ಷ, ಪ್ರಭಾ ಗನೋರ್‌ಕರ್, ವಾಸುದೇವಪಾಟೀಲ್, ಗೌರಿ ದೇಶಪಾಂಡೆ ಮುಂತಾದವರು. ಇವರುಗಳಲ್ಲಿ ಮೊದಲನೆಯ ನಾಲ್ವರು ಮಾರ್ಕ್ಸ್‌ವಾದಿಗಳು. ಇತರರು ಆಧುನಿಕ ವ್ಯೆಯಕ್ತಿಕತಾವಾದಿಗಳು.

ಹೆಂಗಸರ ಮೇಲಿನ ಸಾಮಾಜಿಕ ಚಟುವಟಿಕೆಗಳ ನಿರ್ಬಂಧಗಳಿಂದಾಗಿ ಜೀವಾನುಭವಗಳ ಕೊರತೆ, ಆರ್ಥಿಕ ಪಾರತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ ಇದ್ದರೂ ಸಾಮಾಜಿಕ ಅನಿವಾರ್ಯತೆಯಿಂದ ಗಂಡಿನ ಮೇಲೆ ಅಪಾರ ಅವಲಂಬನೆಯ ಸ್ಥಿತಿ. ಹೆಣ್ಣು ಮಾತ್ರ ಸಂಸಾರದ ಜಂಜಾಟಗಳನ್ನು ನೋಡಿಕೊಳ್ಳಬೇಕೆಂದು ಬೂರ್ಜ್ವಾ ಸಮಾಜವು ಸೃಷ್ಟಿಸಿರುವ ಭ್ರಮೆ ಮತ್ತು ಇನ್ನೂ ಮುಂದುವರಿಯುತ್ತಿರುವ, ಗಂಡಿಗೇ ಪ್ರಧಾನ ಕೊಡುವ

ಸಮಾಜ, ಇವುಗಳಿಂದಾಗಿ ಹೆಣ್ಣಿನ ಪ್ರಜ್ಞೆಯ ಬಣ್ಣ ಮತ್ತು ಸ್ವರೂಪ ಬದಲಾಗಿ ಅದರಿಂದ ಇನ್ನೂ ಸಂಕುಚಿತಗೊಂಡು ಅದೇ ವರ್ಗದ ಲೇಖಕರ ಬರವಣಿಗೆಯ ಪ್ರಜ್ಞೆಗಿಂತಲೂ ಕೀಳಾಗಿ, ಅವರ ಬರವಣಿಗೆಗಳು ಮರಾಠಿ ಸಾಹಿತ್ಯದಲ್ಲಿ ನಿಸ್ಸತ್ವವಾಗಿಯೂ ನೀರಸವಾಗಿಯೂ ಇವೆ.

ಮಧ್ಯಮವರ್ಗ ಶ್ರಮಿಕವರ್ಗದೊಡನೆ ತನಗೆ ಇರುವ ಸಮಾನ ಆಸಕ್ತಿಗಳನ್ನು ಗುರುತಿಸಿಕೊಂಡು ಅದರೊಡನೆ ಒಂದಾಗುವುದು, ಮುಕ್ತಸಮಾಜವನ್ನು ಸಾಧಿಸುವತ್ತ ಇಡುವ ಮಹತ್ವದ ಹೆಜ್ಜೆಯಾಗುತ್ತದೆ. ಕಾಡ್‌ವೆಲ್‌ನ ಮಾತುಗಳಲ್ಲಿ ಹೇಳುವುದಾದರೆ "ಬೂರ್ಜ್ವಾ ಪದ್ಧತಿಯು ಅಳಿಸಿಹೋಗುತ್ತಿದ್ದಂತೆಯೇ ಅದರೊಂದಿಗೆ ಅವರ ಆರ್ಥಿಕ ಉತ್ಪಾದನೆಗೆ ಆವಶ್ಯಕವಾಗಿದ್ದ ಬಲವಂತದ ಸಂಬಂಧಗಳು ಅಳಿಸಿಹೋಗುತ್ತವೆ. ಆಗ ಮನುಷ್ಯ ನಿಜಸ್ವಾತಂತ್ರ್ಯದ ಕಡೆಗೆ ಧಾವಿಸುತ್ತಾನೆ". ಇಂಥ ಪ್ರಕ್ರಿಯೆಯಲ್ಲಿ ಸಾಹಿತ್ಯದ ಪಾತ್ರವೇನು ? ಶ್ರಮಿಕವರ್ಗದ ಪ್ರಜ್ಞೆಯನ್ನು ಬೆಳೆಸಿಕೊಂಡು ಬರುವ ಸಾಹಿತ್ಯ ಈ ಪ್ರಕ್ರಿಯೆಯನ್ನು ವೇಗಗೊಳಿಸಬಹುದು. ವರ್ಗರಹಿತ ಸಮಾಜ ಸ್ಥಾಪನೆಯ ಹೋರಾಟದಲ್ಲಿ ಲೇಖಕರ ಪಾತ್ರವನ್ನು ಚರ್ಚಿಸುವಾಗ–ಪ್ರಸ್ತುತ ಪರಿಸ್ಥಿತಿಯಲ್ಲಿ ಲೇಖಕಿಯರನ್ನು ಬೇರೆಯಾಗಿಯೇ ಚರ್ಚಿಸಬೇಕಾದರೂ–ಇಂಥ ಹೋರಾಟ ಒಟ್ಟು ಮಾನವ ಪ್ರಯತ್ನದಿಂದ ಎಂದಾಗ ಈ ಲಿಂಗ ಭೇದ ಅನಾವಶ್ಯಕವಾಗುತ್ತದೆ. ಬರಹಗಾರರು ಈ ಲಿಂಗದವರೋ.ಆ ಲಿಂಗದವರೋ ಆಗಿರುತ್ತಾರೆ. ಒಟ್ಟು ಸಾಮಾಜಿಕ ಕಾರಣಕ್ಕಾಗಿ ಆ ಸಾಹಿತ್ಯದ ಕೊಡುಗೆಯನ್ನು ಗುರುತಿಸುವಾಗ ಹೀಗೆ ಲಿಂಗಬೇಧ ಮಾಡುವುದು ಅರ್ಥಹೀನವಾಗಿ ಕಾಣುತ್ತದೆ. ಮಧ್ಯಮವರ್ಗದ ಸಂವೇದನೆ ಮಧ್ಯಮವರ್ಗದ ಚಿಂತನೆಯಿಂದ ಬರುತ್ತವೆ. ಮಧ್ಯಮವರ್ಗದ ಸೌಂದರ್ಯ ಮೀಮಾಂಸೆಯೂ ಮತ್ತು ಮಧ್ಯಮವರ್ಗದ ಆಚಾರ ವಿಚಾರಗಳೂ ಮೈಗೂಡಿಸಿಕೊಂಡೇ ಬರುತ್ತವೆ. ಮರಾಠಿ ಸಾಹಿತ್ಯವು ತನ್ನ ಬೇರುಗಳನ್ನು ಇಂಥ ಮಧ್ಯಮವರ್ಗದ ಮರಳು ಮಣ್ಣಿನಲ್ಲಿ ಬಿಟ್ಟಿದೆ. ಆಳವಾಗಿ ಬೇರು ಬಿಡಲು ಈ ಮಣ್ಣು ಸತ್ವ ಪಡೆದಿಲ್ಲದಿರುವುದರಿಂದ ಬೇಸರಗೊಂಡವರು ಮತ್ತು ಕುಪಿತಗೊಂಡವರು, ಅಲ್ಲಿಂದ ಬಿಟ್ಟು ಪ್ರಗತಿವಾದೀ ಸಾಹಿತ್ಯಸೃಷ್ಟಿಯಲ್ಲಿ ತೊಡಗಿದ್ದಾರೆ. ಉನ್ನತ ಪ್ರಜ್ಞೆಯನ್ನು ಬೆಳೆಸಿಕೊಂಡ ಕೆಲವು ಲೇಖಕರು ಕಾಲ ಹಾಗೂ ದೇಶದ ಮಿತಿಗಳನ್ನು ಹಾಯ್ದು ನಿಲ್ಲುತ್ತಾರೆ. ಇಂಥವರ ಸಾಹಿತ್ಯವು ಹೊರಗಿನ ಪ್ರಜ್ಞೆಯನ್ನು ಮೈಗೂಡಿಸಿಕೊಂಡು ಸ್ವಸಮಾಜದಿಂದ ಬರುವ ಪ್ರಜ್ಞೆಯಲ್ಲಿನ ಕೊರತೆಯನ್ನು ತುಂಬ ಬಲ್ಲರು. ಜೇಡೇಕರ್, ಮುಕ್ತಿಬೋಧ್, ಕರಂಡೀಕರ್ ಮುಂತಾದ ಕೆಲ ಪ್ರಗತಿಪರ ಲೇಖಕರು ಯಾವಾಗಲೂ ಮರಾಠಿ ಸಾಹಿತ್ಯಕ್ಕೆ ಒಂದು ಸಾಮಾಜಿಕ ಹಾಗೂ ಕ್ರಾಂತಿಕಾರಕ ಆಯಾಮವನ್ನು ತಂದುಕೊಡುವುದಕ್ಕೆ ಪ್ರಯತ್ನಿಸುತ್ತಿರುತ್ತಾರೆ.

ಹಳೆಯ ಹಾಗೂ ನವ ಪ್ರಗತಿವಾದೀ ಬರಹಗಾರರು ಮರಾಠಿ ಸಾಹಿತ್ಯವನ್ನು ಮಧ್ಯಮವರ್ಗದ ಪ್ರಜ್ಞೆಯಿಂದ ಬಿಡುಗಡೆಗೊಳಿಸಲು ಎಷ್ಟೇ ಪ್ರಯತ್ನಪಟ್ಟರೂ ಅವರ ಈ ಪ್ರಯತ್ನದ ವಿರುದ್ಧ ಬಹುಸಂಖ್ಯಾತರು ಇರುವಾಗ, ಅಂತಹ ಬಿಡುಗಡೆ ಹತ್ತಿರ ಭವಿಷ್ಯ

ದಲ್ಲಿ ಸಾಧ್ಯವಿಲ್ಲವೇನೋ ಅನ್ನಿಸುತ್ತದೆ. ಯಾವಾಗ ಮರಾಠಿ ಸಾಹಿತ್ಯದಲ್ಲಿ ಗತವೈಭವದ ಹೊಗಳಿಕೆಗಳನ್ನು ಕಾಣುತ್ತೇವೋ ಆಗ ಅದು ಯಥಾಸ್ಥಿತಿ ವಾದಿಗಳ ದಾಟಿ ಎಂದೇ ಹೇಳಬಹುದು. ಯಥಾಸ್ಥಿತಿ ವಾದಿಗಳಿಂದ ಆರಾಮಜೀವಿಗಳ ಮಾತಾದ 'ನೀನು' ಒಂದು ಓದು ಎಲ್ಲಾ ಓದಿದಂತೆಯೇ ಎಂಬಲ್ಲಿಗೆ ತಲುಪಿ, ಆಧುನಿಕ ಬರಹಗಾರರು ಕರೆಯುವ 'ಮುಕ್ತ' ಸಮಾಜದ ಸೃಷ್ಟಿ ಎನ್ನುವ ವ್ಯೆಯಕ್ತಿಕತೆಯುವಾದಕ್ಕೆ ಬಂದು ತಲುಪುತ್ತಾರೆ. ಪ್ರಗತಿಪರ ಖಚಿತ ಧೋರಣೆಯ ಮರಾಠಿ ಸಾಹಿತ್ಯ ಇನ್ನು ಬಹಳಷ್ಟು ದೂರದ ದಾರಿ ಯನ್ನು ತುಳಿಯಬೇಕಾಗಿದೆ. ಈ ದೂರದ ದಾರಿಯನ್ನು ಕ್ರಮಿಸದೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂಬುದು ನಮ್ಮ ಸ್ಪಷ್ಟ ಅಭಿಪ್ರಾಯ.

---

ಸುತೀಂದರ್ ಸಿಂಗ್
ನೂರ್

# ಆಧುನಿಕ ಪಂಜಾಬಿ ಸಾಹಿತ್ಯ : ವರ್ಗ ಸೆಲೆ ಹಾಗೂ ವರ್ಗ ಸಮಸ್ಯೆಗಳು

ಆಧುನಿಕ ಪಂಜಾಬಿ ಸಾಹಿತ್ಯದ ಮೂಲ ಚೇತನವೇನು ? ಇದರಲ್ಲಿ ವರ್ಗ ಸಮಸ್ಯೆ ಹಾಗೂ ವರ್ಗ ಸಂಘರ್ಷ ಇವುಗಳ ಸೆಲೆ ಏನಾದರೂ ಇದೆಯೇ, ಇದ್ದರೆ ಅವುಗಳ ಬೆಳವಣಿಗೆ ಯಾವ ರೀತಿ ಆಗಿದೆ, ಇದರ ಸಮಗ್ರ ವಿಶ್ಲೇಷಣೆಯನ್ನು ಇದುವರೆಗೂ ಯಾವ ಪಂಜಾಬಿ ಸಾಹಿತ್ಯ ವಿಮರ್ಶಕನೂ ಗಂಭೀರನಾಗಿ ಮಾಡಿಲ್ಲವೆನ್ನಬಹುದು. ಪ್ರಮುಖ ಮಾರ್ಕ್ಸ್‌ವಾದಿ ಪಂಜಾಬಿ ಸಾಹಿತ್ಯ ವಿಮರ್ಶಕರೂ ಕೂಡ ಆಧುನಿಕ ಪಂಜಾಬಿ ಸಾಹಿತ್ಯವನ್ನು ಈರೀತಿ ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಿಲ್ಲ. ಕೆಲವು ವಿಮರ್ಶಕರು ಕೇವಲ ಮತೀಯ ಹಾಗೂ ಭಾವವಾದದಿಂದ (Impressionism) ಮಾತ್ರ ಪಂಜಾಬಿ ಸಾಹಿತ್ಯವನ್ನು ಆಲೋಚಿಸಿದ್ದಾರೆ.

ನಾವು ಈ ದೃಷ್ಟಿಯಿಂದ ಪಂಜಾಬಿ ಸಾಹಿತ್ಯವನ್ನು ಆಲೋಚಿಸುವಾಗ ಆಧುನಿಕ ಪಂಜಾಬಿ ಸಾಹಿತ್ಯದ ಮೂಲ ಲೇಖಕ ಹಾಗೂ ಪ್ರವರ್ತಕ ಭಾಯಿವೀರಸಿಂಗ್‌ರಿಂದಲೇ ಪ್ರಾರಂಭಿಸಬೇಕು. ಇವರು ಪಂಜಾಬಿನ ಧಾರ್ಮಿಕ ಚಳುವಳಿ ಸಂಸ್ಥೆಗಳೊಲ್ಲೊಂದಾದ "ಸಿಂಗ್ ಸಭಾ"ದ ಕಾಣಿಕೆ. ಮಹಾರಾಜಾ ರಣಜಿತ್‌ಸಿಂಹರ ನಂತರ ಸಿಖ್ ಜನಾಂಗ ಹಾಗೂ ಸಿಖ್ ಧರ್ಮದಲ್ಲಿ ಒಂದು ರೀತಿಯ ಪತನ ಪ್ರಾರಂಭವಾಯಿತು ಈ ಪತನವನ್ನು ತಡೆಗಟ್ಟಿ ಸಿಖ್ಖ ಸಮಾಜದಲ್ಲಿ ಒಂದು ನವಜಾಗೃತಿಯನ್ನುಂಟು ಮಾಡುವುದೇ ಅಲ್ಲದೇ ಸಿಖ್ಖ ಮತವನ್ನು ಒಂದು ಆದರ್ಶವಾದಿ ಮತವನ್ನಾಗಿ ಪರಿವರ್ತಿಸುವುದೇ ಈ'ಸಿಂಗ್‌ಸಭಾ' ಉದ್ದೇಶವಾಗಿದ್ದಿತು. ರಣಜಿತ್ ಸಿಂಹರ ಕಾಲದಲ್ಲಿಯೇ ಪಂಜಾಬಿನ ಜಮೀನ್ದಾರರು, ಬಂಡವಾಳಗಾರರು ಹಾಗೂ ಸಾಮ್ರಾಜ್ಯವಾದಿಗಳು ಸುವ್ಯವಸ್ಥಿತವಾಗಿ ನೆಲೆಗೊಂಡು ಸಾಕಷ್ಟು ಬಲಯುತರಾಗಿದ್ದರು. ರಣಜಿತ್‌ಸಿಂಹರ ನಂತರ ರಾಜಕೀಯವಾಗಿ ಇವರ ಪ್ರಭಾವ ಹೆಚ್ಚಿದರೂ, ಕ್ರಮೇಣ ಕಡಿಮೆಯಾಗತೊಡಗಿತು. ಆಗ ಈ ವರ್ಗಕ್ಕೆ ಸೇರಿದ ಕೆಲವು ಪ್ರಮುಖ ಸಿಖ್ಖ ಸರದಾರರು ಸೇರಿ ಈ 'ಸಿಂಗ್ ಸಭಾ'ವನ್ನು ಸ್ಥಾಪಿಸಿದರು. ಈ ಚಳುವಳಿಗೆ ಸಂಬಂಧಿಸಿದ ಪಂಜಾಬಿ ಸಾಹಿತ್ಯವೂ ಕೂಡ ಆಂತರಿಕವಾಗಿ ಮೇಲ್ಮಂಡ ವರ್ಗವನ್ನೇ ಪ್ರತಿನಿಧಿಸಿತು. ಕ್ರಮೇಣ ಈ 'ಸಿಂಗ್ ಸಭಾ'ದ ಬಹುಪಾಲು ಪ್ರಮುಖರು ಆಂಗ್ಲರ ಕೈವಾಣಿಗಳಾಗಿ ತಮ್ಮ ಸ್ವಾರ್ಥದ ಬೇಳೆ ಬೇಯಿಸಿಕೊಳ್ಳ ಹತ್ತಿದರು. ಇದೇ ಸಮಯದಲ್ಲಿ ಭಾರತಾದ್ಯಂತ ಸ್ವಾತಂತ್ರ್ಯ ಚಳುವಳಿ ಪ್ರಾರಂಭವಾಯಿತು. ಭಾಯಿ ಸಿಂಗ್‌ರೂ ಕೂಡಾ ಉಸ್ಕೃತ ಮಧ್ಯಮ ವರ್ಗಕ್ಕೆ ಸೇರಿದವರಾಗಿದ್ದರಿಂದ ಅವರ ಸಾಹಿತ್ಯ

ಸೃಷ್ಟಿಯ ಮೂಲಚೇತನ 'ಭಾರತೀಯ ಸ್ವಾತಂತ್ರ್ಯ ಚಳುವಳಿ' ಎಂದೂ ಆಗಲಿಲ್ಲ. ಅವರ ಕೆಲವು ರಚನೆಗಳಲ್ಲಿ ನಾವು ಸಾಂಕೇತಿಕವಾಗಿ ಈ ಸ್ವಾತಂತ್ರ್ಯ ಚಳುವಳಿಯ ಸೆಳೆವನ್ನು ಕಾಣಬಹುದಾದರೂ ಅವರು ಮಧ್ಯಯುಗೀನ ರಹಸ್ಯವಾದಿ ಹಾಗೂ ಆಧ್ಯಾತ್ಮ ವಾದಿ ಲೇಖಕರಾಗಿಯೇ ಹೆಚ್ಚು ಪ್ರಸಿದ್ಧರಾಗಿದ್ದಾರೆ. ಪ್ರಾಯಶಃ ಬೂರ್ಜ್ವಾ ವರ್ಗ ಸಂಬಂಧವೇ ಅವರ ಸಾಹಿತ್ಯ ಸೃಷ್ಟಿಗೆ ಪ್ರತಿಬಂಧಕವಾಗಿದ್ದಿರಬೇಕೆನಿಸುತ್ತದೆ.

ಪಂಜಾಬಿನಲ್ಲಿ 1907-08ರ ಸುಮಾರಿಗೆ ಪ್ರಥಮಬಾರಿಗೆ ಶ್ರಮಿಕರು ಹಾಗೂ ಕೃಷಿಕರು ಎಚ್ಚರಗೊಂಡು ಸಂಘಟಿತರಾಗಹತ್ತಿದ್ದರು. ಲಾಯಲ್‌ಪುರ ಇಲಾಖಾ [ಈ ಪ್ರದೇಶ ಈಗ ಪಾಕಿಸ್ಥಾನದಲ್ಲಿದೆ] ದ ಕೃಷಿಕರು ಸಂಘಟಿತರಾಗಿ "ಪಗಡಿ ಸಂಭಾಲ್ ಜಟ್ಟಾ" ಹಾಗೂ ಇತರ ಗೀತೆಗಳನ್ನು ಹಾಡತೊಡಗಿದರು [ಈ ಗೀತೆಗಳು ಈ ಸಿಖ್ಖರಲ್ಲಿ ಸ್ವಾಭಿಮಾನ ದೇಶಾಭಿಮಾನ, ಐಕ್ಯಮತ್ಯವನ್ನು ಪ್ರಚೋದಿಸಿದವು]. ಜನ ಜಾಗೃತಿಯ ಈ ಪ್ರಜ್ಞೆ ಯನ್ನು ವರ್ಗಪ್ರಜ್ಞೆ ಎಂದು ಕರೆಯಬಹುದಾದರೆ ಅದನ್ನು ಸಮಾಜವಾದಿ ಪ್ರಜ್ಞೆ ಎಂದು ಕರೆಯಬಹುದು. ಸಮಾಜ ವ್ಯವಸ್ಥೆಗೆ ಸಹಕಾರಿಯಾದ ಈ ವರ್ಗ ಪ್ರಜ್ಞೆಗೆ ಸಂಬಂಧಿಸಿದ ಅಂಶಗಳು ಭಾಯಿ ವೀರಸಿಂಹರ ಹೊರತಾಗಿ ಉಳಿದ ಲೇಖಕರ ಸಾಹಿತ್ಯ ಕೃತಿಗಳಲ್ಲಿ ಧಾರಾ ಳವಾಗಿ ದೊರೆಯುತ್ತವೆ. ಈ ಗುಂಪಿನ ಲೇಖಕರಲ್ಲಿ ಈ 'ವರ್ಗಪ್ರಜ್ಞೆ' ಎಷ್ಟು ಆಳವಾ ಗಿವೆ "ಎಂದರೆ ಲೇಖಕರಲ್ಲಿ ಒಬ್ಬರಾದ ಪೂರಣಸಿಂಗ್‌ರು ತಮ್ಮ ಪ್ರಸಿದ್ಧ ಕವಿತೆ 'ಪುರಾಣೀ ಪಂಜಾಬನು ಆವಾಜ'ಯಲ್ಲಿ ಪಂಜಾಬಿಗಳು ಹಾಗೂ ಪಂಜಾಬೀ ಸಂಸ್ಕೃತಿಯ ಭವ್ಯ ಕಲ್ಪನೆಕೊಟ್ಟರೂಸಹ, ವಿವಿಧ ವರ್ಗಗಳಲ್ಲಿ ಹಂಚಿಹೋಗಿರುವ ಹಾಗೂ ಭೌತಿಕ ವಸ್ತುಗಳಿ ಗೋಸ್ಕರ ಹಾತೊರೆಯುತ್ತಿರುವ ಜನತೆಯನ್ನುಳ್ಳ ಪಂಜಾಬಿನ ಕಲ್ಪನೆ ಕೂಡ ಅವರು ಮಾಡಲಾರರಲ್ಲದೇ, ಅದರ ಬಗ್ಗೆ ತೀವ್ರ ಅಸಹನೆಯನ್ನೂ ವ್ಯಕ್ತಗೊಳಿಸುತ್ತಾರೆ. ಇದೇ ಕಾರಣದಿಂದ ಅವರು ಪಂಜಾಬಿ ಸಾಹಿತ್ಯದ ಮೇಲಿನ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವನ್ನೂ ಕೂಡಾ ಖಂಡಿಸುತ್ತಾರೆ. ಪೂರಣಸಿಂಗ್‌ರ ಸಮಕಾಲೀನ ಲೇಖಕರಾದ ಧನೀರಾಮ್ 'ತಾರಿತ್ರಿತ್', ನಾನಕ್‌ಸಿಂಗ್, ಗುರುಬಕ್ಷಸಿಂಗ್ 'ಪ್ರೀಲ್‌ಲಡೀ' ದೀವಾನ್ ಸಿಂಗ್ 'ತಾಳೇಪಾಣಿ', ಮೊದಲಾದವರು ಮತ್ತು ಕೆಲಸಮಯದ ನಂತರ ಪ್ರೊ. ಮೋಹನ ಸಿಂಗ್, ಪ್ಯಾರಾಸಿಂಗ್ 'ಸಹಿರಾಯಿ', ಬಾವಾ ಬಲವಂತ, ಅಮೃತಾಪ್ರೀತಮ್ ಮೊದ ಲಾದ ಲೇಖಕರು ವಿವಿಧ ರೂಪಗಳಲ್ಲಿ [ವೈಯುಕ್ತಿಕ ದೃಷ್ಟಿಕೋನಗಳಿಂದ] ಈ ವರ್ಗ ಸಮಸ್ಯೆ, ವರ್ಗ ಸಂಘರ್ಷ ಹಾಗೂ ವರ್ಗ ಪ್ರಜ್ಞೆಗಳನ್ನು ತಮ್ಮ ಕೃತಿಗಳ ಮೂಲಕ ಹೊರ ತಂದು ವರ್ಗ ಸಮಸ್ಯೆ. ವರ್ಗ ಸಂಘರ್ಷ ಹಾಗೂ ವರ್ಗಪ್ರಜ್ಞೆಯ ವಿವಿಧ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ.

1917ರ ರಶಿಯಾದ ಸಮಾಜವಾದಿ ಕ್ರಾಂತಿಯು ಜಗತ್ತಿನ ಮೇಲೆ ತನ್ನ ಪ್ರಭಾವ ಬೀರಿದಂತೆ ಪಂಜಾಬಿ ಸಾಹಿತ್ಯದ ಮೇಲೂ ತನ್ನ ಅಗಮ್ಯ ಪ್ರಭಾವವನ್ನು ಬೀರಿತು. 1935-36ರ ವೇಳೆಗೆ ಭಾರತಾದ್ಯಂತ ಪ್ರಗತಿವಾದಿ ಲೇಖಕ ಸಂಘಗಳು ಸ್ಥಾಪಿತವಾಗ ಹತ್ತಿದಂತೆ ಪಂಜಾಬಿ ಸಾಹಿತ್ಯಕ್ಷೇತ್ರದಲ್ಲಿಯೂ ಬದಲಾವಣೆಯ ಹವೆ ಬೀಸಲಾರಂಭಿಸಿತು.

ಪಂಜಾಬಿ ಸಾಹಿತ್ಯವನ್ನು ಕೆಲವು ಧಾರ್ಮಿಕ ವಿಶ್ವಾಸಗಳ ಪ್ರಚಾರ ಸಾಧನವನ್ನಾಗಿ ಬಳಸಿಕೊಳ್ಳುತ್ತಿದ್ದ ಉನ್ನತ ಮಧ್ಯಮ ಶ್ರೇಣಿಯ ಲೇಖಕರ ಸ್ಥಾನವನ್ನು ಮಧ್ಯಮ ಹಾಗೂ ಕೆಳವರ್ಗಕ್ಕೆ ಸೇರಿದ ಲೇಖಕರು ತುಂಬತೊಡಗಿದರು. ಇದರ ಫಲವಾಗಿ ಪಂಜಾಬಿ ಸಾಹಿತ್ಯವು ವಾಸ್ತವವಾದಿ ಸ್ವರೂಪವನ್ನು ಪಡೆಯತೊಡಗಿತು. ವರ್ಗ ಭೇದ, ವರ್ಗ ಶೋಷಣೆ ಹಾಗೂ ವರ್ಗ ಸಮಸ್ಯೆಗಳ ಅರಿವು ಹಾಗೂ ಅನುಭವ ವಾಸ್ತವವಾದೀ ಲೇಖಕರಿಗೆ ಇದ್ದುದರಿಂದ, ಈ ವರ್ಗಪ್ರಜ್ಞೆಯೇ ಅವರ ಸಾಹಿತ್ಯ ಸೃಷ್ಟಿಯ ಮೂಲ ಚೇತನವಾಗಿತ್ತು. ಈ ಸಾಹಿತಿಗಳು ಜಮೀನ್ದಾರೀ ಪದ್ಧತಿ, ಬಂಡವಾಳಶಾಹಿ ಹಾಗೂ ಸಾಮ್ರಾಜ್ಯವಾದಿ ಸರ್ಕಾರದ ವಿರುದ್ಧ ಸಿಡಿದೆದ್ದರು. ಇವರ ಕೃತಿಗಳು [ಬಹುತೇಕ ಭಾರತ ಸ್ವಾತಂತ್ರ್ಯ ಚಳುವಳಿ ಪ್ರಚೋದಕ, ಹಾಗೂ ಫಲಿತ] ಕೇವಲ ಪ್ರತೀಕಾತ್ಮಕ ಹಾಗೂ ಸಂಕೇತಾತ್ಮಕವಾಗಿರದೇ ಹೃದಯದಾಳದಿಂದ ನಿರ್ದುಷ್ಟವಾಗಿ ಹೊರಹೊಮ್ಮಿ ಬಂದ ನೇರಕೃತಿಗಳಾಗಿವೆ. ಫಿರೋಜ್‌ದೀನ್ 'ಸ್ವರಫ' ಗಿಯಾನಿಹೀರಾಸಿಂಗ್ 'ದರ್ದ' ಗಿಯಾನಿ ಗುರುಮುಖಸಿಂಗ್ 'ಮುಸಾಫಿರ್', ದರ್ಶನಸಿಂಗ್ 'ಆವಾರಾ' ಮೊದಲಾದ, ಲೇಖಕರಸಾಹಿತ್ಯ ಕೃತಿಗಳನ್ನು ಜಪ್ತಿ ಮಾಡಲ್ಪಟ್ಟಿದು ಮತ್ತು ಇವರು ಸೆರೆಮನೆಗೆ ಕಳಿಸಲ್ಪಟ್ಟುದೇ ಅವರ ಪ್ರಗತಿಪರ ವಿಚಾರಧಾರೆಗೆ ಸಾಕ್ಷಿಯಾಗಿದೆ.

ವರ್ಗ ಪ್ರಜ್ಞೆ ಹಾಗೂ ವರ್ಗ ಭೇದಗಳ ಸಾಹಿತ್ಯನೊಡನೆಯ ಸಂಬಂಧ ಹೆಚ್ಚು ನಿಖರವಾಗತೊಡಗಿದ್ದು ಮಾರ್ಕ್ಸ್‌ವಾದದ ನೇರ ಪ್ರಭಾವ ಪಂಜಾಬಿ ಸಾಹಿತ್ಯದ ಮೇಲೆ ಬೀಳಲಾರಂಭಿಸಿದಾಗ 1947ರ ಮೊದಲಿಗೇ ಈ ಮಾರ್ಕ್ಸ್‌ವಾದಿ ಪ್ರಭಾವವು ಪಂಜಾಬಿ ಸಾಹಿತ್ಯದಲ್ಲಿ ಅಲ್ಲಲ್ಲಿ ಕಾಣಿಸಿಕೊಂಡಿತ್ತು. ಆದರೆ ಪ್ರಥಕ್ ಸಮೀಕ್ಷೆ ಪ್ರಾರಂಭವಾಗಿದ್ದು 1947ರ ನಂತರವೇ. ಬ್ರಿಟಿಷರ ಸಾಮ್ರಾಜ್ಯವಾದಿ ನೀತಿಯ ಪರಿಣಾಮವಾಗಿ 1956ನೇ ಇಸವಿಯು ಪಂಜಾಬಿಗೆ ರಾಜಕೀಯವಾಗಿ ಬಹುದುರಂತದ್ದಾಗಿ ಪರಿಣಮಿಸಿತು. ಆಶ್ಚರ್ಯದ ಸಂಗತಿಯೆಂದರೆ ಈ ಸಮಯದ ವಾಸ್ತವ ಚಿತ್ರಣವು ಯಾವ ಪಂಜಾಬೀ ಕೃತಿಯಲ್ಲಿಯೂ ಹೊರಬಂದಿಲ್ಲವೆನ್ನುವುದು, ಬಂದಿರುವ ಕೆಲವು ವಿಶ್ಲೇಷಣೆಯೂ ಕೂಡಾ ಸಾಮಾನ್ಯ ದರ್ಜೆಯದಾಗಿದೆಯೇ ಹೊರತು ಸಂಶೋಧನಾತ್ಮಕವಾಗಿಲ್ಲ. ಸ್ವತಂತ್ರ ಭಾರತದ ಸಾಮಾಜಿಕ ವ್ಯವಸ್ಥೆ ಹೇಗಿರಬೇಕು, ಸರ್ಕಾರದ ಸ್ವರೂಪ ಹೇಗಿರಬೇಕು ಎಂಬ ಬಿಸಿ ಚರ್ಚೆ ಭಾರತದಲ್ಲಿ ನಡೆಯಹತ್ತಿದಾಗ, ಪಂಜಾಬಿ ಲೇಖಕರ ದೃಷ್ಟಿಯೂ ಕೂಡ ಈ ಸಮಸ್ಯೆಗಳ ಕಡೆಗೆ ಹೊರಳಿತು. ಈ ಸಮಸ್ಯೆಗಳಕಡೆ ದೃಷ್ಟಿ ಹೊರಳಿಸಿದ ಸಾಹಿತಿಗಳು ಕೆಳ ಮಧ್ಯಮ ವರ್ಗಕ್ಕೆ ಸೇರಿದವರಾಗಿದ್ದರು. ದೇಶದಾದ್ಯಂತ ಸಮಾಜವಾದದ ಕಹಳೆಯು ಮೊಳಗುತ್ತಿದ್ಧರೂ, ಆಡಳಿತ ವ್ಯವಸ್ಥೆ ಉನ್ನತ ಮದ್ಯಮ ಶ್ರೇಣಿಯ ಹಾಗೂ ಬಂಡವಾಳಶಾಹಿಗಳ ಕೈಸೇರತೊಡಗಿತ್ತು. ಕ್ರಮೇಣ ಆಡಳಿತಲ್ಲಿದ್ದ ಈ ವರ್ಗವೇ ಸಮಾಜವಾದಿ ವರ್ಗರಹಿತ ಸಮಾಜ ಸ್ಥಾಪನೆಯನ್ನು ತಮ್ಮ ಘೋಷಣೆಯನ್ನಾಗಿ ಮಾಡಿಕೊಂಡಿತು. ಇದರಿಂದ ಮಧ್ಯಮ ವರ್ಗೀಯ ಸಾಹಿತಿಗಳು ಒಂದು ಬಗೆಯ ಇಕ್ಕಟ್ಟಿಗೆ ಸಿಲುಕಿದರು. ಪರಿಣಾಮವಾಗಿ ಇವರು ಸಮಾಜವಾದವನ್ನು ಕೇವಲ ಆದರ್ಶವಾದವಾಗಿಟ್ಟುಕೊಂಡು

ಬಂಡವಾಳಶಾಹಿಗಳ ವಿರುದ್ಧ ವಿದ್ರೋಹ ಮಾಡತೊಡಗಿದರು. ಸೂಕ್ತ ಕಾರ್ಯಕ್ಷೇತ್ರದ ಅಭಾವದಿಂದ ಸಮಾಜವಾದದ ಈ ಆದರ್ಶ ವಾದವನ್ನು ಕೃತಿಗಿಳಿಸಲು ಪಂಜಾಬಿ ಲೇಖಕರಿಗೆ ಆಗಲಿಲ್ಲ. ಜಸವಂತಸಿಂಗ್ 'ಕಂವಲ್'ರವರ ಕಾದಂಬರಿಗಳು, ವರ್ಗರಹಿತ ಸಮಾಜದ ಪ್ರತಿಪಾದನೆ ಮಾಡುತ್ತಿದ್ದರೂ ಸಮಕಾಲೀನ ಸಮಾಜದ ವಾಸ್ತವಿಕ ವಿಶ್ಲೇಷಣೆ ಸಾಹಿತ್ಯದಲ್ಲಿ ಕಂಡುಬಂದಿಲ್ಲ.

ಪಂಜಾಬಿ ಸಾಹಿತ್ಯವು ಹೀಗೆ ಸಂದಿಗ್ಧದಲ್ಲಿದ್ದಾಗ, ಪಾಶ್ಚಿಮಾತ್ಯ ಸಾಹಿತ್ಯ ವಿಚಾರ ಧಾರೆಗಳ ನೇರ ಪ್ರಭಾವವು ಪಂಜಾಬಿ ಸಾಹಿತ್ಯದ ಮೇಲೂ ಆಯಿತು. ಅಂತರರಾಷ್ಟ್ರೀಯ ವಾದ (intenationalism), ಪ್ರಯೋಗವಾದ (experimentalism) ನವ್ಯ ಸಾಹಿತ್ಯಧಾರೆ, ಅಸಂಗತವಾದ, ಅಸ್ತಿತ್ವವಾದ ಇವುಗಳ ಚರ್ಚೆ, ಪ್ರಯೋಗ, ಪಂಜಾಬಿ ಸಾಹಿತ್ಯ ಕ್ಷೇತ್ರದಲ್ಲಿಯೂ ಪ್ರಾರಂಭವಾಯಿತು. ಈ ವಾದಗಳ ಪ್ರವರ್ತಕರು ಮಧ್ಯಮ ವರ್ಗಕ್ಕೆ ಸೇರಿದವರು. ಆದರ್ಶವಾದಿಗಳು ಹಾಗೂ ಪ್ರಗತಿವಾದಿಗಳು ಕೂಡಿದ್ದರಿಂದ ಈ ವರ್ಗಕ್ಕೆ ವ್ಯಕ್ತಿವಾದ ಹಾಗೂ ವ್ಯಕ್ತಿ ಸಮರ್ಥನೆ ಮುಖ್ಯವಾಗಿದ್ದಷ್ಟು, ಸುವ್ಯವಸ್ಥಿತ ಸಮಾಜ ರಚನೆ ಪ್ರಾಮುಖ್ಯವಾಗಿರಲಿಲ್ಲ. ಆದರೆ ಬಹಳ ಸಮಯದವರೆಗೆ ಈ ರೀತಿ ಸಾಮಾಜಿಕ ಸಮಸ್ಯೆಗಳಿಂದ ದೂರವಿರುವ ಪ್ರವೃತ್ತಿ ಪಂಜಾಬಿಗಳದ್ದಲ್ಲ. ಐತಿಹಾಸಿಕ ಪ್ರಜ್ಞೆ ಹಾಗೂ ಸಾಮಾಜಿಕ ಪ್ರಜ್ಞೆ ಪಂಜಾಬಿಗೆ ಮೂಲಚೇತನವಾಗಿದೆ. ಇದರ ಫಲ ವಾಗಿ, ಪಂಜಾಬಿ ಲೇಖಕರು ತಮ್ಮ ಸಮಾಜವು ಯಾವ ರೀತಿ ಶೋಷಣೆಗೊಳಗಾಗಿದೆ, ಪಂಜಾಬಿಗಳು ಎಷ್ಟು ವರ್ಗಗಳಲ್ಲಿ ಹಂಚಿಹೋಗಿದ್ದಾರೆ, ಈ ವರ್ಗಗಳ ಆರ್ಥಿಕ ಸಮಸ್ಯೆ ಗಳೇನು ಮುಂತಾದ ಮೂಲಭೂತ ಪ್ರಶ್ನೆಗಳನ್ನು ಕುರಿತು ವಿಚಾರಿಸ ತೊಡಗಿದರು. ಈ ನವ್ಯ ಕಾಲೀನ ಲೇಖಕರು ವಾಸ್ತವಿಕ ಪ್ರಜ್ಞೆಗಳನ್ನೊಳಗೊಂಡಿದ್ದು, ಕೇವಲ ಆದರ್ಶವಾದಿಗಳಾಗಿದ್ದು, ವಾಸ್ತವಿಕ ಕಾರ್ಯಕ್ಷೇತ್ರಕ್ಕೆ ಇಳಿಯದಿದ್ದ ಹಿಂದಿನ ಪೀಳಿಗೆಯ ವಿರುದ್ಧ ದಂಗೆಯೆದ್ದರು. ಈ ಉತ್ಸಾಹಿ ಹೊಸ ಪೀಳಿಗೆಯನ್ನು ನವಕ್ರಾಂತಿ ಕಾರಿ ಇಲ್ಲವೇ ನವಪ್ರಗತಿವಾದಿ ಎಂದೂ ಕರೆದರು. 'ಪಾಶ್', ಸುರಜೀತ್‌ಪಾತರ್, ಮೋಹನಜೀತ್, ಜೋಗಾಸಿಂಗ್, ಅಮರಜೀತ್ ಚಂದನ್ ಹರಜೀತ್ 'ಹಲವಾರಿ', ಗುರುದೀಪ್ 'ಗರೇವಾಲ', ದರ್ಶನ್ 'ಖಟ್ಕಡ್' ಮೊದಲಾದವರು ಈ ಗುಂಪಿಗೆ ಸೇರಿದವ ರಾಗಿದ್ದಾರೆ. ಸಾಮಾಜಿಕ ಗಹನ ಪ್ರಶ್ನೆಗಳಿಗೆ ಸಂಬಂಧಿಸದಂತೆ ವರ್ಗರಹಿತ 'ಅವಸ್ಥೆ'ಗಳಿಗೆ ಸಂಬಂಧಿಸಿದ ಬೇರೆ ಲೇಖಕ ವರ್ಗವೊಂದು ಇದೇ ಸಮಯದಲ್ಲಿ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿ ಜನಪ್ರಿಯತೆಯನ್ನು ಸಂಪಾದಿಸಿತ್ತು. ಡಾ|| ಹರಭಜನಸಿಂಗ್, ಜಸವಂತಸಿಂಗ್ 'ನೇಕಿ', ಹರನಾಮ, ಅರವಿಂದರ್ 'ರವಿ', ಸತಿಕುಮಾರ್ ಮೊದಲಾದವರು ಈ ಗುಂಪಿಗೆ ಸೇರಿದ್ದಾರೆ.

ವರ್ತಮಾನಕಾಲದ ಬಹುತೇಕ ಪಂಜಾಬಿ ಸಾಹಿತಿಗಳು ಮಧ್ಯಮ ವರ್ಗದಿಂದಬಂದ ವರಾಗಿದ್ದು, ವಿವಿಧ ಮಧ್ಯಮ ವರ್ಗೀಯ ಉದ್ಯೋಗಗಳೊಡನೆ ಸಂಪರ್ಕ ಹೊಂದಿದ್ದಾರೆ. ಪ್ರಗತಿವಾದಿ ವಿಚಾರಧಾರೆಯ ಮೂಲಕ ವರ್ಣರಹಿತ ಸಮಾಜವನ್ನು ಸೃಷ್ಟಿಸುವ ಅಭಿ

ಪ್ರಾಯದ ಕೆಲವು ಲೇಖಕರು ವಾಸ್ತವಿಕ ಜೀವನದಲ್ಲಿ ಜಾತೀಯತಾವಾದದ ಪ್ರತಿಪಾದಕರಾಗಿದ್ದುದು ಕಂಡುಬಂದಿದೆ. ಇದನ್ನು ನೋಡಿದರೆ ಪಂಜಾಬಿ ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಜಾತೀಯತೆಯನ್ನು ಯಾವ ವೈಜ್ಞಾನಿಕ ಸಮಾಜವಾದವೂ ಕೂಡ ಈ ಭಾವನೆಯನ್ನು ತೊಡೆಯುವುದು ಅಸಾಧ್ಯವೇನೋ ಎನ್ನುವಂತಾಗಿದೆ. ಪಂಜಾಬಿ ಸಾಹಿತ್ಯದ ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶಕ ಸಂತಸಿಂಗ್ 'ಶೇಖೋ' ಕಿಶನ್‌ಸಿಂಗ್ ಇವರು ಯಾವುದಾದರೂ ಸಾರ್ವಜನಿಕ ವೇದಿಕೆಯ ಮೇಲೆ ಅಥವಾ ಪತ್ರಿಕೆಯ ಮುಖಾಂತರ ಪರಸ್ಪರ ವಿಚಾರವಾದಿ ಹೋರಾಟ ನಡೆಸುತ್ತಿರುವಾಗ, ಕ್ರಮೇಣ ವಿಚಾರವಾದಿ ತಾರ್ಕಿಕತೆಯನ್ನು ಬಿಟ್ಟು 'ಜಟ್-ಅಜಟ್' ಅಥವಾ ಅನ್ಯಜಾತಿ ವಾದಿ ಚರ್ಚಾ ಚಕ್ರದಲ್ಲಿ ಸಿಲುಕಿ ನರಳುತ್ತಿರುವುದು ಕಂಡುಬಂದಿದೆ. ಈ ಕಾರಣದಿಂದಲೇ ಪಂಜಾಬಿ ಸಾಹಿತ್ಯದ ನವ್ಯ ಲೇಖಕರು, ಸಾಹಿತ್ಯ ಮತ್ತು ವೈಯುಕ್ತಿಕ ನಡತೆಯಲ್ಲಿ ಈ ಮೇಲ್ಕಂಡ ಪ್ರಭಾವದಿಂದ ಮುಕ್ತರಾಗಿರುವ ಲೇಖಕರ ಕಡೆ ಹೆಚ್ಚು ಆಕರ್ಷಿತರಾಗಹತ್ತಿದ್ದಾರೆ. ಗುರುದಯಾಲ್, ಈ ದೃಷ್ಟಿಕೋಣದಿಂದ ಅಧ್ಯಯನ ನಡೆಸಲು ಅರ್ಹವಾಗಿರುವ ಓರ್ವ ವಿಶಿಷ್ಟ ವ್ಯಕ್ತಿ. ಅವರು ತಮ್ಮ ಕಾದಂಬರಿಗಳಲ್ಲಿ ಮಾಳವಾ ವಿಭಾಗದ ಜಮೀನ್ದಾರೀ ಅವಶೇಷಗಳು ಹಾಗೂ ಸಾಮಾನ್ಯ ಜನತೆ ಅನುಭವಿಸುತ್ತಿರುವ ಕಷ್ಟಕೋಟಲೆಗಳ ಸಜೀವ ಚಿತ್ರಣ ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಇದು ಅವರ ಹಿರಿಮೆಗೆ ಸಾಕ್ಷಿಯಾಗಿದೆ. ಯಾವುದೇ ಸಮಾಜದ ವರ್ಗ ಸಂಘರ್ಷಣೆಯ ಯಥಾರ್ಥ ಚಿತ್ರಣ ಅದೇ ಸಮಾಜದ ಲೇಖಕನಿಂದ ಮಾತ್ರಸಾಧ್ಯ. ಈ ಸಿದ್ಧಾಂತದ ನೈಜ ಕಲ್ಪನೆ ಗುರುದಯಾಲಸಿಂಗ್‌ರಿಗಿದೆ ಎಂದರೆ ತಪ್ಪಾಗಲಾರದು. ಮಾರ್ಕ್ಸ್‌ವಾದಿ ದೃಷ್ಟಿಯಿಂದ ಸಮಕಾಲೀನ ಸಮಾಜದ ಯಶಸ್ವಿ ವಿಶ್ಲೇಷಣಕಾರರೆಂದೂ, ಆದರೆ ವೈಜ್ಞಾನಿಕ ಸಮಾಜವಾದವನ್ನು ಸರಿಯಾಗಿ ತಿಳಿಯದ ಮತ್ತು ನಾಟಕೀಯ ಪಾರಂಪರಿಕ ಆದರ್ಶವಾದಿಗರ ಪರಂಪರಗೆ ಸೇರಿದ ಜಸವಂತ್‌ಸಿಂಗ್ 'ಕಂವಲ್' ಮುತ್ತಿತರ ಅವಾಸ್ತವಿಕ ಸಂಪ್ರದಾಯಗಳನ್ನು ಗುರುದಯಾಲ್‌ಸಿಂಗ್ ನಿರ್ಭೀತಿಯಿಂದ ಖಂಡಿಸಿದ್ದಾರೆ.

ಗುರುದಯಾಲಸಿಂಗ್‌ರು ಪ್ರತಿಪಾದಿಸುವ ಪ್ರಜ್ಞೆಯ ಪ್ರಗತಿಗೆ ಪ್ರಮುಖ ಪಂಜಾಬಿ ಪ್ರಕಾಶಕರೂ ಅಡ್ಡಿಯಾಗಿದ್ದಾರೆ. ಈ ಪ್ರಜ್ಞೆ ಬೆಳೆದಿರುವ, ಬೆಳೆಸಿಕೊಳ್ಳುವ ಮನೋಭಾವವುಳ್ಳ, ಪ್ರಜ್ಞಾವಂತ ಓದುಗರ ಹಾಗೂ ಲೇಖಕರ ಪರಂಪರೆ ಇದ್ದರೂ ಪ್ರಕಟಣೆಯ ಅಡ್ಡಿ ಈ ಪ್ರಜ್ಞಾ ಬೆಳವಣಿಗೆಗೆ ಅಡ್ಡಿಯಾಗಿದೆ. ಆದರೆ ಬಹುಮಂದಿ ಲೇಖಕರು ಪ್ರಕಾಶಕರ ಇಚ್ಛೆಗನುಗುಣವಾಗಿ ಸಾಹಿತ್ಯ ರಚಿಸುತ್ತಾರೆಯೇ ಹೊರತು ಜನ ಸಾಮಾನ್ಯರ ಮೂಲಭೂತ ಸಮಸ್ಯೆಗಳ ಕಡೆ ಗಮನಹರಿಸುವುದೇ ಇಲ್ಲ. ಇದೊಂದು ವಿಷವರ್ತುಲ. ಇದರಿಂದ ಪಾರಾಗುವ ಬಗೆ ಹೇಗೆ? ಪ್ರಸಿದ್ಧ ಲೇಖಕಿ ಅಮೃತಪ್ರೀತಂ ತಮ್ಮ ಇತ್ತೀಚಿನ ಕೃತಿಗಳಲ್ಲಿ ಮೊದಲಿನಂತೆ ವರ್ಗ ವಿಶ್ಲೇಷಣೆಯನ್ನಾಗಲಿ, ಮೂಲಭೂತ ಸಮಸ್ಯೆಗಳನ್ನು ಕುರಿತಾಗಲೀ ವಿಚಾರಮಾಡದೆ, ಕೇವಲ ಭಾವನಾತ್ಮಕವಾದ ರೊಮಾಂಟಿಕ್ ಚಿತ್ರಣವನ್ನು ಕೊಡುತ್ತಿದ್ದಾರೆ. ಪ್ರಾಯಶಃ ವ್ಯಾವಹಾರಿಕ ಲಾಭ ಗಳಿಸಲು ಯತ್ನಿಸುವ ಪ್ರಕಾಶಕರೇ ಇದಕ್ಕೆ

ಕಾರಣರಾಗಿರಬೇಕು. ಆದರೆ ಪ್ರಸಿದ್ಧ ಲೇಖಕರೂ ಈ ವಿಷವರ್ತುಲದಲ್ಲಿ ಸಿಲುಕಬೇಕೇ? ಸಾಹಿತ್ಯವನ್ನು ಈ ವಿಷವರ್ತುಲದಿಂದ ಪಾರುಮಾಡುವ ಪ್ರಯತ್ನ ಪ್ರಮುಖರು ಮಾಡದೇ ಇನ್ನಾರು ಮಾಡಬೇಕು.

ನಾವು ಅಮೃತಾಪ್ರೀತಂರವರನ್ನು ಆಲೋಚಿಸುವುದು ಅವಶ್ಯಕವಾಗಿದೆ. ಸಾಮಾನ್ಯವಾಗಿ ಲೇಖಕಿಯರ ಕ್ಷೇತ್ರ ಸೀಮಿತವಾದುದೇನೋ ಎಂದು ಅನ್ನಿಸುತ್ತದೆ. ಇವರ ಪ್ರಕಾರ ಸಮಾಜ 'ಸ್ತ್ರೀ' 'ಪುರುಷ' ಎಂಬ ಎರಡು ವರ್ಗಗಳಾಗಿ ವಿಂಗಡಿಸಲ್ಪಟ್ಟಿದೆ. ದಿಲೀಪ್‌ಕೌರ್ 'ಟಿವಾನಾ' ಪ್ರಭು 'ಜೋತಕೌರ್' ಅಜೀತ್‌ಕೌರ್, ರಾಜೀಂದರ್‌ಕೌರ್, ಮನಜೀತ್ 'ಟಿವಾನಾ' ಮೊದಲಾದ ಲೇಖಕಿಯರು ಕೇವಲ ಈ ವರ್ಗಗಳನ್ನು ತಮ್ಮ ಗಮನದಲ್ಲಿಟ್ಟು ಕೊಂಡು ಮನೋ ವೈಜ್ಞಾನಿಕ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ. ಕೇವಲ ದಿಲೀಪ್‌ಕೌರ್, 'ಟಿವಾನಾ', ಹಳೆಯ ಜಮೀನ್ದಾರಿ ವರ್ಗ, ಈ ವರ್ಗದ ಪುರುಷ ಸ್ವಭಾವ, ಸ್ತ್ರೀಯರನ್ನು ಕುರಿತ ಇವರ ವರ್ತನೆ; ಸ್ತ್ರೀಯರ ಮೂಕವೇದನೆ, ಇವುಗಳ ನೈಜ ಚಿತ್ರಣವನ್ನು ತಮ್ಮ ಕೃತಿಗಳಲ್ಲಿ ಮೂಡಿಸಿದ್ದಾರೆ. ಪ್ರಾಯಶಃ ಉಳಿದ ಲೇಖಕಿಯರಿಗೆ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆಯ ಅವಶ್ಯಕತೆಯೇ ಕಂಡುಬಂದಿಲ್ಲವೇನೋ. ಇದರ ಫಲವಾಗಿ ವರ್ಗ ಚೇತನಾ ಪ್ರಗತಿಗೆ ಇವರಿಂದ ಇದುವರೆಗೆ ಗಮನಾರ್ಹವಾದ ಕೃತಿ ಬಂದಿಲ್ಲ ಎಂದು ಹೇಳಬಹುದು. ಮೇಲಾಗಿ ಸಾಮಾಜಿಕ ವ್ಯವಸ್ಥೆ ಕುರಿತು ಯೋಚಿಸುವ ಓದುಗರ ಮೇಲೆ ಇವರ ಪ್ರಭಾವವೂ ಕಡಿಮೆ.

ಮೇಲ್ಕಂಡ ಸಂಕ್ಷಿಪ್ತ ವಿಶ್ಲೇಷಣೆಯಲ್ಲಿ ನಾನು ಆಧುನಿಕ ಪಂಜಾಬಿ ಸಾಹಿತ್ಯವು ವೈಜ್ಞಾನಿಕ ಸಮಾಜವಾದದೊಡನೆ ಯಾವ ರೀತಿ ಸಂಬಂಧ ಹೊಂದಿದೆ ಎಂಬುದನ್ನು ವಿಶ್ಲೇಷಿಸಲು ಪ್ರಯತ್ನಿಸುತ್ತಿದ್ದೇನೆ. ವರ್ಗಭೇದ, ವರ್ಗಸಂಘರ್ಷ, ವರ್ಗಚೇತನ ಇವು ಗಳನ್ನು ನಮ್ಮ ಸಾಹಿತ್ಯವು ಹೇಗೆ ಪ್ರತಿಬಿಂಬಿಸುತ್ತದೆ, ಸಾಹಿತ್ಯಕವಾಗಿ ಈ ರೀತಿಯ ಕೃತಿಗಳ ಸ್ಥಾನಮಾನಗಳೇನು? ಎಂಬುದನ್ನು ವಿಶ್ಲೇಷಿಸುವ ಪ್ರಯತ್ನವನ್ನೂ ಮಾಡಿದ್ದೇನೆ. ಇತ್ತೀಚೆಗೆ ಪಂಜಾಬಿ ಸಾಹಿತ್ಯದಲ್ಲಿ ಎರಡು ವಿಚಾರಧಾರೆಗಳು ಉತ್ಪನ್ನವಾಗಿವೆ. ಒಂದು ಧಾರೆಯು ಸಮಾಜ ಶಾಸ್ತ್ರದ ದೃಷ್ಟಿಯಿಂದ ಸಾಮಾಜಿಕ ವ್ಯವಸ್ಥೆಗಳನ್ನು, ಸಾಹಿತ್ಯ ಸೃಷ್ಟಿಯ ಮೂಲ ಆಧಾರವನ್ನಾಗಿ ಇಟ್ಟುಕೊಂಡರೆ, ಇನ್ನೊಂದು ವಿಚಾರ ಧಾರೆಯು ಸಾಹಿತ್ಯ ಸೃಷ್ಟಿಯ ಪ್ರಶ್ನೆಯನ್ನೇ ಮೂಲ ಆಧಾರವಾಗಿಟ್ಟುಕೊಳ್ಳುತ್ತದೆ. ಎರಡನೆಯದು ಇತಿಹಾಸ ಹಾಗೂ ಸಾಮಾಜಿಕ ಪ್ರಜ್ಞೆಯೂ ಸಾಹಿತ್ಯ ಸೃಷ್ಟಿಗೆ ಅವಶ್ಯವೆಂಬುದನ್ನು ಒಪ್ಪುತ್ತದೆ. ಹಾಗೆಯೇ ಮೊದಲನೆಯದು ಸಾಮಾಜಿಕ ಪ್ರಜ್ಞೆಯ ಅರಿವಿನ ಜೊತೆಗೆ ಸಾಹಿತ್ಯ ಸೃಷ್ಟಿಯ ಮೂಲಭೂತ ಪ್ರಜ್ಞೆಗಳ ಅರಿವಿರಬೇಕೆಂಬುದನ್ನೂ ಒಪ್ಪುತ್ತದೆ. ಒಟ್ಟಿನಲ್ಲಿ ಸಾಹಿತ್ಯವನ್ನು ವರ್ಗಭೇದ ಸಮಸ್ಯೆಯ ಮೈಕ್ರೊಸ್ಕೋಪಿನಲ್ಲಿ ನೋಡುವುದು ಯಾವುದೇ ಸಾಹಿತ್ಯಕ್ಕೂ ಸಮಸ್ಯೆಯೇ ಸರಿ. ಈ ಸಮಸ್ಯೆಯನ್ನು ಬಗೆಹರಿಸಲು ನಾವು ಸಾಹಿತ್ಯದ ಮೂಲ ಸಂಬಂಧವನ್ನು ದೇಶಕಾಲದೊಡನೆ ಹೊಂದಿಸಿಕೊಂಡಾಗಲೂ ಸಾಧ್ಯವಾಗದಿರಬಹುದು. ಈ ಸಮಸ್ಯೆಯನ್ನು ಬಗೆಹರಿಸು ವುದೇ ಪಂಜಾಬಿ ನವಯುವಕ ಸಾಹಿತ್ಯ ಪೀಳಿಗೆಯ ಕರ್ತವ್ಯವಾಗಿದೆ.

ಡಾ॥ ಮುಹಮುದ್
ಹಸನ್

# ಉರ್ದು ಸಾಹಿತ್ಯ: ವರ್ಗನೆಲೆ

ಇಂದಿನ ಉರ್ದು ಸಾಹಿತ್ಯದ ವರ್ಗನೆಲೆಯನ್ನು ಚರ್ಚಿಸುವ ಮೊದಲು ಹದಿಮೂರನೆ ಶತಮಾನದಲ್ಲಿ ಭಾರತಕ್ಕೆ ಬಂದ ಉರ್ದುಭಾಷೆಯ ಪ್ರಾರಂಭವನ್ನು ಗಮನಿಸಬೇಕಾಗುತ್ತದೆ. ವಾಸ್ತವವಾಗಿ ಉರ್ದು ಭಾಷೆಯು ಇರಾನ್, ತುರ್ಕಿ ಮತ್ತು ಮಧ್ಯ ಏಷಿಯಾದ ನಾಗರಿಕತೆಗಳ ಕೆಲವು ಸಾಂಸ್ಕೃತಿಕ ಮತ್ತು ಭಾರತೀಯ ಅಂಶಗಳ ಸಂಯೋಗದಿಂದ ಹುಟ್ಟಿದ್ದಾಗಿದೆ. ಆದ್ದರಿಂದ ಉರ್ದು ಸಾಹಿತ್ಯದ ಸಾಂಸ್ಕೃತಿಕ ವರ್ಗನೆಲೆಯು ಆ ಕಾಲದಲ್ಲಿ ಪ್ರಚಲಿತವಾಗಿದ್ದ ವಿವಿಧ ಸಂಸ್ಕೃತಿಯ ಮಿಶ್ರಣದ ಸ್ವಭಾವನನ್ನು ಪ್ರತಿಬಿಂಬಿಸುತ್ತದೆ. ಇಂಥ ಸಾಂಸ್ಕೃತಿಕ ಸಂದರ್ಭ ಆ ಕಾಲದ ಸಾಮಾಜಿಕ ಆರ್ಥಿಕ ವ್ಯವಸ್ಥೆಯಿಂದ ಹುಟ್ಟಿಕೊಂಡದ್ದಾದ್ದರಿಂದ ಅದು ಆಗ್ಗೆ ಸಹಜವಾಗಿಯೇ ಇತ್ತು. ಇಸ್ಲಾಂ ಧರ್ಮದಲ್ಲಿ ನಿಷ್ಠೆಯನಿಟ್ಟುಕೊಂಡಿದ್ದ ಭಾರತೀಯ ಆಳುವ ಪ್ರಭುಗಳು ಇಸ್ಲಾಂ ಧರ್ಮದ ಖಲೀಫರ ಕೇಂದ್ರೀಕೃತ ಅಧಿಕಾರದಿಂದ ಬಿಡಿಸಿಕೊಳ್ಳಲು ಒಂದು ಹೊಸ ತಾತ್ವಿಕ ನೆಲೆಯನ್ನು ಹುಡುಕಬೇಕಾಗಿತ್ತು. ಅವರ ಸ್ವತಂತ್ರ ತೀರ್ಮಾನಗಳಿಗೆ ಮತ್ತು ರಾಜಕೀಯ ಅನುಭವಗಳ ಸಮರ್ಥನೆಗೆ ಇಂಥ ತಾತ್ವಿಕ ನೆಲೆ ಅವಶ್ಯಕವಾಗಿತ್ತು. ಈ ತಾತ್ವಿಕ ನೆಲೆಗೆ ರಹಸ್ಯವಾದ (Mysticism) ತುಂಬ ಉಪಯೋಗಕಾರಿಯಾಗಿ ದೊರೆಯಿತು. ವಾಸ್ತವವಾಗಿ ಈ ರಹಸ್ಯವಾದವು ಇಸ್ಲಾಂ ಧರ್ಮದ ಕೇಂದ್ರೀಕೃತ ಧಾರ್ಮಿಕ ಆಚರಣೆಗಳನ್ನು ತಿರಸ್ಕರಿಸಿ ಅದರಿಂದ ಅವರು ಕೇಂದ್ರೀಕೃತ ಇಸ್ಲಾಂ ಧರ್ಮದ ಅಧಿಕಾರ ಪೀಠದ ಹಿಡಿತದಿಂದ ಸ್ವತಂತ್ರರಾಗಲು ಸಮರ್ಥನೆಯನ್ನು ಒದಗಿಸಿತು.

ಉರ್ದು ರಹಸ್ಯವಾದಿಗಳು ಎತ್ತಿಹಿಡಿದ ಈ ಸಾಂಸ್ಕೃತಿಕ ಸಂಯೋಗದ ಸಂದರ್ಭವೇ ಗಜಲ್‌ಗಳ ಭಾವಧಾರೆ ಮತ್ತು ವಿಶಿಷ್ಟ ಆಯ್ಕೆಯ ಪ್ರತಿಮೆಗಳನ್ನೊಳಗೊಂಡ ಉರ್ದು ಸಾಹಿತ್ಯದ ಹುಟ್ಟು ಎನ್ನಬಹುದು. ಮುಸ್ಲಿಂ ರಹಸ್ಯವಾದಿಗಳು ವಿಶಾಲವಾದ ಜಾಗತಿಕ ದೃಷ್ಟಿಯನ್ನು ಮತ್ತು ಮಾನವನ ಐಕ್ಯ ಭಾವನೆಯ ಅಗತ್ಯತೆಯನ್ನು ಒತ್ತಿ ಹೇಳಿದರಲ್ಲದೆ ಧಾರ್ಮಿಕ ವಿಭಾಗಗಳನ್ನು ಖಂಡಿಸಿ ಮಾನವೀಯತೆಗೆ ಪ್ರಾಧಾನ್ಯವನ್ನು ಕೊಟ್ಟರು. ಇದರಿಂದಾಗಿ ಉರ್ದು ಸಾಹಿತ್ಯದಲ್ಲೂ ಭಕ್ತಿಪಂಥದ ಚಳುವಳಿಯಲ್ಲೂ ಇಂಥ ಧೋರಣೆಯು ಸಹಜವಾಗಿಯೇ ಸೇರಿಕೊಂಡಿತು. ಭಕ್ತಿಪಂಥದ ಚಳುವಳಿಯ ಹುಟ್ಟು ಮತ್ತು ಚಳುವಳಿಗೂ ಮತ್ತು ಹದಿಮೂರನೆಯ ಉರ್ದು ಸಾಹಿತ್ಯದ ಹುಟ್ಟು, ಬೆಳವಣಿಗೆಗೂ ಭಾರತೀಯ ಇತಿಹಾಸದಲ್ಲಿ ಒಂದು ಚಾರಿತ್ರಿಕ ಘಟ್ಟದ ಅಂತರವಿದೆ. ಇತಿಹಾಸದ ಈ ಕಾಲಾವಧಿಯಲ್ಲಿ ಭಾರತದಲ್ಲಿ ಆಡಳಿತದ ಉದ್ದೇಶಗಳಿಗಾಗಿ ಕೇಂದ್ರೀಕೃತ ಅಧಿಕಾರದ ವ್ಯವಸ್ಥೆ ರೂಪುಗೊಳ್ಳುತ್ತಿತ್ತು. ಅಲ್ಲಾವುದ್ದೀನ್ ಖಿಲ್ಜಿಯ ಕಾಲದಿಂದ

ಅಕ್ಬರ್ ಕಾಲದವರೆಗೂ ಆಗಿನ ಆಳುವ ಪ್ರಭುಗಳು ಇಂಥ ಕೇಂದ್ರೀಕೃತ ಆಳ್ವಿಕೆಯನ್ನು ಬಯಸುತ್ತಿದ್ದುದು ಕಂಡುಬರುತ್ತದೆ. ಇಂಥ ಆಳ್ವಿಕೆಯು ಜನರಲ್ಲಿ ಒಂದು ರೀತಿಯ ಭಾವನಾ ಐಕ್ಯತೆಯನ್ನು ಮತ್ತು ತ್ತಾತ್ವಿಕ ಸಮಾನತೆಯನ್ನು ಮಾನವೀಯತೆಯಂಥ ವಿಶಾಲ ತಳಹದಿಯ ಆಧಾರದ ಮೇಲೆ ರೂಪಿಸಿಕೊಳ್ಳುವುದು ಸಹಜವಾಗಿತ್ತು. ಇದೇ ಉರ್ದು ಸಾಹಿತ್ಯಕ್ಕೆ ಆಧಾರವೆಂದು ನನ್ನ ನಂಬಿಕೆ. ಆದ್ದರಿಂದಲೇ ಉರ್ದು ದೆಹಲಿಯ ಸುತ್ತಮುತ್ತಿನ ಪ್ರದೇಶಗಳಲ್ಲಿ ಮಾತ್ರ ವಲ್ಲದೆ ದಕನ್, ಗುಜರಾತ್ ಮುಂತಾದ ಕಡೆಯೂ ಜನಾದಾರಣೀಯವಾಗಿ ಬೆಳೆಯಿತು. ಉರ್ದು ಸಾಹಿತ್ಯದ ಸಂದೇಶವನ್ನು ಹೊತ್ತ ಮುಸ್ಲಿಂ ರಹಸ್ಯವಾದಿಗಳು ರಹಸ್ಯಾತ್ಮಕ ಪ್ರತಿಮೆಗಳನ್ನು ಬಳಸಿಕೊಂಡು ಗಜಲ್‌ಗಳನ್ನು ಪುರಾಣಪ್ರಸಿದ್ಧ ಸಂಗತಿಗಳನ್ನು ಕುರಿತ ಹಾಡುಗಳನ್ನು ಬರೆದುದಲ್ಲದೆ ಅವುಗಳಿಗೆ ಹೊಸ ಸಾಂದರ್ಭಿಕ ಅರ್ಥಗಳನ್ನು ಕೊಟ್ಟರು. ಹೀಗೆ ಮುಸ್ಲಿಂ ಧರ್ಮದ ರಹಸ್ಯವಾದಿಗಳು ತಾವು ಹೋದ ಕಡೆಯಲ್ಲೆಲ್ಲ ಉರ್ದು ಸಾಹಿತ್ಯವನ್ನು ಮುಖ್ಯವಾಗಿ, ಉರ್ದುಕಾವ್ಯವನ್ನೂ ಪಸರಿಸುತ್ತ ಹೋದರು. ಕ್ರಮೇಣ ಹೀಗೆ ನಡೆಯುತ್ತಿದ್ದ ಪ್ರಸಾರ ಚಟುವಟಿಕೆಗಳು ಕ್ಷೀಣಿಸಿದುವಲ್ಲದೆ ಮೊಗಲ್ ಸಾಮ್ರಾಜ್ಯದ ಉನ್ನತಿ ಕೇಂದ್ರಿಕೃತ ವ್ಯವಸ್ಥೆಯನ್ನು ಹೆಚ್ಚು ಜನಾದಾರಣೀಯಗೊಳಿಸಿದ್ದೂ ಅಲ್ಲದೆ ಅದನ್ನು ಸದೃಢಗೊಳಿಸಿತು. ಇಂಥ ಕೇಂದ್ರೀಕೃತ ಆಡಳಿತ ಪ್ರಕ್ರಿಯೆಯಿಂದಾಗಿ ಕೆಲವು ಹೊಸ ನಗರ ಕೇಂದ್ರಗಳು ಹುಟ್ಟಿಕೊಂಡವು. ಇದು ಕೇವಲ ಸಾಂಸ್ಕೃತಿಕ ಅವಶ್ಯಕತೆಯಾಗಿರದೆ ಅಂದಿನ ವಾಣಿಜ್ಯದ ಅವಶ್ಯಕತೆಯೂ ಆಗಿತ್ತು. ಮಧ್ಯಯುಗದ ಭಾರತ ಮತ್ತು ಮೊಗಲ್ ಇಂಡಿಯಾದ ಕಾಲದಲ್ಲಿನ ನಗರಗಳು ಆಡಳಿತ ಕೇಂದ್ರಗಳು ಮಾತ್ರವಾಗಿರದೆ ವಾಣಿಜ್ಯ ಕೇಂದ್ರಗಳೂ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕೇಂದ್ರಗಳು ಆಗಿದ್ದವು. ಶ್ರೀಮತಿ ಹಮಿದಾ ನಕ್ವಿ ಅವರು ತಮ್ಮ "ಮಧ್ಯಯುಗದ ಭಾರತದ ನಗರಪ್ರದೇಶ ಮತ್ತು ಅವುಗಳ ಬೆಳವಣಿಗೆ" ಎನ್ನುವ ಪುಸ್ತಕದಲ್ಲಿ ಹೇಳುವಂತೆ, ಮಧ್ಯಯುಗದ ಭಾರತ ಮೂರು ರೀತಿಯ ನಗರಗಳನ್ನು ಹೊಂದಿದ್ದಿತು. 1) ಆಡಳಿತ ಕೇಂದ್ರದ ನಗರಗಳು 2) ವಾಣಿಜ್ಯ ವ್ಯವಹಾರ ಕೇಂದ್ರದ ನಗರಗಳು 3) ಸಾಂಸ್ಕೃತಿಕ ಅಥವಾ ಶೈಕ್ಷಣಿಕ ಕೇಂದ್ರದ ನಗರಗಳು. ಈ ರೀತಿ ನಗರ ಪ್ರದೇಶಗಳ ಬೆಳವಣಿಗೆಗಳು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಕುಶಲ ಕೆಲಸಗಾರರನ್ನು ನಗರಗಳತ್ತ ಆಕರ್ಷಿಸಿದ್ದವು. ಹೀಗೆ ನಗರಗಳಲ್ಲಿ ಬಂದು ನೆಲಸಿದ ಹಳ್ಳಿಯ ಕುಶಲ ಕೆಲಸಗಾರರಿಗೆ ಒಂದು ಹೊಸ ಸಂಸ್ಕೃತಿ, ಹೊಸರೀತಿಯ ಸಾಹಿತ್ಯದ ಅವಶ್ಯಕತೆ ಉಂಟಾಯಿತು. ಕುಶಲಕರ್ಮಿಗಳು ಹಾಗೂ ಉತ್ಪಾದನೆಯಲ್ಲಿ ತೊಡಗಿದ್ದ ಇತರ ಕೆಲಸಗಾರರು, ಪಂಡಿತರು, ಬರಹಗಾರರು, ಕವಿಗಳು ಮತ್ತೆ ಇಸ್ಲಾಂ ಧರ್ಮದ ರಹಸ್ಯವಾದಿಗಳು ತಮ್ಮ ಕಾಲದ ಬೌದ್ಧಿಕ ದಾಹವನ್ನು ತಣಿಸಲು ಅನೇಕ ರೀತಿಯಲ್ಲಿ ಪ್ರಯತ್ನಿಸುತ್ತಿದ್ದರು. ಇದರಿಂದಾಗಿ ಉರ್ದು ಸಾಹಿತ್ಯ ನಿರ್ಮಾಣದಲ್ಲಿ ಕುಶಲಕರ್ಮಿಗಳು ಬಹು ಸಂಖ್ಯೆಯಲ್ಲಿ ಪಾಲುಗೊಂಡರು. ಇಲ್ಲವೆ ತಮ್ಮ ಸಾಂಸ್ಕೃತಿಕ ಹಾಗೂ ಭೌದ್ಧಿಕ ಚಟುವಟಿಕೆಗಳನ್ನು ನಡೆಸಲು ಉರ್ದುವನ್ನು ಉಪಯೋಗಿಸಿಕೊಂಡರು.

ಭಾರತಕ್ಕೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಆಗಮನ ನಗರ ಪ್ರದೇಶಗಳ ಬೆಳವಣಿಗೆಯ ಮೇಲೆ ಅಗಾಧ ಪರಿಣಾಮ ಬೀರಿತು. ಈಸ್ಟ್ ಇಂಡಿಯ ಕಂಪನಿಯು ಭಾರತದ ವಾಣಿಜ್ಯ ವ್ಯವಹಾರವನ್ನು ಗುತ್ತಿಗೆ ಮಾಡಿಕೊಂಡಿತು. ಹೀಗೆ ಭಾರತದ ಹಣ ಮತ್ತು ಐಶ್ವರ್ಯ ಅದರ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಬೆಳವಣಿಗೆಗೆ ದಕ್ಕಬೇಕಾಗಿದ್ದುದು ಇಂಗ್ಲೆಂಡಿಗೆ ಹರಿಯತೊಡಗಿತು. ಪರಿಣಾಮವಾಗಿ ವಾಣಿಜ್ಯ ಹಾಗೂ ಕೈಗಾರಿಕಾಕೇಂದ್ರಗಳ ಅವನತಿಯೊಂದಿಗೆ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಕ್ಷೀಣಗೊಂಡವು. ಆದ್ದರಿಂದ ಹದಿನೆಂಟನೆ ಶತಮಾನದ ಉರ್ದು ಸಾಹಿತ್ಯದಲ್ಲಿ ನಗರಗಳ ಅವನತಿಯನ್ನು ಚಿತ್ರಿಸುವ ಶೋಕಗೀತೆಗಳು ಕುಶಲಕರ್ಮಿಗಳ ಕ್ಷೀಣದೆಸೆಯನ್ನು ಚಿತ್ರಿಸುವ ಕಾವ್ಯಗಳು ಕಾಣಸಿಗುತ್ತವೆ. ಅಂದಿನ ಪ್ರಸಿದ್ಧ ಕವಿ ಮೀರ್-ತಾಕಿ-ಮೀರ್ ಅವರು ಇಂಥ ಸಂದರ್ಭವನ್ನು ಕುರಿತು ಹೀಗೆ ಬರೆದರು.

'ಕುಶಲಕರ್ಮಿಗಳೆಲ್ಲಾ ಕ್ಷೀಣದೆಸೆಗಿಳಿದಿದ್ದಾರೆ. ಅವರಾದರೋ ಕಷ್ಟಸಹಿಷ್ಣುಗಳು ನಾನೂ ಅವರಲ್ಲೊಬ್ಬ'. ಅನೇಕಾನೇಕ ಉರ್ದು ಕವಿಗಳು ತಾವು ಕೆಲಸಗಾರರ ವರ್ಗಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಮತ್ತು ಕೆಲಸಗಾರರ ವರ್ಗದ ಕಲ್ಯಾಣವೇ ತಮ್ಮ ಗುರಿಎಂದಿದ್ದಾರೆ. ಅವರು ಕೆಲಸಗಾರರು ಹಾಗೂ ಕುಶಲ ಕೆಲಸಗಾರರ ದುಡಿಮೆ ಸಂತೋಷ ಮತ್ತು ದುಃಖವನ್ನು ಹತ್ತಿರದಿಂದ ನೋಡಿ ತಮ್ಮ ಅನುಭವಕ್ಕೆ ತಂದುಕೊಂಡವರಾಗಿದ್ದಾರೆ. ಮತ್ತು ಅದನ್ನು ಸಮರ್ಥವಾಗಿ ತಮ್ಮ ಸಾಹಿತ್ಯ ಮಾಧ್ಯಮದಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ.

ಬ್ರಿಟಿಷರ ಆಗಮನ ಹಾಗೂ ಆಳ್ವಿಕೆ ಬೇರು ಬಿಡುತ್ತಿದ್ದಂತೆ ಅದರ ಪ್ರಭಾವದಿಂದ ಹೊಸಶಕ್ತಿಗಳು ಹುಟ್ಟಿ ಇದರಿಂದ ಭಾರತೀಯ ಸಮಾಜದ ಗುರಿ ಮತ್ತು ಸ್ವರೂಪವೇ ಬದಲಾಯಿಸಲಾರಂಭಿಸಿತು. ಹಳೆಯ ವ್ಯವಸ್ಥೆ ಕುಸಿಯಿತು. ಹೊಸ ವರ್ಗಗಳು ಹುಟ್ಟಿ ಪ್ರಪ್ರಬಲ ಶಕ್ತಿಗಳಾಗಿ ಬೆಳೆಯತೊಡಗಿದವು. ಜಗತ್ ಸೇಟುಗಳು, ಲೇವಾದೇವಿಗಾರರು, ದೊಡ್ಡ ವಾಣಿಜ್ಯೋದ್ಯಮಿಗಳು ಹಾಗೂ ವರ್ತಕರು ಮುಂತಾದವರು ಒಂದು ವರ್ಗವಾಗಿ ಹುಟ್ಟಿಕೊಂಡರು. ಈ ವರ್ಗ ಬ್ರಿಟಿಷರ ಆಳ್ವಿಕೆಯನ್ನು ಪ್ರಬಲವಾಗಿ ಸಮರ್ಥಿಸಿತು. ಬ್ರಿಟಿಷರಿಗೂ ಸಿರಾಜುದ್ದೌಲನಿಗೂ ನಡೆದ ಕದನದಲ್ಲಿ ಬ್ರಿಟಿಷರ ವಿಜಯಕ್ಕೆ ಬಂಗಾಳದ ಜಗತ್‌ಸೇಟುಗಳ ಬೆಂಬಲವೇ ಕಾರಣ ಎಂಬುದು ಈಗ ಎಲ್ಲರಿಗೂ ಗೊತ್ತಿರುವ ಗುಟ್ಟಾಗಿದೆ. ಇಂಥ ದುರಂತಗಳು, ಪಟ್ಟಣಗಳ ಶೀಘ್ರ ಬೆಳವಣಿಗೆ, ಮತ್ತು ಭಾರತೀಯ ಕೈಗಾರಿಕಾ ಹಾಗೂ ವಾಣಿಜ್ಯ ಚಟುವಟಿಕೆಗಳಿಗೂ ಗ್ರಹಣ ಹಿಡಿದಂತಾಯಿತು. ಉಸಿರು ಕಟ್ಟಿಸುವಂಥ ಆಗಿನ ಸಾಂಸ್ಕೃತಿಕ ಪರಿಸರವನ್ನು ಅದರಿಂದ ಉಂಟಾದ ಜಿಗುಪ್ಸೆ ಮನೋಭಾವವನ್ನು, ಮತ್ತು ಬದಲಾವಣೆಯನ್ನು ಬಯಸುವ ಕಾತರದ ದನಿಯನ್ನು ಮೀರ್ ಕವಿ ಹಾಗೂ ಆತನ ಸಮಕಾಲೀನರಾದ ಸೌದಾ, ದರ್ದ್, ಹಾತಿಮ್ ಖಾಯಮ್ ಮುಂತಾದ ಕವಿಗಳಲ್ಲಿ ಕಾಣಬಹುದು. ಆ ಬದಲಾವಣೆಗೆ ಅವರು ಯಾವ ಕಾರ್ಯಕ್ರಮ ಹಾಕಿಕೊಂಡರೂ ಅದು ಯಾವುದು ನಮಗೆ ಗೊತ್ತಿಲ್ಲವಾದರೂ ಆ ಸಾಂಸ್ಕೃತಿಕ [illegible]

ದಾಟಿ ಬದಲಾವಣೆಯನ್ನು ತರಬೇಕೆಂಬ ಕಾತರ ಅವರಲ್ಲಿತ್ತು. ಹೆಚ್ಚು ಕಡಿಮೆ ಈ ಸಂದರ್ಭದಲ್ಲಿ ಕವಿಗಳೆಲ್ಲಾ ಕೆಲಸಗಾರರು ಅಥವಾ ಕುಶಲ ಕೆಲಸಗಾರರ ವರ್ಗ ಹಾಗೂ ಬಳಗದಿಂದ ಬಂದವರೇ ಆಗಿದ್ದರು. ಇವರಲ್ಲಿ ಕೂಲಿಗಾರ ಕವಿಗಳು ಮಾತ್ರವಲ್ಲದೆ. ಅವರ ಜೊತೆ ಜೊತೆಯಲ್ಲಿಯೇ ಆಗಿನ ಸಮಾಜದ 'ಗೌರವಾನ್ವಿತ' ಹಾಗೂ ಪ್ರತಿಷ್ಠಿತ' ವರ್ಗಕ್ಕೆ ಹಾಗೂ ಸಂಸಾರಗಳಿಗೆ ಸೇರಿದ ಕವಿಗಳೂ ಏಳಿಗೆ ಪಡೆಯುತ್ತಿದ್ದರು. ಕಾರ್ಲ್ ಮಾರ್ಕ್ಸ್ ತನ್ನ ಗ್ರಂಥ "ಸಮತಾವಾದಿ ಧ್ಯೇಯ ಘೋಷಣೆ"ಯಲ್ಲಿ ಹೇಳುವಂತೆ "ಕೈಗಾರಿಕಾ ಸಮಾಜವು ಏಳಿಗೆಯನ್ನು ಪಡೆಯುತ್ತಿದ್ದಂತೆಯೇ ಬರಹಗಾರರು ವಿದ್ವಾಂಸರು ಬಂಡವಾಳಷಾಹಿಯ ಸಮಾಜದಲ್ಲಿ ಕೂಲಿ ಕೆಲಸಗಾರರಾಗಿಬಿಡುತ್ತಾರೆ." ಅನ್ನುವ ಘಟ್ಟವನ್ನು ಆಗ ಸಮಾಜ ತಲುಪಿರಲಿಲ್ಲ. ಇದರಿಂದಾಗಿ ಆಗಿನ ಉರ್ದು ಸಾಹಿತ್ಯದಲ್ಲಿನ ಬರವಣಿಗೆಯನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ಅವರ ಹತಾಶಭಾವನೆಯನ್ನು ಕಾಣಬಹುದು. ಕಾರಣ ಬ್ರಿಟಿಷರ ನೆಲೆ ಭದ್ರವಾದ ಹಾಗೆಲ್ಲಾ ಭಾರತದ ಆರ್ಥಿಕ ಹಾಗೂ ವಾಣಿಜ್ಯ ದುಸ್ಥಿಗಿಳಿತಿಯಿತು. ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಪೋಷಕರುಗಳಾಗಿದ್ದ ಈ ವರ್ಗವೇ ದುರ್ಬಲವಾಯಿತು. 'ಗೌರವಾನ್ವಿತ' ಹಾಗೂ ಕುಶಲ ಕಸುಬಿನ ಕುಟುಂಬದಿಂದ ಬಂದ ಆಗಿನ ಉರ್ದು ಸಾಹಿತಿಗಳು ತಮ್ಮ ಕುಶಲಕೃತಿಗೆ ಮಾರುಕಟ್ಟೆಯನ್ನಾಗಲೀ, ಅಥವಾ ತಮ್ಮ ಸಾಹಿತ್ಯಕ್ಕೆ ಪೋಷಕರನ್ನಾಗಲೀ ಕಾಣಲಿಲ್ಲ. ಹಾಗೆ ಸಾಹಿತ್ಯಕ್ಕೆ ಪೋಷಣೆಯನ್ನು ಕುಶಲಕಸುಬಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದ ಭಾರತೀಯ ವಾಣಿಜ್ಯ ಹಾಗೂ ಆರ್ಥಿಕ ವ್ಯವಹಾರದ ವರ್ಗವು ಬ್ರಿಟಿಷರ ಆಗಮನ ಹಾಗೂ ನೆಲೆಯಿಂದ ದುರ್ಬಲಗೊಂಡಿದ್ದವು.

ಬ್ರಿಟಿಷರ ಆಳ್ವಿಕೆ ಶಾಶ್ವತ ಆದಹಾಗೆಲ್ಲಾ ಅದು ಒಂದು ಹೊಸ ವರ್ಗವನ್ನೇ ಸೃಷ್ಟಿಸಿತು. ಇದೇ ಮಧ್ಯಮವರ್ಗ. ಬ್ರಿಟಿಷರ ಆಡಳಿತ ಹಾಗೂ ವಾಣಿಜ್ಯ ಕಛೇರಿಗಳಾದ ಉದಾ: ಕೋರ್ಟು, ಭಾಷಾಂತರ ಇಲಾಖೆ, ಅಂಚೆ-ತಂತಿ ಇಲಾಖೆಯ ನೌಕರರು ಹಾಗೂ ಇತರ ಕಛೇರಿಗಳಲ್ಲಿನ ನೌಕರರು, ಶೈಕ್ಷಣಿಕ ಕೇಂದ್ರ ಹಾಗೂ ವಿದ್ಯಾಭ್ಯಾಸ ಇಲಾಖೆಗೆ ಸೇರಿದ ಉಪಾಧ್ಯಾಯರು ಹಾಗೂ ನೌಕರರು ಈ ಮಧ್ಯಮ ವರ್ಗದ ಮುಖ್ಯ ಭಾಗವಾದರು. ಈ ವರ್ಗದಿಂದ ಬಂದ ಸಾಹಿತಿಗಳು ಅಲ್ಲಲ್ಲಿ ಕಾಣಿಸಿಕೊಂಡರು. ಉದಾಹರಣೆಗೆ, ಪ್ರಮುಖ ಉರ್ದು ಸಾಹಿತಿಗಳಲ್ಲೊಬ್ಬರಾದ ಸರ್ ಸೈಯ್ಯದ್ ಅಹಮದ್ ಖಾನ್ ಅವರು ಒಬ್ಬ ಸರಕಾರಿ ಅಧಿಕಾರಿಯಾಗಿದ್ದರು. ಮೌಲಾನ ಮುಹಮ್ಮದ್‌ಹುಸೇನ್ ಆಜಾದ್ ಅವರು ಪಂಜಾಬಿನ ಅಂಜುಮಾನ್ (ಈ ವಿದ್ಯಾಸಂಸ್ಥೆಯೇ ಉರ್ದು ಭಾಷೆಯ ಪಠ್ಯ ಪುಸ್ತಕವನ್ನು ತಯಾರಿಸುತ್ತಿದ್ದುದು) ಮೌಲಾನ ಆಲಫ್ ಹುಸೇನ್ ಆಲಿ ಅವರು ವಿದ್ಯಾಭ್ಯಾಸ ಇಲಾಖೆಗೆ (ಅಲಿಘರ್ ವಿಶ್ವವಿದ್ಯಾನಿಲಯದಲ್ಲಿ ಉರ್ದು ಭಾಷಾ ಬೋಧನೆಯಲ್ಲಿ ತೊಡಗಿದ್ದರು). ಆಗಿನ ಹೆಚ್ಚಿನ ಉರ್ದು ಸಾಹಿತಿಗಳು ಈ ರೀತಿ ನೇರವಾಗಿ ಉಪಾಧ್ಯಾಯ ವೃತ್ತಿಯಿಂದ ಬಂದವರು ಅಥವಾ ಆ ವೃತ್ತಿಗೆ ಸಂಬಂಧಿಸಿದಂತೆ ಇರುವ ಉದ್ಯೋಗಗಳನ್ನು ಅವಲಂಬಿಸಿದವರೇ ಆಗಿದ್ದರು. ಹೀಗೆ 1857ರ ನಂತರ ಬಂದ ಹೊಸ ವರ್ಗದ ಸಾಹಿತಿ

ಗಳು ಒಂದಲ್ಲ ಒಂದು ರೀತಿಯಲ್ಲಿ ಬ್ರಿಟಿಷರ ಆಡಳಿತ ವ್ಯವಹಾರಗಳಲ್ಲಿ ಪಾಲು ತೆಗೆದು ಕೊಂಡಿದ್ದವರು ಇಲ್ಲವೇ ಬ್ರಿಟಿಷ್ ಆಡಳಿತ ವ್ಯವಸ್ಥೆಯನ್ನು ಭಾರತದಲ್ಲಿ ಬಲಪಡಿಸಲು ಸಿದ್ಧರಾಗಿದ್ದ ಜನರು. ಇವರು ಒಂದು ರೀತಿಯ ದಂದ್ವಕ್ಕೊಳಗಾಗಿದ್ದರು. ಬ್ರಿಟಿಷರನ್ನು ಬೆಂಬಲಿಸುವುದರಿಂದ, ಗಳಿಸುತ್ತಿದ್ದ ಸಾಮಾಜಿಕ ಸ್ಥಾನಮಾನ ಮತ್ತು ಆರ್ಥಿಕ ಭದ್ರತೆ ಒಂದುಕಡೆ ತುಯ್ದರೆ, ಆಡಳಿತದಲ್ಲಿ ತಾವೂ ಅಧಿಕಾರಯುತ ಪಾಲುಗೊಳ್ಳಬೇಕೆಂಬ ಆಸೆ ಇನ್ನೊಂದು ಕಡೆಯಿಂದ ತುಯ್ಯುತಿತ್ತು. ಈ ಇಬ್ಬಗೆಯ ಗೊಂದಲದಿಂದ ಈ ವರ್ಗ ಒಂದು ರೀತಿಯ ಮಾನಸಿಕ ಘರ್ಷಣೆಗೆ ಒಳಗಾದರು. ಆಡಳಿತದಲ್ಲಿ ಬಹುಪಾಲು ಭಾರತೀಯರ ಪಾಲನ್ನು ಈ ವರ್ಗವು ಅಲ್ಲಗೆಳೆಯುವುದರ ಮೂಲಕ ಬ್ರಿಟಿಷರ ಬೆಂಬಲವನ್ನು ಗಳಿಸಲು ಪ್ರಯತ್ನಪಟ್ಟು ಹೀಗೆ ಒಂದಲ್ಲ ಒಂದು ನೆಪ ಹಾಕಿ ತನ್ನ ವರ್ಗ ಸಂಬಂಧವನ್ನು ಸ್ಪಷ್ಟ ಗೊಳಿಸುತ್ತಾ ಬಂದಿತು. ಭಾರತ ರಾಷ್ಟ್ರೀಯ ಕಾಂಗ್ರೆಸ್, ಮತ್ತು ಸರ್ ಸೈಯದ್ ಅಹಮ್ಮದ್‌ಖಾನ್ ಅವರಿಂದ ಮುಸಲ್ಮಾನ ಶೈಕ್ಷಣಿಕ ಸಮ್ಮೇಳನಗಳು ಹುಟ್ಟುವುದಕ್ಕೂ ಈ ಗುಂಪಿನ (ವರ್ಗದ) ಈ ಧೋರಣೆಯೂ ಸ್ವಲ್ಪಮಟ್ಟಿಗೆ ಕಾರಣವಾಗಿದೆ.

ಹೀಗೆ ಹುಟ್ಟಿಕೊಂಡ ಮಧ್ಯಮವರ್ಗ ಭಾರತೀಯ ರಾಷ್ಟ್ರೀಯತೆಗಾಗಿ ಹೋರಾಡು ವುದರಿಂದ ತನ್ನ ಆಸಕ್ತಿಗಳೂ ಕೈಗೂಡುವುದೆನ್ನುವುದನ್ನು ತಿಳಿದು ಅದರಂತೆ ವರ್ತಿಸಿತು. ಈ ವರ್ಗ ತನ್ನ ಕಾರ್ಯಸಾಧನೆಗಾಗಿ ಭಾರತದ ಎಲ್ಲಾ ಜನರ ಪ್ರತಿನಿಧಿ ಎಂದು ತೋರಿಸಿ ಕೊಳ್ಳಲು ಹಿಂಜರಿಯಲಿಲ್ಲ. ಆದರೆ ಇದೇ ಜನರು ಅವಕಾಶವಾದಾಗೆಲ್ಲಾ ಮತಾಂಧತೆಯ ಬೀಜ ಬಿತ್ತಿ ಗಲಭೆಗಳಿಗೆ ಕಾರಣರಾಗುವುದಕ್ಕೂ ಹಿಂಜರಿಯಲಿಲ್ಲ. ಇಂಥ ವರ್ಗಹಿತದ ಕಾರಣಕ್ಕಾಗಿ ಇವರು ತಾವು ಭಾರತೀಯ ಮುಸಲ್ಮಾನರನ್ನೊ ಅಥವಾ ಒಂದು ಪ್ರದೇಶವನ್ನೊ ಅಥವಾ ಒಂದು ಜನಾಂಗವನ್ನೊ ಅಥವಾ ಒಂದು ವಿಭಾಗದ ಜನರನ್ನೊ ಪ್ರತಿನಿಧಿಸುತ್ತೇವೆಂದು ಹೇಳಿಕೊಂಡರು. ಅದಕ್ಕಾಗಿ ಅಂಥ ಅರ್ಥ ಕೊಡುವ ಸಾಹಿತ್ಯ ವನ್ನು ಸೃಷ್ಟಿಸಿದರು. ಉದಾಹರಣೆಗೆ ಸರ್ ಸೈಯ್ಯದ್ ಅಹಮ್ಮದ್‌ಖಾನ್ ಅವರು "ಮುಸ್ಲಿಂ ಜನತೆಯ ಉದ್ಧಾರಕ್ಕಾಗಿಯೇ ತಮ್ಮೆಲ್ಲಾ ಉರ್ದು ಸಾಹಿತ್ಯ ಚಟುವಟಿಕೆ ಗಳು" ಎಂದರು. ಆದರೆ ಇದೇ ಕಾಲದಲ್ಲಿ ಒಟ್ಟು ರಾಷ್ಟ್ರೀಯತೆಗಾಗಿ ಬರೆದ ಉರ್ದು ಸಾಹಿತಿಗಳು ಇದ್ದರು. ಈ ಜನರಿಗೆ ತಾವು ಏಕಾಗಿ ಮಾಡುತ್ತಿದ್ದೇವೆ ಮತ್ತು ಅದರ ಪರಿಣಾಮ ಏನು ಎನ್ನುವುದರ ಅರಿವಿಲ್ಲದಿದ್ದರೂ ಅದು ತಮ್ಮ ಸದ್ಯದ ಉದ್ದೇಶವನ್ನು ಪೂರೈಸುತ್ತದೆ ಅನ್ನುವುದರಿಂದ ಮಾಡಿದರು. ಇದೇ ಸಮಯದಲ್ಲಿ ಅವದ್ ಪಂಚ್ ಮತ್ತು ಸರ್‌ಷಾದ್ ಅವರ ಫಸಾನೆಯೆ ಆಜಾದ್ ಮುಂತಾದ ಕೃತಿಗಳು ಹೊರಬಿದ್ದುವು. ಅಬ್ದುಲ್ ಹಲೀಮ್‌ಷರರ್ ಅವರು ಇದೇ ಕಾಲದಲ್ಲಿ ಚಾರಿತ್ರಿಕ ಕಾದಂಬರಿಗಳನ್ನು ಬರೆದರು. ಬ್ರಿಟಿಷರ ಆಳ್ವಿಕೆಯಲ್ಲಿ ಹಾಳಾಗಿಹೋದ ಪುರಾತನ ಸಂಸ್ಕೃತಿಯ ನಾಶ ವಾದ್ದಕ್ಕೆ ಪ್ರತೀಕಾರವೇ ಈ ಕಾದಂಬರಿಗಳ ವಸ್ತು. ಹಿಂದೆ ಮುಸ್ಲಿಮರಿಂದ ಕ್ರಿಶ್ಚಿ ಯನ್ನರು ಸೋತುಹೋದ ಹಳೆಯ ವಿಜಯದ ಕಥೆಗಳನ್ನು ಅಬ್ದುಲ್ ಹಲೀಮ್‌ಷರರ್ ಬರೆದರು. ಅಂಥ ವಿಜಯದ ಕಥೆಗಳನ್ನು ಹೇಳಿ, ಉರ್ದು ಈಗ ಬ್ರಿಟಿಷರ ವಿರುದ್ಧ ಅಂಥ

ಪ್ರತೀಕಾರ ಮಾಡಬೇಕೆಂಬುದು ಅವರ ಬರವಣಿಗೆಯ ಆಶಯವಾಗಿತ್ತು.

ಸ್ವಾತಂತ್ರ್ಯಕ್ಕಾಗಿ ಭಾರತದಲ್ಲಿ ರಾಷ್ಟ್ರೀಯ ಚಳುವಳಿ ಪ್ರಬಲವಾಗುತ್ತಿದ್ದ ಹಾಗೆ ಇನ್ನೊಂದು ಹೊಸ ವರ್ಗ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುವತ್ತ ಮುಂದಾಯಿತು. ಇವರಲ್ಲಿ ವಕೀಲರು, ಸ್ವತಂತ್ರವಾಗಿ ಬರೆಯುತ್ತಿದ್ದ ಪತ್ರಿಕಾಕರ್ತರು ಮತ್ತು ಗ್ರಾಮೀಣ ಪ್ರದೇಶಗಳಿಂದ ಬಂದವರು ಇದ್ದರು. ಕೆಲವರು ಹಳ್ಳಿಯ ಸಮಸ್ಯೆಗಳನ್ನು ಕುರಿತು ಮತ್ತೆ ಕೆಲವರು ಹಳ್ಳಿಗಳನ್ನು ಆಧುನೀಕರಣಗೊಳಿಸುವುದರ ಅವಶ್ಯಕತೆ ಕುರಿತು ಬರೆಯಲಾರಂಭಿಸಿದರು. ಹಳ್ಳಿಗಳ ಜೀವನವನ್ನು ಆದರ್ಶಮಾಡಿ ಇಲ್ಲವೇ ಸುಂದರಮಾಡಿ ಬರೆದರು. ಈ ಲೇಖಕರೂ ಹೆಚ್ಚು ಕಡಿಮೆ ಮಧ್ಯಮ ವರ್ಗಕ್ಕೆ ಸೇರಿದವರೇ ಆಗಿದ್ದರು. ಇವರಲ್ಲಿ ಬಹಳ ಜನ ಲೇಖಕರು ಉಪಾಧ್ಯಾಯರೊ, ವಕೀಲರೋ, ಬಿಳಿ ಬಟ್ಟೆಯ ಕೆಲಸಗಾರರೋ ಆಗಿದ್ದರು. ಇವರೆಲ್ಲರ ರಾಜಕೀಯ ಹಾಗೂ ಸಾಹಿತ್ಯ ಚಟುವಟಿಕೆಗಳು ಮಧ್ಯಮವರ್ಗದ ಆಸಕ್ತಿಯನ್ನು ಬಲಪಡಿಸುವುದೇ ಆಗಿತ್ತು. ತನ್ನ ಉಳಿವಿಗಾಗಿ ಈ ವರ್ಗವು ರೈತರ, ಕೃಷಿ ಕಾರ್ಮಿಕರ ಹಾಗೂ ದುಡಿಮೆಗಾರರ ಬೆಂಬಲ ಪಡೆಯಲು ಹವಣಿಸಿತು. ಶ್ರಮಿಕ ವರ್ಗವು ಆಗ ಪ್ರಮುಖ ಶಕ್ತಿಯಾಗಿ ಬೆಳೆದಿರಲಿಲ್ಲ. ಈ ಸಂದರ್ಭವನ್ನು ಈ ವರ್ಗ ತನಗಾಗಿ ಚೆನ್ನಾಗಿ ಉಪಯೋಗಿಸಿಕೊಂಡಿತು. ಇದಕ್ಕೆ ರೈತರ ಅಥವಾ ಶ್ರಮಿಕ ವರ್ಗದ ನಾಯಕತ್ವ ಬೇಕಿರಲಿಲ್ಲ. ಮತ್ತು ಒಪ್ಪಿಕೊಳ್ಳಲು ತಯಾರು ಇರಲಿಲ್ಲ. ತನ್ನ ವರ್ಗದ ಹಿತ ಸಾಧನೆಗಾಗಿ ರೈತ ಕಾರ್ಮಿಕರ ಬೆಂಬಲ ಮಾತ್ರ ಬೇಕಾಗಿತ್ತು. ಆಗಿನ ರೈತರ ಮಧ್ಯದಲ್ಲಿನ ಸಾಮಾಜಿಕ ಅಶಾಂತಿ ಬಹು ಉಪಯೋಗಕಾರಿಯಾಗಿತ್ತು. ರೈತರ ಹೋರಾಟ ಮತ್ತು ಉದ್ಧಾರವನ್ನು ಕುರಿತು ಬಹಳ ಬರೆದ ಹಾಗೂ ಮಾತನಾಡಿದ ಪ್ರಸಿದ್ಧ ಸಾಹಿತಿ ಪ್ರೇಮ್‌ಚಂದರ ಕಾದಂಬರಿಗಳಲ್ಲಿಯೂ ಪಟ್ಟಣಗಳಿಂದ ಬಂದವರು ಅಥವಾ ಮಧ್ಯಮ ವರ್ಗದಿಂದ ಬಂದವರು ನಾಯಕರಾಗಿಬರುತ್ತಾರೆ. ದುಡಿಯುವ ವರ್ಗದಲ್ಲಿ ನಾಯಕರು ಅವರ ಕಾದಂಬರಿ 'ಗ್ರಾಮದಾನ' ನಾಯಕ ಯಾವ ಅರ್ಥದಲ್ಲೂ ಒಬ್ಬ ಕ್ರಾಂತಿಕಾರಿಯಲ್ಲ. ಅವನು ವ್ಯವಸ್ಥೆಯೊಂದಿಗೆ ಆಗಿಂದಾಗ್ಗೆ ರಾಜಿ ಮಾಡಿಕೊಳ್ಳುತ್ತಲೇ ಇರುತ್ತಾನೆ.

ಈ ಹಿನ್ನಲೆಯಲ್ಲಿ ಪ್ರಗತಿಪರ ಉದಾರ ಸಾಹಿತ್ಯ ಚಳುವಳಿಯನ್ನು ನೋಡೋಣ. ಪ್ರೇಮ್ ಚಂದರು ಈ ಚಳುವಳಿಯ ಪ್ರಥಮ ಅಧ್ಯಕ್ಷರು ಮತ್ತು ಮೊದಲಬಾರಿಗೆ ಈ ವೇದಿಕೆಯಿಂದ 1936ರಲ್ಲಿ ಲಕ್ನೋದಲ್ಲಿ ಭಾಷಣ ಮಾಡಿದರು. ಪ್ರಗತಿಪರ ಬರಹಗಾರರ ಚಳುವಳಿ ಕೆಲವು ಮೂಲಭೂತ ವಿಷಯಗಳ ಮೇಲೆ ಒಟ್ಟಾದರೂ— ಸಾಮಾಜಿಕ ಪರಿವರ್ತನೆಯಲ್ಲಿ ಲೇಖಕರ ಪಾತ್ರ, ಸಾಮಾಜಿಕ ಉದ್ದೇಶಗಳನ್ನೊಳಗೊಂಡ ಸಾಹಿತ್ಯ ಸೃಷ್ಟಿ ಮುಂತಾದ ವಿಷಯಗಳಲ್ಲಿ ವಿವಿಧ ಧೋರಣೆಯ ಜನರೂ ಇದ್ದರು. ಅವರಲ್ಲಿ ಬಹುಮಂದಿ ವರ್ಗವಿಮುಕ್ತಿಯನ್ನು ಬಯಸದೆ ಕೇವಲ ಸಾಮಾಜಿಕ ಬಂಡುಗಾರರಾಗಿದ್ದರು. ಆದ್ದರಿಂದಲೇ ಅವರು ಲೈಂಗಿಕತೆಯ ಸಮಸ್ಯೆ ಅಥವಾ ಹೋರಾಡುವ ವ್ಯಕ್ತಿಗಳಂತೆ ತೋರಿಸಿಕೊಳ್ಳುವುದರಲ್ಲಿ ಅಥವಾ ಸ್ಪಷ್ಟ ನಿರೂಪಣೆಯಿಲ್ಲದ ಸ್ವಾತಂತ್ರ್ಯ ಮುಂತಾದವನ್ನು ಪ್ರತಿಪಾದಿಸುತ್ತಿದ್ದರು. ಉದಾಹರಣೆಗೆ ಮೀರ್‌ಜಿ. ಸಾದತ್ ಹುಸೇನ್. ಮಂಟೊ

ಮುಂತಾದ ಅನೇಕ ಯುವಕ ಬರಹಗಾರರು. ಅವರಲ್ಲಿ ಬಹಳ ಜನರು ಈಗಿನ ಪ್ರಮುಖ ಜನತಾ ಸಂಪರ್ಕದ ಸಾಧನಗಳಾದ ಸಿನಿಮಾ, ರೇಡಿಯೋ, ಪತ್ರಿಕೆ ಮುಂತಾದವನ್ನು ಸೇರಿದ್ದಾರೆ. ಮುಷಾಯಿರಾ, (ಕವಿಗೋಷ್ಠಿಯಲ್ಲಿ ಓದಲೆಂದೇ ಬರೆಯುವರು) ಕವಿ ಸಮೂಹ ಬೇರೇನೂ ಸಾಮಾಜಿಕ ಉದ್ದೇಶಗಳಿಲ್ಲದೆ ತನ್ನ ಸ್ವಂತ ಕಲ್ಯಾಣದತ್ತ ನಡೆಯುವುದನ್ನೇ ನಡವಳಿಕೆ ಮಾಡಿಕೊಂಡಿತ್ತು. ಇಂಥ ಮುಷಾಯಿರಾ ಸಮಾರಂಭಗಳಲ್ಲಿ ಓದಿ ಜೀವನ ಸಾಗಿಸುವ ಕವಿಗಳೂ ಇದ್ದರು. ಅವರಲ್ಲಿ ಕೆಲವರು ಸಮಾಜದಲ್ಲಿ ತುಂಬ ಪ್ರಭಾವಶಾಲಿಗಳೂ ಆಗಿದ್ದರು. ಜಿಗರ್‌ಮುರಾದ್ ಆಬಾದಿ ಮತ್ತು ಜೋಷ್‌ಮಲ್ಲಿಕ್ ಆಬಾದಿ ಮುಂತಾದವರು ಒಂದು ರೀತಿ ಮುಕ್ತ ಕವಿಗಳ ಹಾಗೆ ಬರೆಯುತ್ತಿದ್ದರು. ಅವರ ಎಲ್ಲಾ ಕಾವ್ಯವಸ್ತುವು ಆ ಕಾಲಕ್ಕೆ ಹುಟ್ಟಿಕೊಂಡಿದ್ದ ನಗರವಾಸಿ ಯುವಕರ ಬಗ್ಗೆಯೇ ಆಗಿತ್ತು. ನಗರವಾಸಿ ಯುವಕರ ಹತಾಶೆ ಗೊತ್ತು ಗುರಿಯಿಲ್ಲದ ರೋಷ ಮುಂತಾದ ವಿಷಯಗಳನ್ನೊಳಗೊಂಡ ಸಾಹಿತ್ಯರಚನೆ ಮಾಡಿದರು. ಆದ್ದರಿಂದಲೇ ಈ ಕಾಲದ ಉರ್ದು ಸಾಹಿತ್ಯ ನಗರ ಕೇಂದ್ರಗಳಿಂದ ಬಂದುದಲ್ಲದೆ, ಬರಹಗಾರರೂ ನಗರ ಪ್ರದೇಶಗಳಲ್ಲಿ ತಳವೂರಿದವರೇ ಆಗಿದ್ದರು. ಅವರಲ್ಲಿ ಕೆಲವರಿಗೆ ಬಾಲ್ಯದಲ್ಲಿ ಗ್ರಾಮೀಣ ಜೀವನದ ಹಿನ್ನಲೆ ಇದ್ದರೂ ಬಹಳಷ್ಟು ಜನರಿಗೆ ಗ್ರಾಮೀಣ ಪ್ರದೇಶದ ಕೃಷಿ ಕೂಲಿಗಾರರ ಅಥವಾ ರೈತಾಪಿ ವರ್ಗದ ಸಮಸ್ಯೆಗಳ ಅರಿವು ಇರಲಿಲ್ಲ. ಪ್ರಗತಿಪರ ಧೋರಣೆಯನ್ನು ತಳೆದ ನಮ್ಮ ಕ್ರಾಂತಿಕಾರ ಬರಹಗಾರರಿಗೂ ರೈತಾಪಿವರ್ಗದ ಬಗ್ಗೆ ಒಂದು ರೀತಿಯ ಭಾವನಾತ್ಮಕ ಅನುಕಂಪೆಯಿತ್ತೇ ವಿನಃ ಆ ವರ್ಗದ ಜೀವನದ ನಿಕಟ ಪರಿಚಯವಿರಲಿಲ್ಲ. ಇದರ ಪರಿಣಾಮವಾಗಿ ಕ್ರಾಂತಿಕಾರಿ ಭಾವನೆಯೂ ಬರವಣಿಗೆಯೂ ಆದರ್ಶಮಯವಾಗಿ ಮತ್ತು ರಂಜಕವಾಗಿಬಿಡುತ್ತದೆ. ಆದ್ದರಿಂದಲೇ ಈ ಸಾಹಿತಿಗಳು ಶ್ರಮಿಕವರ್ಗದ ಬರಡು ಬಾಳನ್ನು ಚಿತ್ರಿಸುವಲ್ಲಿ ಸಫಲರಾದರೆ ಹೊರತು ಆ ವರ್ಗದ ಆಶೋತ್ತರಗಳನ್ನು ಬಿಂಬಿಸಲಾಗಲೀ ಅಥವಾ ಅವುಗಳನ್ನು ಈಡೇರಿಸಿಕೊಳ್ಳಲು ಬೇಕಾದ ಚೇತನವನ್ನಾಗಲೀ ಉಂಟುಮಾಡುವ ಸಾಹಿತ್ಯವಾಗಲಿಲ್ಲ. ಪ್ರಗತಿಪರ ಸಾಹಿತ್ಯ ಚಳುವಳಿ ಕ್ರಮೇಣ ದೇಶದ ರಾಜಕೀಯ ಚಳುವಳಿಯಲ್ಲಿ ಅಪಾರ ಆಸಕ್ತಿ ತೋರಿ ಅದರೊಂದಿಗೆ ಸೇರಿತು. ಇದು ಸ್ವಲ್ಪ ಅವರ ಬರವಣಿಗೆಯ ವರ್ಗಜ್ಞಾನವನ್ನು ಹೆಚ್ಚಿಸಿತು. ಉದಾಹರಣೆಗೆ, ಜಮೀನ್ದಾರಿ ವರ್ಗದ ಹಿನ್ನಲೆ ಹೊಂದಿದ್ದು ಮಧ್ಯಮ ವರ್ಗದಿಂದ ಬಂದ ಮಕ್‌ದೂಮ್ ಮೋಹಿಯುದ್ದೀನ್ ಅಂಥ ಕವಿಗಳು ತೆಲಂಗಾಣ ಚಳುವಳಿಯಂಥ ರೈತರ ಕ್ರಾಂತಿಕಾರೀ ಹೋರಾಟದಲ್ಲಿ ನೇರವಾಗಿ ಸೇರಿ ಹೋರಾಡಿದರು. ಸರ್ ಸರದಾರ್ ಆಲಿ ಜಾಫ್ರಿ, ಶಯ್ಬಿ ಆಜ್ಮಿ, ಹಾಗೂ ಇತರ ಕೆಲವರು ಕಾರ್ಮಿಕ ವೃತ್ತಿ ಸಂಘಗಳ ಚಳುವಳಿಯ ಸಂಘಟನೆಯಲ್ಲಿ ತೊಡಗಿದರು. ಆದರೆ ಅವರು ಪೂರ್ಣವಾಗಿ ತಮ್ಮ ವರ್ಗದಿಂದ ಬಿಡಿಸಿಕೊಂಡು ಬಂದರೆಂದು ಹೇಳಲಾಗುವುದಿಲ್ಲ ಅಥವಾ ಅವರಿಂದ ಹಾಗೆ ವರ್ಗದಿಂದ ಮುಕ್ತಿ ಪಡೆಯಲು ಆಗಲಿಲ್ಲ. ಏಕೆಂದರೆ ಚಳುವಳಿಯು ನಿರಂತರವಾಗಿ ನಡೆಯಲಿಲ್ಲ. ಇವರು ಕ್ರಾಂತಿಕಾರಿ ಸನ್ನಿವೇಶ ತಯಾರಾಗದ [illegible] ದ ಅವರ ಸಾಹಿತ್ಯ [illegible] ಸಂದರ್ಭದಲ್ಲಿ ಕ್ರಾಂತಿಯ ಬಗೆಗೆ [illegible]

ಷಣೆಯಾಯಿತು. ಪದ್ಯಗಳು ತುಂಬಾ ಅರ್ಥಪತ್ರಗಿದ್ದರೂ ಸಾಮಾಜಿಕ ಸಂದರ್ಭದಲ್ಲಿ ಅರ್ಥಪೂರ್ಣವಾಗಿ ಸಮಾಜದ ಚಟುಪಟಿಕೆಗಳಲ್ಲಿ ಭಾಗವಹಿಸಲು ಅಸಮರ್ಥವಾದವು.

ಸ್ವಾತಂತ್ರ್ಯಾನಂತರ ಉರ್ದು ಸಾಹಿತ್ಯದ ಗುಣ ಸ್ವಭಾವ ಮತ್ತು ಒಣ್ಣವೇ ಒದ ಲಾದುವು. 1948ರ ಮುಂಚೆ ಸ್ಥಾನ ಪಡೆಯಲಾಗದಿದ್ದ ಉರ್ದು ಸ್ವಾತಂತ್ರ್ಯಾನಂತರ ಯಾವ ಗೌರವಾನ್ವಿತ ಹುದ್ದೆಗಳಿಗೂ ಏರಲು ಅನುಕೂಲತೆಗಳನ್ನು ಪಡೆದಿರಲಿಲ್ಲ. ಗಣ್ಯ ಸ್ಥಾನವನ್ನು ಅಲಂಕರಿಸಿದ್ದ ಉರ್ದು ಕವಿಗಳ ಸಂಖ್ಯೆ ಕ್ರಮೇಣ ಗಣನೀಯವಾಗಿ ಇಳಿಯಿತು. ಹಾಗಾಗಿಯೇ ಇಂದು ಉರ್ದು ಸಾಹಿತ್ಯದಲ್ಲಿ ಇಂದಿನ ಅನೇಕ ಯುವ ಬರಹಗಾರರು ಕೆಳಮಧ್ಯಮ ವರ್ಗದಿಂದ ಬಂದವರೇ ಆಗಿದ್ದಾರೆ. ಇವರ ಬರಹಗಳಲ್ಲಿ ಕೆಳ ಮಧ್ಯಮ ವರ್ಗದ ಆಶೋತ್ತರಗಳು ಚಿತ್ರಿತವಾಗಿವೆ. ಇಲ್ಲಿ ಒಂದು ವಿಶೇಷ ಸಂಗತಿಯನ್ನು ಗಮನಿಸಬೇಕಾಗುತ್ತದೆ. ಉರ್ದು ಸಾಹಿತಿಯು ಸಾಮಾನ್ಯವಾಗಿ, ಜಮೀನ್ದಾರಿ ಅಥವಾ ಮಾಜಿ ಜಮೀನ್ದಾರರ ಸಂಸಾರಗಳಿಂದ ಬಂದವರು ಇಲ್ಲವೇ ಅಂಥ ಸಂಸಾರಗಳ ನಿಕಟ ಸಂಪರ್ಕ ಪಡೆದಿದ್ದವರು. ಅವರು ಜಮೀನ್ದಾರಿ ವರ್ಗವು ನಾಶವಾಗುತ್ತಿದ್ದುದನ್ನು ಕಣ್ಣಾರೆ ಕಂಡವರು. ಜಮೀನ್ದಾರರು ಹಳ್ಳಿಯ ಬಡ ಜನತೆಯನ್ನು ಶೋಷಿಸುತ್ತಿದ್ದ ಕ್ರಮ ವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆದ್ದರಿಂದಲೇ ಉರ್ದು ಸಾಹಿತಿಗಳು ಅವರಲ್ಲೂ ಕಾದಂಬರಿಕಾರರು ಈ ಜಮೀನ್ದಾರಿ ಪದ್ಧತಿಯ ಅವನತಿಯನ್ನು ಅದರ ಮೂಲಕ ಅವರ ಸಾಂಸ್ಕೃತಿಕ ಪರಿಸರದ ಕೊನೆಯನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಇದನ್ನು ಪರಂಪರೆಯ ಭಾವನೆಯ ಭಾವಾತಿರೇಕದ ಬಂಧನ ಎನ್ನಬಹುದು.

ಖಾಜಿ ಅಬ್ದುಲ್ ಸತ್ತಾರ್, ಶಬ್‌ಗಜೀದ್ ಅವರ 'ಶಿಕಸ್ತ್‌ಕಿ ಆವಾಜ್' ಖುರ್ರತುಲ್ ಐನ್ ಹೈದರ್ ಅವರ 'ಆಗ್ ಕಾದರಿಯಾ' 'ಮೇರೆ ಸನಮ್ ಖಾನೆ' ಮತ್ತು 'ಸಫಿನಯೆ ಗಮ್‌ದಿಲ್' ಮುಂತಾದ ಕೃತಿಗಳಲ್ಲಿ ಮತ್ತು ಜೀಲಾನಿ ಬಾನೋ ಅವರ ಕೃತಿಗಳಲ್ಲಿ. ಹಯ್ಯತುಲ್ಲ ಅನ್ಸಾರಿ ಅವರ "ಲಹು ಕೆ ಪೂಲ್" ಕೃತಿಯಲ್ಲಿ ಜಮೀನ್ದಾರಿ ಯುಗದ ಭವ್ಯ ಸ್ಥಿತಿಯನ್ನು ಮತ್ತು ಭಾವಾತಿರೇಕದ ಬಂಧನವನ್ನು ಕಾಣಬಹುದು. ಈ ರೀತಿಯ ಜಮೀನ್ದಾರಿ ವರ್ಗಸಂಬಂಧ, ಉರ್ದು ಸಾಹಿತ್ಯದಲ್ಲಿ ಪರಂಪರೆಯ ಭವ್ಯತೆಯನ್ನು ಹೊಗಳಿಕೆಗೆ ಅಂಟಿಕೊಂಡ ಸಾಹಿತ್ಯ ರಚನೆಯ ಸ್ಪಷ್ಟ ಉದಾಹರಣೆ. ಅನೇಕ ಯುವ ಕವಿಗಳು ಬೆಳಕಿಗೆ ಬಂದಿದ್ದಾರೆ. ಸಾಹಿತ್ಯ ಸಾಧನೆಯ ಯಾವ ಹಿನ್ನಲೆಯೂ ಇಲ್ಲದ ಸಂಸಾರಗಳಿಂದ ಈಗೀಗ ಲೇಖಕರು ಬರುತ್ತಿದ್ದಾರೆ. ಅವರ ಬರವಣಿಗೆಯಲ್ಲಿ ರೋಷಗೊಂಡ ಮನಸ್ಸಿನ ತವಕವನ್ನು ಕಾಣಬಹುದು. ಇವರಿಗೆ ಹಿಂದಿನ ಕ್ರಾಂತಿಕಾರೀ ಸಾಹಿತಿಗಳು ಅನುಸರಿಸಿದ ಕಟ್ಟುನಿಟ್ಟಿನ ಜೀವನ, ವಿಚಾರಧಾರೆ ಬೇಕಾಗಿಲ್ಲ. ಎಲ್ಲವೂ ಶೀಘ್ರವಾಗಿ ಆಗ ಬೇಕಾಗಿದೆ ಇವರಿಗೆ. ತಮ್ಮ ದಾರಿಯನ್ನು ಹುಡುಕಿಕೊಳ್ಳುವ ಆತುರದಲ್ಲಿದ್ದಾರೆ. ಆದರೆ ಯಾವ ತಾತ್ತ್ವಿಕ ಹಿನ್ನಲೆಯೂ ಇಲ್ಲದ ಇವರು ಎಲ್ಲಾ ರೀತಿಯ ತಪ್ಪು ತಿಳುವಳಿಕೆ ಮತ್ತು ಗೊಂದಲಗಳಿಗೆ ತುತ್ತಾಗಲೂಬಹುದು. ಆತ್ಮಸಂತೋಷ ತೃಪ್ತಿಯನ್ನು ಅರಸಿ ಹೊರಟ ಕೆಲವರು ಅಂಥ ಸ್ಥಿತಿಯ ಅಥವಾ ಪ್ರಗತಿ ವಿರೋಧಿ ವಿಚಾರಗಳಿಗೆ ಬಲಿ ಬೀಳ

ಬಹುದು ಇಲ್ಲವೇ ಧರ್ಮ ಮತೀಯ ಭಾವನೆಗಳ ಆರಾಧಕರಾಗಬಹುದು. ಕೆಲವರು ಅಸ್ತಿತ್ವವಾದವನ್ನು, ಅಸ್ತಿತ್ವವಾದದ ಪರಕೀಯತೆಯನ್ನು ಅನುಭವಿಸಲು ಹಾತೊರೆಯ ಬಹುದು. ಆದರೆ, ಒಟ್ಟಿನಲ್ಲಿ ಇಂದಿನ ಉರ್ದು ಸಾಹಿತಿಗಳು ಸ್ಪಷ್ಟವಾಗಿ ಹೊಸ ವರ್ಗ ಪ್ರಜ್ಞೆಯನ್ನು ಬೆಳೆಸಿಕೊಂಡು ಸಾಹಿತ್ಯರಚನೆಯತ್ತ ತೊಡಗಿಲ್ಲ ಎಂಬುದಂತು ನಿಜ. ದಿನದಿನಕ್ಕೂ ಹೊಸ ಹೊಸ ಸಾಮಾಜಿಕ ಮೌಲ್ಯಗಳು ಬಂದು ಸೇರುತ್ತಿರುವುದರಿಂದ ಉರ್ದು ಸಾಹಿತ್ಯ ಒಂದು ಬಗೆಯ ಘರ್ಷಣೆಯ ಘಟ್ಟವನ್ನು ತಲುಪುತ್ತಿದೆ ಅನ್ನಿಸುತ್ತದೆ.

ಹೊಸ ಜಾಗತಿಕ ದೃಷ್ಟಿಯನ್ನು ಬೆಳೆಸುವ ಸಾಹಿತ್ಯ ಸೃಷ್ಟಿಯಾಗದೆ ಇರುತ್ತಿರುವ ಕಾರಣ ಇಂದಿನ ಅನೇಕ ಯುವ ಬರಹಗಾರರು ತಮ್ಮ ಚೈತನ್ಯದ ಮೂಲ ಸೆಲೆಯನ್ನು ಗುರುತಿಸಲಾಗದೆ, ಅದು ತಮ್ಮ ಪ್ರತಿಷ್ಠೆ ಅಥವಾ ವ್ಯಕ್ತಿತ್ವದಲ್ಲಡಗಿದೆ ಎಂದು ಭಾವಿಸು ತ್ತಿದ್ದಾರೆ. ಅವರಿಗೆ, ಅವರ ಸಮಸ್ಯೆಗಳ ಮೂಲಗಳಾವುವು ಅವುಗಳ ವರ್ಗನೆಲೆ ಏನು ಎಂಬುದನ್ನು ಅರ್ಥಮಾಡಿಕೊಂಡು ವಿಶ್ಲೇಷಿಸುವ ಗೋಜಿಗೆ ಹೋಗುತ್ತಿಲ್ಲ.

ಇಂದಿನ ಉರ್ದು ಸಾಹಿತಿಗಳು ಬಹುಮಟ್ಟಿಗೆ, ಕೆಲಸಗಾರರು ಕೇಂದ್ರೀಕೃತವಾಗಿರುವ ನಗರ ಪ್ರದೇಶಗಳಿಂದಲೇ ಬರುತ್ತಿದ್ದಾರೆ. ಬರವಣಿಗೆಯಲ್ಲಿ ಜಮೀನ್ದಾರಿ ಪದ್ಧತಿಯ ವಾಸನಾ ಅಂಶಗಳು ಮತ್ತು ತಮ್ಮ ವರ್ಗಹಿತದ ಅಂಶಗಳೂ ಕಾಣಬರುತ್ತವೆ.

ಉರ್ದು ಸಾಹಿತ್ಯದಲ್ಲಿ ನಾವು ಗಮನಿಸಬೇಕಾದು ಮತ್ತೊಂದು ಮುಖ್ಯ ಅಂಶ ಲೇಖಕಿಯರ ಬೆಳವಣಿಗೆ. ಕಳೆದ ಐದಾರು ವರ್ಷಗಳಲ್ಲಿ ಗಣನೀಯ ಪ್ರಮಾಣದಲ್ಲಿ ಲೇಖಕಿಯರು ಸಾಹಿತ್ಯ ರಚನೆ ಮಾಡುತ್ತಿದ್ದಾರೆ. ಇವರಲ್ಲಿ ಬಹುಮಂದಿ ಕಥೆಗಾರರು ಇಲ್ಲವೆ ಕಾದಂಬರಿಕಾರರು. ಶ್ರೀಮತಿ ಇಸ್ಮತ್‌ಚುಖ್ತಾಯಿ ಅವರು ಮೊದಲನೆಯ ಮುಖ್ಯ ಬರೆಹಗಾರ್ತಿ. ಲೇಖಕಿಯರಿಗೆ ಆಗ್ಗೆ ವಿಶೇಷವೆನ್ನಿಸಿದ್ದ ಕಾಮಸಂಬಂಧ ವಿಚಾರಗಳನ್ನು ತೆಗೆದುಕೊಂಡು ಈಕೆ ಬರೆದರು. ಇವರು ಕೃತಿಯಲ್ಲಿ ಶಾಲಾ ಉಪಾಧ್ಯಾಯನಿಯಾಗಿ ದ್ದರು. ಅಲ್ಲಿಂದ ಸ್ವಲ್ಪ ಮುಂದೆ ಬೆಳೆದ ಈ ಲೇಖಕಿ ನಂತರ ಭಾರತೀಯ ಹೆಣ್ಣಿನ ಅದರಲ್ಲೂ ಮುಸಲ್ಮಾನ ಹೆಣ್ಣಿನ ಕಷ್ಟಕಾರ್ಪಣ್ಯಗಳನ್ನು ಚಿತ್ರಿಸಲಾರಂಭಿಸಿದರು. ಪರದೆ ಯಲ್ಲಿ ಹುಟ್ಟಿ ಪರದೆ ಹಾಕಿಕೊಂಡೇ ಬೆಳೆಯುತ್ತಿರುವ ಮುಸಲ್ಮಾನ ಹೆಣ್ಣಿನ ಸಮಸ್ಯೆಗಳು, ಕೊರತೆಗಳು ಮತ್ತು ಸಾಮಾಜಿಕ ಅನ್ಯಾಯಗಳನ್ನು ಎತ್ತಿತೋರಿಸಿ ಅವುಗಳಿಂದ ಅವರಿ ಗಾಗುತ್ತಿರುವ ಅನ್ಯಾಯವನ್ನು ಬಯಲಿಗೆಳೆದಿದ್ದಾರೆ. ಇನ್ನೊಬ್ಬ ಪ್ರಮುಖ ಲೇಖಕಿ ಖುರ್ರತುಲ್ ಐನ್‌ಹೈದರ್ ಪಾಕಿಸ್ತಾನದಲ್ಲಿದ್ದಾಗಿನಿಂದಲೂ ಪತ್ರಿಕಾಕರ್ತೆ. ಇತ್ತೀಚಿನ ವರೆಗೂ 'ಇಲಸ್‌ಸ್ಟ್ರೇಟೆಡ್ ವೀಕ್ಲಿ' ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದರು. ಇವರು ತಮ್ಮ ಬರವಣಿಗೆಗಳಲ್ಲಿ ಕಾಮಸಂಬಂಧದ ವಿಚಾರಗಳನ್ನು ಬಿಟ್ಟು ಭಾರತೀಯ ಸಂದರ್ಭದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಜಟಿಲತೆಯನ್ನು ವಿಶ್ಲೇಷಿಸುವುದಕ್ಕೆ ತೊಡಗಿದರು. ವಾಜಿದ ತಬಸ್ಸುಮ್, ರಜೀದ್ ಸಜ್ಜಾದ್‌ಜಾಹಿರ್, ಇಫ್ಪತ್‌ಮೋಹಾನಿ. ಮತ್ತು ಜೀಲಾನಿಬಾನೋ ಇನ್ನು ಕೆಲವು ಹೆಸರಿಸಬಹುದಾದ ಉರ್ದು ಲೇಖಕಿಯರು. ಇವರಲ್ಲಿ ಜೀಲಾನಿಬಾನೋ ಮನೆಗೆಲಸಗಳಲ್ಲಿ ನಿರತರಾದವರು. ವಾಜಿದತಬಸ್ಸುಮ್ ಕೂಡಾ

ಯಾವುದೇ ಒಂದು ಗೊತ್ತಾದ ವೃತ್ತಿಯನ್ನು ಮಾಡುತ್ತಿಲ್ಲ. ರಜಿಯಾ ಅವರು ಪ್ರಸಿದ್ಧ ಸಾಹಿತಿ ಸಜ್ಜಾದ್ ಜಾಹೀರ್ ಅವರ ಪತ್ನಿ. ಅವರು ಭಾಷಾಂತರಕಾರರಾಗಿ ಕೆಲಸ ಮಾಡುತ್ತಿದ್ದರು. ಇವರೆಲ್ಲರೂ ಮಧ್ಯಮ ವರ್ಗದಿಂದ ಬಂದ ಲೇಖಕಿಯರೇ ಆಗಿದ್ದಾರೆ. ಆದ್ದರಿಂದಲೇ ಇವರ ಬರವಣಿಗೆಯಲ್ಲಿ ಆ ವರ್ಗದ ಸಮಸ್ಯೆಗಳನ್ನು ಯಥಾರ್ಥವಾಗಿ ಚಿತ್ರಿಸುತ್ತಾರೆ.

ಉರ್ದು ಸಾಹಿತ್ಯದ ಮತ್ತೊಂದು ಮಹತ್ವದ ಅಂಶವೆಂದರೆ ಅಲ್ಲಿನ ನಿಯತಕಾಲಿಕಗಳು ಮತ್ತು ಸಾಹಿತ್ಯ ಹಾಗೂ ಇತರ ಪತ್ರಿಕೆಗಳದ್ದು. ಇವುಗಳಲ್ಲಿ ಬಹುಪಾಲು ಸರಕಾರದ ಪೋಷಣೆಯಿಂದ ಬರುತ್ತವೆ. ಉದಾಹರಣೆಗೆ 'ಆಜ್‌ಕಲ್' ಕೇಂದ್ರ ಸರ್ಕಾರದ ಪ್ರಚಾರ ಇಲಾಖೆಯ ಪ್ರಕಟಣೆ. 'ನಯಾದರ್' ಉತ್ತರಪ್ರದೇಶ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯಿಂದ ಪ್ರಕಟಗೊಳ್ಳುತ್ತಿದೆ. 'ತಾಮೀರ್' ಶ್ರೀನಗರದ ಉರ್ದು ಸಾಹಿತ್ಯ ಅಕಾಡೆಮಿಯಿಂದ ಹೊರಡುತ್ತದೆ. 'ಖೌಮಿರಾಜ್' ಮಹಾರಾಷ್ಟ್ರ ಸರ್ಕಾರದ ವಾರ್ತಾ ಇಲಾಖೆಯ ಪತ್ರಿಕೆ. ಇನ್ನೂ ಅನೇಕ ಪತ್ರಿಕೆಗಳು ಸರ್ಕಾರದ ಆಶ್ರಯದಿಂದಲೇ ಬರುತ್ತಿವೆ. 'ತಹರೀಕ್' ಎಂಬುದು 'ಸಾಂಸ್ಕೃತಿಕ ಸ್ವಾತಂತ್ರ್ಯ'ವನ್ನು ಪ್ರತಿಪಾದಿಸುವ ಖಾಸಗೀ ಸಂಸ್ಥೆಯೊಂದರಿಂದ ಹೊರಡುವ ಕಮ್ಯೂನಿಸ್ಟ್ ವಿರೋಧಿ ನಿಯತ ಕಾಲಿಕ ಪತ್ರಿಕೆ. ಇದರ ಸಂಪಾದಕರು ಉದ್ಯೋಗಕ್ಕಾಗಿ ಉದ್ಯೋಗ ಎನ್ನುವ ಪತ್ರಿಕಾಕರ್ತ ವೃತ್ತಿಯವರು. ಈಗ ಇವರು ಒಂದು ಪ್ರಕಾಶನ ಸಂಸ್ಥೆಯ ಮೇಲ್ವಿಚಾರಕರೂ ಆಗಿದ್ದಾರೆ. 'ಉರ್ದು-ಎ-ಮೋಅಲ್ಲ' ಮತ್ತು ಅಲಿಘರ್ ಮ್ಯಾಗಝಿನ್ ಮುಂತಾದವು ವಿಶ್ವವಿದ್ಯಾ ನಿಲಯದ ಇಲಾಖಾ ಪ್ರಕಟಣೆಗಳು. ಒಂದು ಬಗೆ ಶೈಕ್ಷಣಿಕಾ ಸಂಶೋಧನಾ ಸ್ವಭಾವ ವನ್ನು ಹೊಂದಿರುವ ಪತ್ರಿಕೆಗಳು. 'ಶಬ್‌ಖೂನ್' ಒಬ್ಬ ಸರಕಾರಿ ನೌಕರ ಪ್ರಕಟಿಸುತ್ತಿರುವ ಪತ್ರಿಕೆ. ಆದರೆ ಅದರಲ್ಲಿ ಅವರ ಹೆಸರಿಲ್ಲದೆ ಬೇರೆಯವರ ಹೆಸರಿನಲ್ಲಿ ಸಂಪಾದಕತ್ವ ನಡೆದಿದೆ. ಇದು ಪ್ರಗತಿಪರ ಚಳುವಳಿಯನ್ನು ಪರಿಕಲ್ಪನೆಗಳನ್ನು ಬೆಂಬಲಿಸುವ ಪತ್ರಿಕೆ. 'ಗುಪ್ತಗು' ಪತ್ರಿಕೆ ಪ್ರಗತಿಪರ ಚಳುವಳಿಯ ವಕ್ತಾರರನ್ನಬಹುದಾದ ಸರ್‌ದಾರ್ ಆಲಿಜಾಫರಿಯವರ ಸಂಪಾದಕತ್ವದಲ್ಲಿ ಸಮಾಜವಾದೀ ಧೋರಣೆಯನ್ನು ಹರಡುತ್ತಿದೆ. 'ಅಸಲಿ ಆದಬ್' ಕೇವಲ ಸಾಹಿತ್ಯ ವಿಮರ್ಶೆಗೆ ಮೀಸಲಾದ ಪತ್ರಿಕೆ. ಇದರ ಸಂಪಾದಕರು ಮಧ್ಯಮವರ್ಗ ದಿಂದ ಬರುವ ಒಬ್ಬ ಲೇಖಕ.

ಉರ್ದು ಸಾಹಿತ್ಯದ ಎಲ್ಲಾ ಬಗೆಯ ಚಟುವಟಿಕೆಗಳಲ್ಲೂ ಮಧ್ಯಮ ವರ್ಗವು ಪ್ರಧಾನ ಪಾತ್ರ ವಹಿಸಿದೆ. ಆದ್ದರಿಂದಲೇ ಉರ್ದು ಸಾಹಿತ್ಯದಲ್ಲಿ ಮಧ್ಯಮ ವರ್ಗದ ಕುಂದುಕೊರತೆಗಳು ಭಾವನೆಗಳು ಮತ್ತು ವೈಚಿತ್ರ್ಯಗಳು ಪ್ರಕಾಶಗೊಳ್ಳುತ್ತಿವೆ.

ಸಮಾಜದ ಮುನ್ನಡೆಯಲ್ಲಿ ಎಲ್ಲರಿಗೂ ನಂಬಿಕೆ ಇರುವಂತೆ ಉರ್ದು ಸಾಹಿತ್ಯವೂ ವರ್ಗ ದೃಷ್ಟಿಕೋಣವನ್ನು ಬದಲಾಯಿಸಿ ವರ್ಗರಹಿತ ಅಥವಾ ವರ್ಗಮುಕ್ತ ಸಮಾಜದ ರಚನೆಯಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವ ಸಾಮಾಜಿಕ ಸಂದರ್ಭವನ್ನು ಎದುರಿಸುತ್ತಿದೆ.

ಮೋತಿಲಾಲ್ ಸಾಕಿ

# ಕಾಶ್ಮೀರಿ ಸಾಹಿತ್ಯ : ಜನತಾ ಸಾಮೀಪ್ಯ

ಕಾಶ್ಮೀರಿ ಸಾಹಿತ್ಯ ಚರಿತ್ರೆಯ ವಿಪರ್ಯಾಸವೋ ಅಥವ ಕಾಶ್ಮೀರಿ ಸಾಹಿತ್ಯದ ಅದೃಷ್ಟವೋ, ಅಂತೂ ಕಳೆದ ಎಂಟು-ಒಂಬತ್ತು ಶತಮಾನಗಳಿಂದಲೂ ಅದು ಆಳುವ ವರ್ಗದ ಅಥವ ರಾಜಾಶ್ರಯದ, ಬೆಂಬಲ ಅಥವಾ ಪೋಷಣೆ ಪಡೆಯಲಿಲ್ಲ. ಕಾಶ್ಮೀರಿ ಭಾಷೆ ಮತ್ತು ಸಾಹಿತ್ಯದ ಸ್ವರೂಪವನ್ನು ಜನಸಾಮಾನ್ಯರೇ ರೂಪಿಸಿ, ಬೆಳೆಸಿದರು.

ಕಾಶ್ಮೀರಿ ಸಾಹಿತ್ಯದ ಆರಂಭವನ್ನು ಸಾಮಾನ್ಯವಾಗಿ ಸುಮಾರು ಹನ್ನೆರಡನೆ-ಹದಿಮೂರನೆ ಶತಮಾನದಿಂದ ಗುರುತಿಸುತ್ತಾರೆ. ಅಭಿನವಗುಪ್ತ ಮತ್ತು ಶಿತಿಕಂಠ ಇವರ ಕೃತಿಗಳನ್ನು ಕಾಶ್ಮೀರ ಕಾವ್ಯ ಸಾಹಿತ್ಯದ ಮೊದಲ ಮಾದರಿಗಳೆಂದು ಹೇಳುತ್ತಾರೆ. ಆದರೆ ಲಲ್ಲೆದೀದ್ ಎಂಬುವವನ್ನು ಕಾಶ್ಮೀರಿ ಸಾಹಿತ್ಯದ ಮೊಟ್ಟಮೊದಲ ಕವಯಿತ್ರಿ ಎಂಬ ನಂಬುಗೆ ಬಹು ಜನಪ್ರಿಯವಾಗಿದೆ. ಲಲ್ಲೆದೀದ್ ಅವರು ರಹಸ್ಯವಾದಿಗಳು ಅಥವ ಆಧ್ಯಾತ್ಮವಾದಿಗಳು. ಇವರು ಶೈವ ಪಂಥದ ಅಭಿಮಾನಿಗಳಾಗಿದ್ದುದಷ್ಟೇ ಅಲ್ಲದೆ ಕಾಶ್ಮೀರಿ ಶೈವಮತದ ಸಾರವು ಅವರ ಸಾಹಿತ್ಯ ರಚನೆಯ ತಿರುಳಾಗಿ ಮೂಡಿ ಬಂದಿದೆ. ಶೈವ ಮತವು ಜಾತಿ, ಜನಾಂಗ, ವರ್ಣಭೇದಗಳಿಗೆ ಕಟ್ಟಾ ವಿರೋಧಿಯಾಗಿತ್ತು. ಅಂತೆಯೇ ಅದರ ಪ್ರಭಾವಕ್ಕೊಳಗಾಗಿದ್ದ ಲಲ್ಲೆದೀದ್ ಕವಯಿತ್ರಿಯ ಸಾಹಿತ್ಯರಚನೆಗಳಲ್ಲಿ ಮಾನವ ಮತ್ತು ಮನವೀಯತೆಯ ಹಿರಿಮೆಯ ಸಂದೇಶ ಪ್ರಮುಖವಾಗಿ ಎದ್ದು ಕಾಣುತ್ತದೆ. ಅವರು ಒಂದು ಪದ್ಯದಲ್ಲಿ ಹೀಗೆ ಹೇಳುತ್ತಾರೆ.

> ಆ ಮಹಾನ್ ಶಕ್ತಿ ಕಣಕಣಗಳಲ್ಲಿಯೂ ತುಂಬಿದೆ
> ಹಾಗಿರುವಾಗ ಹಿಂದೂ ಮುಸ್ಲಿಂ ಭೇಧದಲ್ಲಿ ಅರ್ಥವೇ ಇಲ್ಲ
> ಓ, ಬುದ್ಧಿವಂತ ಮಾನವ ನಿನ್ನ ಅಸ್ತಿತ್ವ ನಿನ್ನದಲ್ಲ
> ಇದ ನೀನರಿತರೆ ಭಗವಂತನ ನೀ ಮುಟ್ಟ ಬಲ್ಲೆ.

ಲಲ್ಲೆದೀದ್ ಅವರ ಕವನಗಳು ಅವರ ಜೀವಿತ ಕಾಲದಲ್ಲಿ ಅಚ್ಚು ರೂಪವನ್ನು ಅಥವ ಬರಹ ರೂಪವನ್ನು ಕಾಣಲಿಲ್ಲ. ಅವುಗಳು ಜನಸಾಮಾನ್ಯರ ಭಾವನೆಗಳನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತಿದ್ದುದರಿಂದ ಜನತೆಯಿಂದ ಜನತೆಗೆ ವರ್ಗವಾಗಿ ಉಳಿದು, ಬೆಳೆದು ಬಂದಿವೆ. (ಈಗ ಅವರ ಸಾಹಿತ್ಯ ಕೃತಿಗಳೆಲ್ಲಾ ಪುಸ್ತಕ ರೂಪದಲ್ಲಿ ದೊರೆಯುತ್ತವೆ.) ಇಂದಿಗೂ ಕೂಡ ಕಾಶ್ಮೀರಿ ಜನ ಅವರು ಯಾವುದೇ, ವಾದ ಅಭಿಪ್ರಾಯ ಅಥವ ಮತ

ನಂಬಿಕೆಗಳನ್ನು ಹೊಂದಿದ್ದರೂ ಲಲ್ಲೆದೀದ್‌ಯವರನ್ನು ಲಲ್‌ಮಾತಾ ಎಂಬ ಹೆಸರಿನಿಂದ ನೆನೆಯುತ್ತಾರೆ. ಈಕೆಯ ಸಾಹಿತ್ಯ ರಚನೆಗಳು ಇಂಗ್ಲಿಷ್, ಫ್ರೆಂಚ್, ಜರ್ಮನ್, ಹಿಂದಿ, ಉರ್ದು, ಮುಂತಾದ ಭಾಷೆಗಳಿಗೆ ಅನುವಾದ ಗೊಂಡಿವೆ.

ಕವಿಯಿತ್ರಿ ಲಲ್ಲೆದೀದ್ ಅವರ ನಂತರ ಬಂದ ಮತ್ತೊಬ್ಬ ಗಮನಾರ್ಹ ಸಾಹಿತಿ ಶೇಖ್ ನೂರುದ್ದೀನ್. ಇವರ ಕಾಲವನ್ನು ಹದಿನೂರು-ಹದಿನಾಲ್ಕನೇ ಶತಮಾನ ಎನ್ನುತ್ತಾರೆ. ಇವರನ್ನು ಶೈಕುಲ್‌ಆಲಂ ಎಂಬ ಕಾವ್ಯನಾಮದಿಂದ ಕರೆಯುತ್ತಾರೆ. ಶೇಖ್ ಅವರ ಕಾವ್ಯದಲ್ಲೂ ಮಾನವ ಪ್ರೇಮ, ಸಹೋದರತ್ವ ಮತ್ತು ಸಹನಾಮಯ ಜೀವನ ಭಾವನೆಗಳು ಉಜ್ವಲವಾಗಿ ಪ್ರಕಟಗೊಂಡಿವೆ. ಇಸ್ಲಾಂ ಧರ್ಮದಲ್ಲಿ ಹುಟ್ಟಿದ ಶೇಖ್ ಅವರ ದೈನಂದಿನ ಜೀವನ ಕಾಶ್ಮೀರಿ ಜನಸಾಮಾನ್ಯರ ಆಚಾರ ವಿಚಾರಗಳಿಂದ ಪ್ರಭಾವಿತವಾಗಿದ್ದರೂ ಅವರಿಗೆ ಬೌದ್ಧ ಧರ್ಮದಲ್ಲಿ ಒಲವಿತ್ತು ಎನ್ನಬಹುದು. ಅವರು ಇಡೀ ಜೀವನದಲ್ಲಿ ಮಾಂಸಾಹಾರವನ್ನು ಮುಟ್ಟಲಿಲ್ಲಿ. ಅವರ ಸಸ್ಯಾಹಾರದ ಕ್ರಮ ಎಷ್ಟರ ಮಟ್ಟಿಗೆ ಕಟ್ಟುನಿಟ್ಟಾಗಿತ್ತೆಂದರೆ, ಅವಾಗಿಯೆ ಒಣಗಿದ ಗೆಡ್ಡೆ, ಗೆಣಸು, ಬೇರು, ಸೊಪ್ಪು ಗಳನ್ನು ತಿಂದು ಜೀವಿಸುತ್ತಿದ್ದರು. ಅವರ ಕಾವ್ಯಗಳಲ್ಲಿ ಕಂಡುಬರುವ ಮಾನವ ಪ್ರೇಮ ಮತ್ತು ವಿಶ್ವಬಂದುತ್ವ ವೈಶಾಲ್ಯದ ಪ್ರಭಾವಕ್ಕೆ ಒಳಗಾಗದ ಕಾಶ್ಮೀರಿ ವ್ಯಕ್ತಿಯೇ ಇಲ್ಲ.

ಸರ್ವಸೃಷ್ಟಿಯು ಒಂದೇ ಒಂದು ಮಹಾನ್ ಕ್ರಮದ ಕೆಲಸ
ಈ ವಿಶ್ವ ನಡೆಯುವುದು ಆ-ಕ್ರಮದ ಬಲದಿಂದ
ಈ ಅರಿವು ಜನರಲ್ಲಿ ಮೂಡಿದಾಕ್ಷಣವೇ
ಅಳಸಿಹೋಗುವುದು ವ್ಯಕ್ತಿ ವ್ಯಕ್ತಿಯ ಭೇಧಭಾವ
ನಾಶವಾಗುವುದು ದ್ವೇಷಭಾವನೆಯು ಸಮೂಲಾಗ್ರ

ಶೇಖ್-ಉಲ್-ಆಲಮ್ ಅವರ ನತಂರ ಕಾಶ್ಮೀರಿ ಸಾಹಿತ್ಯ ಬಹಳ ಕಾಲದವರೆಗೆ ರಹಸ್ಯವಾದ ಅಥವ ಅಧ್ಯಾತ್ಮವಾದ ಚೌಕಟ್ಟಿನಲ್ಲೆ ಸುತ್ತುತ್ತಿತ್ತು. ಹಾಗಾಗಿ ಅದು ತನ್ನ ಪ್ರಖರತೆಯನ್ನು ಕಳೆದು ಕೊಂಡಿತು. ಹದಿನಾಲ್ಕನೆ ಶತಮಾನದಿಂದ ನಂತರ ಕಾಶ್ಮೀರದ ಒಟ್ಟು ಇತಿಹಾಸದಲ್ಲಿ ಬಹಳಷ್ಟು ಅಲ್ಲೋಲ ಕಲ್ಲೋಲಗಳು ಉಂಟಾದವು. ಬಹುಶಃ ಸಾಹಿತ್ಯ ಕ್ಷೇತ್ರದ ನಿಷ್ಕ್ರಿಯತೆಗೆ ಈ ಚಾರಿತ್ರಿಕ ಬದಲಾವಣೆಗಳು ಬಹು ಮಟ್ಟಿಗೆ ಕಾರಣ. ಇದರಿಂದ ಸ್ವತಂತ್ರ ಮನೋವೃತ್ತಿಯಿಂದ ಬೆಳಗುತ್ತಿದ್ದ ಸಾಹಿತ್ಯ ಜ್ವಾಲೆ ಕೆಲವು ಕಾಲ ನಂದಿ ಹೋಯಿತು. ಜನತೆಯು ಆತ್ಮ ವಿಶ್ವಾಸವನ್ನು ಕಳೆದು ಕೊಂಡ ಸಂಧಿ ಕಾಲವಿದು.

ಯಾವುದೇ ಸಮಾಜದ ಸಾಹಿತ್ಯ ಆ ಸಮಾಜದ ದುಸ್ಥಿತಿ-ಸುಸ್ಥಿತಿ ಹಾಗೂ ಜನ-ಮನದ ಧನಾತ್ಮಕ ಮತ್ತು ಋಣಾತ್ಮಕ ಮೌಲ್ಯಗಳ ವ್ಯತ್ಯಾಸವೇ ಆಗಿರುತ್ತದೆ. ಇದರಿಂದ ಕಾಶ್ಮೀರ ಇತಿಹಾಸದ ಮೇಲೆ ಹೇಳಿದ ಸಂದರ್ಭದಲ್ಲಿ ಕಾಶ್ಮೀರ ಸಾಹಿತ್ಯವು ಅವನತಿ ಹೊಂದಿತು. ಈ ಸಾಂಸ್ಕೃತಿಕ ಅವನತಿ ಜನರ ಬೌದ್ಧಿಕ ಜೀವನವನ್ನು ಬರಡು ಮಾಡಿತು. ಆದುದರಿಂದಲೇ ಈ ಅವಧಿಯ ಕಾಶ್ಮೀರ ಸಾಹಿತ್ಯದಲ್ಲಿ, ಶೋಷಣಾ

ಪ್ರಧಾನವಾದ ಸಮಾಜದ ಎದುರು ಬಂಡಾಯದ ಕೂಗನ್ನಾಗಲಿ, ಅಸಹನೆಯ ದನಿಯನ್ನಾಗಲಿ ಎತ್ತಿದ ಬರಹಗಾರರು ಬಹಳ ಅಪರೂಪವಾಗಿ ಕಾಣಸಿಗುತ್ತಾರೆ. ಹಬ್ಬ ಖಾತೂನ್ ಕವಯಿತ್ರಿಗೆ (ಕ್ರಿ. ಶ. 16ನೇ ಶತಮಾನ) ರಾಜಾಶ್ರಯು ಧಾರಾಳವಾಗಿ ದೊರೆಯುತ್ತಿದ್ದರೂ ಆಕೆ ಮಧ್ಯಮವರ್ಗ ಅನುಭವಿಸುವ ಕಷ್ಟ ಕೋಟಲೆಗಳನ್ನು ಸ್ವತಹ ಕಂಡಿದ್ದಷ್ಟೇ ಅಲ್ಲದೆ, ಸಾಮಾನ್ಯ ಮಹಿಳೆಯ ಜೀವನವನ್ನು ನರಕವನ್ನಾಗಿ ಮಾಡಿದ ಆ ಸಾಮಾಜಿಕ ಅನಿಷ್ಟಗಳಿಗೆ ಸ್ವತಹ ತಾನೇ ಬಲಿಯಾಗಿದ್ದಳು. ಇಂತಹ ದಬ್ಬಾಳಿಕೆ ವಿರುದ್ಧ ಮೊದಲ ಬಾರಿಗೆ ದನಿಎತ್ತಿದ ಈಕೆ ಒಂದು ಪದ್ಯದಲ್ಲಿ ಹೀಗೆ ಹೇಳಿದ್ದಾಳೆ.

ಅತ್ತೆ ಕರ್ಕಷದ ದನಿಯಲ್ಲಿ ಕಿರುಚಿ
ಕೇಳಿದಳು ತೌರಿಂದ ನೀನೇನ ತಂದೆ
ನಾದಿನಿ ನನ್ನನ್ನು ಮನೆಯೊಳಗೆ ಬಿಡಲಿಲ್ಲ
ಈ ಸ್ಥಿತಿಯ ಗಂಡನ ಮನೆ ಜೀವನ
ಸಹಿಸುವುದು ಬಾಳುವುದು ಹೇಗೆ ಬಹಳಕಾಲ

ದೀರ್ಘ ಅವಧಿಯವರೆಗೆ ಕಾಶ್ಮೀರ ಸಾಹಿತ್ಯದ ಮೇಲೆ ರಹಸ್ಯವಾದ ಅಥವ ಆಧ್ಯಾತ್ಮವಾದ ಹಾಗೂ ಭಕ್ತಿ ಪಂಥದ ದಟ್ಟವಾದ ಪ್ರಭಾವವಿತ್ತು ಎಂಬುದು ನಿರ್ವಿವಾದದ ಮಾತು. ಕ್ರಿ. ಶ. ಹದಿನಾಲ್ಕನೇ ಶತಮಾನದಲ್ಲಿ ಕಾಶ್ಮೀರದ ಬಹಳಷ್ಟು ಜನಸಮುದಾಯ ಇಸ್ಲಾಂ ಧರ್ಮವನ್ನು ಒಪ್ಪಿಕೊಳ್ಳತೊಡಗಿತು. ಆದಾಗ್ಯೂ ಶೈವ ಮತ್ತು ಭೌದ್ಧ ಮತಗಳ ಪ್ರಭಾವ ಸಮಾಜದ ಮೇಲೆ ಇದ್ದಿತು. ಈ ದಟ್ಟ ಪ್ರಭಾವ ಈಗಲೂ ಜನರಲ್ಲಿ ಒಂದಲ್ಲ ಒಂದು ರೀತಿಯಲ್ಲಿ, ಅವರ ಪ್ರಜ್ಞೆಗೆ ಸಿಕ್ಕಿಯೋ ಸಿಗದಯೋ ಅಥವ ಸುಪ್ತ ಚೇತನದಲ್ಲೋ ಅಡಗಿರುವಂತೆ ಕಾಣುತ್ತದೆ. ಕಾಶ್ಮಿರ ಸಾಹಿತ್ಯದ ಇನ್ನೊಂದು ಮುಖ್ಯ ಲಕ್ಷಣ ಎಂದರೆ ಅದು ಆಧ್ಯಾತ್ಮದ ದಟ್ಟಛಾಯೆಯಲ್ಲಿ ಮುಳುಗಿದ್ದರೂ ಕೂಡ ಕಾಶ್ಮೀರದ ಮಾನವಪ್ರೇಮಿ ಕವಿಗಳು ಶಾಂತಿ, ಸೌಹಾರ್ದತೆ, ಸಹೋದರತ್ವ ಮಾನವೀಯತೆ ಮತ್ತು ಜನಾಂಗ ಐಕ್ಯತೆಯನ್ನು ಕುರಿತು ಕವಿತೆಗಳನ್ನು ಹಾಡಿದ್ದಾರೆ. ಈ ಕವಿಗಳು ಅಂದಿನ ಶ್ರೀಮಂತರೂ, ಪ್ರಭುಗಳೂ ಹಾಗೂ ಆಳರಸರ ಸಂಪ್ರೀತಿಗಾಗಿ ಅಗ್ಗದ ಸಾಹಿತ್ಯ ರಚಿಸದೆಯಿದ್ದದ್ದು ಇನ್ನೊಂದು ಗಮನಾರ್ಹ ಅಂಶ. ಇವರು ತಮ್ಮ ಮನದ ಅಳಲನ್ನು ತೋಡಿಕೊಂಡು ಕವಿತೆಗಳನ್ನು ಹಾಡಿದರೆ ವಿನಹ ಯಾರೊಬ್ಬರ ಹೊಗಳಿಕೆಗೂ ಸಾಹಿತ್ಯ ರಚನೆ ಮಾಡಲಿಲ್ಲ. ಇದರಿಂದಾಗಿ ಕಾಶ್ಮೀರಿ ಸಾಹಿತ್ಯದಲ್ಲಿ "ಖಸೀದಾ" ಬಗೆಯ (ಒಬ್ಬ ವ್ಯಕ್ತಿಯ ಅಥವ ಪ್ರಭುವಿನ ಗುಣಗಾನ ಮಾಡುವ ಕಾವ್ಯದ ರೂಪ) ಕಾವ್ಯರೂಪ ಕಂಡುಬರುವುದಿಲ್ಲ. ಆನಂದರಾಮ್ ಎಂಬ ಹಿಂದೂ ಕವಿ (ಕಾವ್ಯನಾಮ : ಮುಖಲಿಸ್) ಅವರು ಪ್ರವಾದಿ ಪೈಗಂಬರರ ಬಗ್ಗೆ ಬರೆದದ್ದು ಶಾಗಫೂರ್ ಎಂಬ ಮುಸ್ಲಿಂ ಕವಿ ಭಗವಾನ್, ಬ್ರಹ್ಮ ವಿಷ್ಣು ದೇವತೆಗಳ ಪ್ರಚಂಡ ಶಕ್ತಿಯನ್ನು ಹೊಗಳುವುದರಲ್ಲಿ ಹೆಮ್ಮೆಪಟ್ಟದ್ದು ಭಾವೈಕ್ಯತೆಯ ಹಾಗೂ ಹೃದಯ ವೈಶಾಲ್ಯದ ಕುರುಹಾಗಿಕಂಡುಬರುತ್ತದೆ. ಹಮ್‌ದೀರ್ ತಮ್ಮ ಸಾಹಿತ್ಯ ರಚನೆಗಳಲ್ಲಿ

ಶಾಸ್ತ್ರಗಳ ಆಳವಾದ ಭೇದವನ್ನು ವರ್ಣಿಸಿದ್ದಾರೆ. ಪಂಪಫಕೀರ್ ಅವರು ಹಿಂದೂ ಪೌರಾಣಿಕ ಹಾಗು ಧಾರ್ಶನಿಕ ವಸ್ತುಗಳನ್ನು ಉಪಯೋಗಿಸಿಕೊಂಡು ತನ್ನ ಆಂತರಿಕ ಅನುಭಾವಗಳಿಗೆ ಅಭಿವ್ಯಕ್ತಿ ಕೊಟ್ಟಿದ್ದಾರೆ. ಸಂತಕವಿಗಳು ತಮ್ಮ ಕಾವ್ಯದಲ್ಲಿ ಆಂತರಿಕ ಅನುಭವದ ಅಭಿವ್ಯಕ್ತಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದರೂ ಜನಸಾಮಾನ್ಯರ ಭಾವನೆಗಳ ಹಾಗೂ ಅವರ ಜೀವನದ ದೃಶ್ಯಗಳ ವರ್ಣನೆಗಳು ಅವರ ಕೃತಿಗಳಲ್ಲಿ ಕಾವ್ಯವಸ್ತು ಗಳಾಗಿವೆ. ಹವ್‌ದೀರ್‌ನ "ಜರಾಬಚ್‌ಸನೇಸೆ ಬಾಜ್ ಆಜಾ" (ಬಾಲಿಶತನದಿಂದ ಹೊರಗೆ ಬಾ) ಎಂಬ ಕವಿತೆ ಇದಕ್ಕೆ ಉದಾಹರಣೆಯಾಗಿದೆ. ಇಲ್ಲಿ ಹವ್‌ದೀರ್ ಕವಿಗಳು ಸಮಾಜದ ವಾಸ್ತವತೆಯನ್ನು ಗುರುತಿಸಿ ಶೋಷಕವರ್ಗದ ಸ್ವಭಾವವನ್ನು ಬಯಲಿಗೆಳೆದಿದ್ದಾರೆ. ಇವರು ಮೂಲದಲ್ಲಿ ಅಂತರ್ಮುಖಿ ಕವಿಯಾಗಿದ್ದರೂ ಜೀವನದ ವಾಸ್ತವತೆಯನ್ನು ಚಿತ್ರಿಸದೆಯಿರುವುದರಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

1917ರಲ್ಲಿ ರಷ್ಯಾದಲ್ಲಿ ನಡೆದ ಸಮಾಜವಾದಿ ಕ್ರಾಂತಿಯು ಜಗತ್ತಿನ ಎಲ್ಲಾ ರಾಷ್ಟ್ರಗಳ ಮೇಲೂ ಪ್ರಭಾವ ಬೀರಿತು. ಬಹುತೇಕ ದೇಶಗಳ ಬುದ್ಧಿಜೀವಿಗಳು ಅದರಲ್ಲೂ ಮುಖ್ಯ ವಾಗಿ ಬರಹಗಾರರು ಅದರ ಪ್ರಭಾವವನ್ನು ಸ್ವಾಭಾವಿಕವಾಗಿ ಸ್ವೀಕರಿಸಿದರು. ಬದಲಾದ ವಿಚಾರಗಳು ಕಶ್ಮೀರಿ ಸಾಹಿತಿಗಳ ಮೇಲೆ ತಡವಾಗಿ ಆದರೂ ಬಹು ಸ್ಪಷ್ಟ ಪ್ರಭಾವವನ್ನು ಬೀರಿದವು. ಇಪ್ಪತ್ತನೇ ಶತಮಾನದ ಮೂರನೇ ದಶಕದಲ್ಲಿದ್ದ ಕವಿಗಳು ಹೊಸ ಬಾಳಿನ ಕವಿತೆಗಳನ್ನು ಕಟ್ಟಿ ಹಾಡತೊಡಗಿದರು. ಕೆಲವರಂತೂ ಹೀಗೆ ಬೆಳೆಸಿಕೊಂಡ ಪ್ರಜ್ಞೆ ಯಿಂದಾಗಿ ಆಳುವ ವರ್ಗದ ವಿರುದ್ಧ ಬಂಡೆದ್ದರು. ಇಂಥ ಕ್ರಾಂತಿ ಮನೋಭಾವದ ಕವಿಗಳಲ್ಲಿ ಗುಲಾಮ್ ನಬಿದಲ್ ಸೋಜ್ (ಮರಣ : 1943) ಗುಲಾಮ್ ಅಹಮ್ಮದ್ ಮಹ್‌ಜೂರ್ (ಮರಣ: 1932) ಮತ್ತು ಅಬ್ದುಲ್ ಅಹದ್ ಆಜಾದ್ (ಮರಣ: 1948) ಅಗ್ರಗಣ್ಯರು. ಇವರ ಲೇಖನಿ ಪ್ರೇಮ-ಕಾಮ ಮುಂತಾದ ವಿಚಾರಗಳ ಬಗ್ಗೆ ಬರೆಯದೆ ವಾಸ್ತವ ಜೀವನದ ಬಗ್ಗೆ ಹೇಳಿತು. ಇವರು ತಮ್ಮ ಕೃತಿಗಳಲ್ಲಿ ಜನತೆಯ ಆಶೋತ್ತರ ಗಳನ್ನು ಪ್ರತಿಬಿಂಬಿಸುವ ಪ್ರಯತ್ನ ಮಾಡಿದರು. ಆಗಿನ ಸಮಾಜಪದ್ಧತಿ ಎನಿಸಿದ ಊಳಿಗಮಾನ್ಯ ಪದ್ಧತಿಯ ವ್ಯವಸ್ಥೆ ವಿರುದ್ಧ, ಅಲ್ಲಿನ ಆಳುವ ವರ್ಗದ ವಿರುದ್ಧ ನಿರ್ಭೀತಿ ಯಿಂದ ಘೋಷಣೆ ಕೂಗಿದರು. ಗುಲಾಮ್‌ನದಿಲ್‌ಸೋಜಿ ಅವರು ತಮ್ಮ ಒಂದು ಕವಿತೆ ಯಲ್ಲಿ ಹೀಗೆ ಹೇಳಿದ್ದಾರೆ.

> ಓ ಯುವಕನೆ, ನಿನ್ನ ಜೀವನವ ಪಣಕ್ಕಿಟ್ಟು
> ಕ್ರಾಂತಿ ಕಹಳೆಯ ಊದು, ಬಿರುಗಾಳಿಯಾಗು
> ಹಳಿತ ಕೊಳೆತ ವ್ಯವಸ್ಥೆಯ ವಿರುದ್ಧ ಒಂದೇ ಸಮನೆ ಹೋರಾಡು
> ಕಿತ್ತಾಕು ಅದರ ಭದ್ರ ಬುನಾದಿಯ
> ಆಗ ಪ್ರಾಣ ಹೋದರೂ ನಿನಗೆ ಅನುರತ್ನ ಶಾಶ್ವತ

ಗುಲಾಮ್ ಅಹಮದ್ ಮೆಹ್‌ಜೂರ್ ಅವರು ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

ಏ, ಮಾಲಿ, (ರೈತ) ಏಳು ಎದ್ದೇಳು
ಮುನಿಸಿಕೊಂಡು ಹೋದ ಆ ವಸಂತ ದಿನಗಳನ್ನು
ಮತ್ತೆ ತರಲು ಶಕ್ತ ನೀನೊಬ್ಬನೆ
ಈ ತೋಟದಲ್ಲಿ ಬಣ್ಣ ಬಣ್ಣದ ಸಾವಿರಾರು ಹೂಗಳು
ಅರುಳುವಂತೆ ಮಾಡು

ಅಬ್ದುಲ್‌ಅಹದ್‌ಆಜಾದ್ ಅವರು ವಿಶೇಷ ಗಮನ ಸೆಳೆಯುವ ಕವಿ. ಕಾಶ್ಮೀರಿ ಸಾಹಿತ್ಯದ ಕವಿಗಳಲ್ಲಿ ಮಾರ್ಕ್ಸ್‌ವಾದಿ ದೃಷ್ಟಿಕೋಣವನ್ನು ಬೆಳಸಿಕೊಂಡು ಅಳವಡಿಸಿಕೊಂಡ ಹಾಗೂ ಕ್ರಾಂತಿಯ ಸ್ಪಷ್ಟ ಪರಿಕಲ್ಪನೆಯನ್ನು ಹೊಂದಿದ್ದ ಮೊದಲನೆ ಕವಿ. ಆದ್ದರಿಂದಲೇ ಇವರ ಕವಿತೆಗಳಲ್ಲಿ ಸಾಹಿತ್ಯ ಪ್ರೌಢಿಮೆಯನ್ನು ಕಾಣಬಹುದು. ಇವರು ಒಬ್ಬ ಸರಕಾರಿ ನೌಕರರಾಗಿದ್ದರು. ಆದರೂ ಇವರ ಕವಿತೆಗಳು ಸರಕಾರದ ವಿರುದ್ಧ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಜನತೆಯ ರಕ್ತವನ್ನು ಬಿಸಿ ಮಾಡುವಲ್ಲಿ ಸಾಕಷ್ಟು ಕೆಲಸ ಮಾಡಿದವು. ಅಬ್ದುಲ್ ಅಹದ್ ಆಜಾದ್ ಅವರು ಇಕ್ಬಾಲ್ ಅವರ ಸಾಹಿತ್ಯದಿಂದ ಪ್ರಭಾವಿತಗೊಂಡನರಂತೆ ಕಂಡರೂ ಇಕ್ಬಾಲ್ ಅವರ ಶುದ್ಧ ಇಸ್ಲಾಂ ಪರಿಕಲ್ಪನೆಯನ್ನೂ ಮತ್ತು ಎರಡು ರಾಷ್ಟ್ರಗಳ ಸಿದ್ಧಾಂತವನ್ನೂ ಪೂರ್ತಿಯಾಗಿ ತಿರಸ್ಕರಿಸಿದರು. ಆಜಾದ್ ತಮ್ಮ ಒಂದು ಪದ್ಯದಲ್ಲಿ ಹೀಗೆ ಹೇಳಿದ್ದಾರೆ.

ದೇವರು ವಿವಿಧ ಮತ ನಂಬಿಕೆಗಳನ್ನು ಹೇಳಿದ್ದರೆ
ಒಬ್ಬೊಬ್ಬರಿಗೂ ಒಂದೊಂದು ಪ್ರಪಂಚವನ್ನೇ ನಿರ್ಮಿಸುತ್ತಿದ್ದನು.

ಯುವಕರನ್ನುದ್ದೇಶಿಸಿ ಒಂದುಕಡೆ ಹೀಗೆ ಹೇಳಿದ್ದಾರೆ.

ಓ ಯುವಕ, ನೀನಂತು ಹೂ ಹಾಸಿಗೆಯಲ್ಲಿ ಮಲಗಿದ್ದೀಯಾ. ಹುಲಿಯಂಥ ಶೂರ ಹೂದೋಟದಲ್ಲಿ ಜನ್ಮತಾಳುವುದಿಲ್ಲ ಎನ್ನುವುದು ನಿನಗೇಕೆ ಅರ್ಥವಾಗುತ್ತಿಲ್ಲ ?

ಭಾರತದಲ್ಲಿ ಪ್ರಗತಿಪರ ಬರಹಗಾರರ ಸಂಘ 1936ರಲ್ಲಿ ಪ್ರಾರಂಭವಾಯಿತು. ಈ ಚಳುವಳಿ ಉರ್ದು ಭಾಷೆಯಲ್ಲಿ ಬಹಳ ಪ್ರಬಲವಾಗಿ ಆರಂಭಗೊಂಡಿತು. ಕಾಶ್ಮೀರದಲ್ಲಿ ಆಗ್ಗೆ ಉರ್ದು ಭಾಷೆಯು ಬಹಳ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಹಾಗಾಗಿ, ಈ ಚಳುವಳಿ ಕಾಶ್ಮೀರದಲ್ಲಿ ಶೀಘ್ರವಾಗಿ ಹರಡಿತು. 1942ರಲ್ಲಿ ಕಾಶ್ಮೀರದಲ್ಲಿ ಪ್ರಗತಿ ಪರ ಬರಹಗಾರರ ಸಂಘವು ಹುಟ್ಟಿಕೊಂಡಿತು. 1942 ರಿಂದ 1960ರವರೆಗಿನ ಅವಧಿಯನ್ನು ಪ್ರಗತಿಪರ ಸಾಹಿತ್ಯ ಚಳುವಳಿಯ ಪ್ರಭಾವದ ಕಾಲ ಎನ್ನಬಹುದು. ಈ ಅವಧಿಯಲ್ಲಿ ಬಂದ ಸಾಹಿತ್ಯ ಕೃತಿಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಈ ಚಳುವಳಿಯ ಪ್ರಭಾವಕ್ಕೊಳಗಾಗಿದ್ದವು. ಈಗಿನ ಪ್ರಮುಖ ಲೇಖಕರೂ ಕೂಡ ಅಂದಿನ ಪ್ರಗತಿಪರ ಸಾಹಿತ್ಯ ಚಳುವಳಿಯಿಂದ ಸೃಷ್ಟಿಗೊಂಡವರೇ ಆಗಿದ್ದಾರೆ. ಈ ಪ್ರಗತಿಪರ ಸಾಹಿತ್ಯದಲ್ಲಿ ಬಹು ಮೌಲ್ಯವುಳ್ಳ ಗಹನ ವಿಚಾರಗಳು ತುಂಬಿಕೊಂಡದ್ದಷ್ಟೇ ಅಲ್ಲದೆ ವ್ಯವಸ್ಥಿತವಾದ ಗದ್ಯ ಸಾಹಿತ್ಯವೂ ಹೊರ ಬಿದ್ದಿತು. ಜೊತೆಗೆ ಈ ಚಳುವಳಿ ಕಾಶ್ಮೀರ ಸಾಹಿತ್ಯದಲ್ಲಿ ಸರಳರಗಳೆ ಮತ್ತು ಸಾಂಗತ್ಯ, ನಾಟಕ, ಸಣ್ಣ ಕಥೆಗಳು ಕಾದಂಬರಿಗಳು ಮುಂತಾದ ಸಾಹಿತ್ಯ ಪ್ರಕಾರ

ಗಳನ್ನು ಪ್ರಚಾರಕ್ಕೆ ತಂದಿತು. ಕಾಶ್ಮೀರಿ ಭಾಷೆಯಲ್ಲಿ ಮೊಟ್ಟಮೊದಲ ಸಾಹಿತ್ಯಕ ನಿಯತಕಾಲಿಕವಾದ 'ಕೂಂಗ್ ಪೋಷ್' (ಒಂದು ಜಗೆಯ ಹೂ) ಪ್ರಕಟಗೊಂಡದ್ದೂ ಪ್ರಗತಿಪರ ಸಾಹಿತ್ಯ ಚಳುವಳಿಯ ಅಂಗವಾಗಿಯೇ. ಈ ಪತ್ರಿಕೆ ಬಹು ದೀರ್ಘಕಾಲ ಬದುಕಿತ್ತು.

ಕಾಶ್ಮೀರದ ಪ್ರಗತಿಪರ ಸಾಹಿತ್ಯ ಚಳುವಳಿಯ ಮಾತು ಬಂದಾಗಲೆಲ್ಲ ದೀನನಾಥ್ (ಕಾವ್ಯನಾಮ: ನಾದಿಮ್) ಅವರ ಹೆಸರು ಮೊದಲಿಗೇ ಬರುತ್ತದೆ. ಇವರು ಸಂಪ್ರದಾಯದಲ್ಲಿನ ಉಪಯುಕ್ತ ಅಂಶಗಳನ್ನು ಉಳಿಸಿಕೊಂಡು ಕುರುಡು ಸಂಪ್ರದಾಯದ ವಿರುದ್ಧ ಬಂಡಾಯ ಸಾರಿದರು. ದೀನನಾಥ್ ಅವರು ಹೊಸ ಕಾವ್ಯ ಮಾರ್ಗದ ಪ್ರವರ್ತಕರಷ್ಟೆ ಅಲ್ಲದೆ ಸ್ವತಃ ಆಮಾರ್ಗವನ್ನನುಸರಿಸಿ ಕಾವ್ಯ ರಚಿಸಿದರು. ಇವರ ವೈಯುಕ್ತಿಕ ಹಾಗೂ ಸಾಹಿತ್ಯಕ ವಿಶಿಷ್ಟ ವ್ಯಕ್ತಿತ್ವದ ಎದುರು ಅವರ ಸಮಕಾಲೀನ ಬರಹಗಾರರು ತುಂಬಾ ಸಣ್ಣವರಾಗಿ ಕಾಣುತ್ತಾರೆ. ಇವರು ಮಧ್ಯಮ ವರ್ಗದಿಂದ ಬಂದವರಾದರೂ ತಾವು ಗಳಿಸಿ ಬೆಳೆಸಿಕೊಂಡ ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯಿಂದಾಗಿ ಸಮುದಾಯದ ನಿಜವಾದ ಕವಿಗಳೆನಿಸಿಕೊಂಡರು. ಇವರ ಕಾವ್ಯವು ದುಡಿಮೆಗಾರರ ಹೃದಯದ ಬಡಿತವನ್ನು ಮತ್ತು ಅವರ ಬೆವರಿನ ವಾಸನೆಯನ್ನು ಹೊಂದಿತಲ್ಲದೆ ಶ್ರಮಿಕರ ಭವ್ಯ ಭವಿಷ್ಯದ ಸಮಾಜದ ಸಂದೇಶವೂ ಇರುತ್ತಿತ್ತು. ಈ ಸಾರ್ವಕಾಲಿಕ ಗುಣಗಳೇ ಅವರನ್ನು ವಿಶಿಷ್ಟ ಕವಿಯಾಗಿ ಉಳಿಸಿಕೊಂಡಿದೆ. ಇವರ ಕಾವ್ಯದಲ್ಲಿ ಸಿಡಿಲಿನ ಘರ್ಜನೆಯೂ ಮಿಂಚಿನ ಹೊಳಪೂ ಕತ್ತಿಯ ಹರಿತವೂ ಇದೆ. ಭಾರತೀಯ ಸಾಹಿತ್ಯವನ್ನು ಮಾರ್ಕ್ಸ್‌ವಾದಿ ದೃಷ್ಟಿಯಿಂದ ನೋಡುವಾಗ ಕಾಶ್ಮೀರಿ ಸಾಹಿತ್ಯ ಸಂಥರ್ಭದಲ್ಲಿ ಇವರ ಕಾವ್ಯ ಅಂಥ ಸಂಶೋಧನೆಗೆ ಯೋಗ್ಯ ನಿಧಿಯಂತಿದೆ. 'ನಾದಿಮ್' ಅವರ ಕಾವ್ಯವು ದಬ್ಬಾಳಿಕೆ ಮತ್ತು ತುಳಿತಕ್ಕೆ ಒಳಗಾದ ದಲಿತರ ಹಾಗೂ ಶ್ರಮಿಕರ ದನಿಯಾಗಿದೆ. ಇವರು ಪಾಬ್ಲೊ ನೆರೂದ, ಸಮದ್‌ವರ್ಗೊವ್, ಖಾಜಿನಜರುಲ್ ಇಸ್ಲಾಂ, ಮಯ್ಕೊವ್‌ಸ್ಕಿ ಮುಂತಾದ ಶ್ರೇಷ್ಠ ಕವಿಗಳ ಸಾಲಿನಲ್ಲಿ ಸೇರುತ್ತಾರೆ. ಕಾಶ್ಮೀರಿ ಸಾಹಿತ್ಯಕ್ಕೆ ಇವರ ಕೊಡುಗೆ ಬಹು ಬೆಲೆಯುಳ್ಳದ್ದು ಹಾಗೂ ಅಪಾರವಾದದ್ದು. ಇವರ "ಜಂಗ್ ಬಾಜ್ ಖಬರ್ ಬಾಜೋ" (ಯುದ್ದ ಪ್ರಿಯರೆ, ಎಚ್ಚರಿಕೆ), "ಮ್ಯೆ ಆಜ್ ನಹಿಗಾವೂಂಗ" (ನಾನು ಈದಿನ ಹಾಡುವುದಿಲ್ಲ), "ಮ್ಯೆ ಕಲ್‌ಕೆ ಸಹಾರೆ ಜಿಂದಾಹೂ" (ನಾನು ನಾಳೆಯ ಆಸೆಯಲ್ಲಿ ಬದುಕಿದ್ದೇನೆ), "ಮೇರಾವತನ್" (ನನ್ನ ದೇಶ) "ಮೇರೆ ಗೀತೋನೆ ಕ್ಯಾಕಹ" [ನನ್ನ ಹಾಡುಗಳು ಏನು ಹೇಳಿರುವು], ಗುಲ್-ಏ-ಲಾಲಾ [ಕೆಂಪು ಹೂ] ಮತ್ತು ಫಾಕ್ತ [ಗೂಗೆ] ಎಂಬ ಪದ್ಯಗಳೂ, 'ಜವಾಬಿಕಾರಿ' [ಜವಾಬು ಪತ್ರ] ಎಂಬ ಸಣ್ಣ ಕಥೆಯೂ "ಭವರ್‌ಔರ್ ನರ್ಗಿಸ್" [ದುಂಬಿ ಮತ್ತು ಹೂ] ಎಂಬ ಪ್ರಪಥಮ ಸಂಗೀತ ನಾಟಕವೂ ಕಾಶ್ಮೀರ ಸಾಹಿತ್ಯಕ್ಕೆ ಅವರಿತ್ತ ಅಮೂಲ್ಯ ಕೊಡುಗೆಗಳಾಗಿವೆ. ನಾದಿಮ್ ಅವರು ಇಪ್ಪತ್ತು ವರುಷಗಳಿಗೂ ಮೀರಿ ಕಾಶ್ಮೀರಿ ಸಾಹಿತ್ಯದ ಮೇಲೆ ಪ್ರಭಾವವನ್ನು ಉಳಿಸಿಕೊಂಡಿದ್ದರು.

ಇಂದಿಗೂ ಇವರ ಕಾವ್ಯವು ಕಾಶ್ಮೀರಿ ಸಾಹಿತಿಗಳಿಗೆ ಮಾದರಿಯಾಗಿ ಉಳಿದಿದೆ. ನಾದಿಮ್ ಅವರು ಒಂದು ತಲೆಮಾರು ಕವಿಗಳನ್ನೇ ತಮ್ಮ ಪ್ರಭಾವದಲ್ಲಿ ಇರಿಸಿಕೊಂಡಿದ್ದರು. ಇವರ ಕಾವ್ಯ ಪ್ರಭಾವದಿಂದ ತಪ್ಪಿಸಿಕೊಂಡವರು ಬಹಳ ಅಪರೂಪ. ನಾದಿಮ್ ಅವರ ನಂತರ ಬಂದ ಪ್ರಗತಿಪರ ಸಾಹಿತಿಗಳೆಲ್ಲರೂ ಅವರ ಅನುಯಾಯಿಗಳೇ ಆಗಿದ್ದಾರೆ.

ನಾದಿಮ್ ಅವರ ನಂತರ ಬಂದ ಪ್ರಗತಿಪರ ಸಾಹಿತ್ಯ ಚಳುವಳಿಯ ಕವಿಗಳೆಂದರೆ, ರಾಹಿ, ಕಾಮಿಲ್, ಸಾಕಿ, ಆಜಿಮ್, ಖಯಾಲ್, ಚಮನ್, ಆರೀಫ್, ರೋಷನ್ ಮತ್ತು ಆರಿಜ್ ಮುಂತಾದವರು ಮುಖ್ಯರು. ಇವರೆಲ್ಲರೂ ಸ್ವಸಾಮರ್ಥ್ಯವುಳ್ಳ ಕವಿಗಳು. ಕಾಶ್ಮೀರಿ ಸಾಹಿತ್ಯದ ಭವಿಷ್ಯವು ಈ ಸಾಹಿತಿಗಳ ಭವಿಷ್ಯವನ್ನವಲಂಬಿಸಿದೆ. ಈ ಕವಿಗಳು ತಮ್ಮ ಕೃತಿಗಳಿಂದ ಕಾಶ್ಮೀರಿ ಸಾಹಿತ್ಯವನ್ನು ಶ್ರೀಮಂತ ಗೊಳಿಸುತ್ತಿದ್ದಾರೆ. ಇವರುಗಳು ತಮ್ಮ ತಮ್ಮ ತಾತ್ತ್ವಿಕ ಧೋರಣೆಗಳಲ್ಲಿ ಭಿನ್ನಾಭಿಪ್ರಾಯ ಪಡೆದಿದ್ದಾರೆ ಎನ್ನುವುದು ಸದ್ಯಕ್ಕೆ ಸಂಬಂದ ಪಡೆದ ವಿಷಯ. ಆರಿಜ್ ಅವರು ಅಕಾಲ ಮೃತ್ಯುವಿಗೆ ತುತ್ತಾದರು. ರೋಷನ್ ಅವರು ಬಹಳ ಕಾಲದಿಂದ ಮೌನವಾಗಿದ್ದಾರೆ.

'ಜದಿದೀಯತ್' [ನವ್ಯ] ಸಾಹಿತ್ಯ ಮಾರ್ಗದ ಪೋಷಕನ್ನು ಧರಿಸಿದವರಲ್ಲಿ ರೆಹಮಾನ್ ರಾಹಿ ಅವರು ಪ್ರಮುಖರಾಗಿದ್ದಾರೆ. ಇವರಲ್ಲದೆ ಈ ಮಾರ್ಗವನ್ನು ಅನುಸರಿಸಿದವರಲ್ಲಿ ಹಾಮಿದಿ ಮತ್ತು ಅಜಿಮ್ ಕೂಡಾ ಮುಖ್ಯರು. ನವ್ಯಕವಿಗಳಾದ ಇವರುಗಳು ಜೀವನದ ವಾಸ್ತವತೆಯಿಂದ ಮುಖ ತಿರುವಿದ್ದರೂ ಇವರ ಕೃತಿಗಳಲ್ಲಿ ಕೆಲವು ಭಾವನೆಗಳು ತೀವ್ರವಾಗಿ ಹಾಗೂ ಹರಿತವಾಗಿ ಬಂದಿವೆ.

ಕಾಶ್ಮೀರದಲ್ಲಿ ಇಂದಿಗೂ ಪ್ರಗತಿಪರ ಸಾಹಿತ್ಯ ಸಂಘ ಉಳಿದಿದೆ. ಅದನ್ನು ಪುನರ್ ಸಂಘಟಿಸುವ ಯತ್ನ ನಡೆದಿದೆ. ಈ ಸಂಘಕ್ಕೆ ಸೇರಿದ ಸಾಹಿತಿಗಳಲ್ಲಿ ಬರಹಗಾರರಿಗಿಂತ ಮಾತುಗಾರರೇ ಜಾಸ್ತಿಯಾಗಿದ್ದಾರೆ. ಆದರೆ ಇಲ್ಲಿನ ಯಾವ ಪ್ರಮುಖ ಲೇಖಕರೂ ಈ ಸಂಘದ ಸಂಬಂಧವಿಟ್ಟುಕೊಂಡಿಲ್ಲ. ಅಬ್ದುಲ್ ಸತ್ತಾರ್ ರಂಜೂರ್ ಎಂಬ ಕವಿಯ ಕವನಗಳು ಜನತಾ ಕವನಗಳಾಗಿವೆ. ಇವರ ಕೃತಿಗಳಲ್ಲಿ ಕಾವ್ಯಕ್ಕೆ ಶ್ರೇಷ್ಠತೆಯನ್ನು ತರುವಂಥ ಪ್ರೌಢಿಮೆಯ ಕೊರತೆಯಿದೆ. ಆದರೆ ಇವರ ಸಾಹಿತ್ಯ ಸೃಷ್ಠಿಯ ಪ್ರಾಮುಖ್ಯವನ್ನು ಕಡೆಗಾಣುವಂತಿಲ್ಲ.

ಕಾಶ್ಮೀರಿ ಗದ್ಯ ಸಾಹಿತ್ಯ ಕಳೆದ ಶತಮಾನದಲ್ಲೇ ಆರಂಭವಾಗಿದ್ದರೂ ಅದರ ವೇಗ ತುಂಬಾ ಮಂದವಾಗಿದೆ. ಪಾರಾಚಂದ್ ಬಿಸ್ಮಿಲ್ ಅವರ ಧಾರ್ಮಿಕ ನಾಟಕಗಳು ಈ ದಿಸೆಯಲ್ಲಿ ಸ್ವಲ್ಪಮಟ್ಟಿಗೆ ಕೆಲಸ ಮಾಡಿದವು. ಮೊಹಿಯುದ್ದೀನ್ ಹಾಜಿನಿ ಅವರು 1940 ರಲ್ಲಿ ಬರೆದ ಕಿಸಾನ್ ಕ ಘರ್ [ರೈತನ ಮನೆ] ನಾಟಕವು ಸಮುದಾಯದ ಜೀವನವನ್ನು ಯಥಾವತ್ತಾಗಿ ಪ್ರತಿಬಿಂಬಿಸುತ್ತದೆ. ಅಂದಿನ ರೈತರ ದುರಾವಸ್ಥೆಯು ತನ್ನೆಲ್ಲಾ ತೀವ್ರತೆಯಿಂದ ಮೂಡಿ ಬಂದಿದೆ.

ಕಾಶ್ಮೀರಿ ಸಾಹಿತ್ಯದ ಹರವನ್ನು ಹೆಚ್ಚಿಸಿದ ಕೀರ್ತಿ ಪ್ರಗತಿಪರ ಲೇಖಕರಿಗೇ ಸೇರುತ್ತದೆ. ಗದ್ಯ ಸಾಹಿತ್ಯದಲ್ಲೂ ಇವರದೇ ಮೇಲುಗೈ. ಸಮಾಜದ ಅನಾರೋಗ್ಯಕರ ಅಂಶ

ಗಳ ಬಗ್ಗೆ ಗಮನ ಸೆಳೆಯುವ ಈ ಲೇಖಕರು ಜನಸಾಮಾನ್ಯರ ಜೀವನಕ್ಕೆ ಕನ್ನಡಿ ಹಿಡಿದು ನೋಡಿದ್ದಾರೆ. ಅಕ್ತರ್ ಮೊಹಿಯುದ್ದೀನ್, ಅಮೀನ್ ಖಾಮಿಲ್, ಅಲಿ ಮಹಮ್ಮದ್, ಲೂನ್, ಮೋತಿಲಾಲ್ ಸಾಕಿ, ಹರಿಕಿಷನ್ ಕೌಲ್, ಬನ್ಸಿನಿರ್ದೋಷ್, ಹೃದಯಕವಲ್ ಭಾರತಿ ಮುಂತಾದ ಕೆಲವರು ಹೆಸರಿಸಬಹುದಾದ ಗದ್ಯ ಲೇಖಕರು. ಪುಷ್ಕರ್ ಭಾನ್ ಮತ್ತು ಸೋಮನಾಥ್ ಸಾಧು ಇನ್ನಿಬ್ಬರು ಗಮನ ಸೆಳೆಯುವ ಸಾಹಿತಿಗಳು. ಇವರುಗಳು ಒಳ್ಳೆಯ ನಾಟಕಕಾರರೂ ಹೌದು ಸ್ವತಃ ನಟರೂ ಹೌದು. ಇವರ ಕೃತಿಗಳು ಪಂಡಿತರಿಂದಲೂ ಪಾಮರರಿಂದಲೂ ಮೆಚ್ಚುಗೆ ಗಳಿಸಿವೆ. ಇವರ ನಾಟಕಗಳಲ್ಲಿ ಮಧ್ಯಮವರ್ಗದ ಪೊಳ್ಳುತನ, ಮೇಲುವರ್ಗದ ಹಾಗೂ ಬುದ್ಧಿಜೀವಿಗಳ ಬೌದ್ಧಿಕ ಹಾದರವನ್ನು ಚಿತ್ರಿಸುತ್ತವೆ. ಇವರ ನಾಟಕಗಳಲ್ಲಿನ ಪಾತ್ರಗಳು ಕಾಶ್ಮೀರಿ ಜನರ ಮನಸ್ಸಿನಲ್ಲಿ ಮತ್ತು ಕಾಶ್ಮೀರಿ ಸಾಹಿತ್ಯದಲ್ಲಿ ಒಂದು ಭದ್ರವಾದ ಸ್ಥಾನವನ್ನು ಪಡೆದುಕೊಂಡಿವೆ. 'ಮುಜಾಮ' 'ಸುಲಾಗೂಟ', 'ರೆಹಮಾನ್‌ದಾದ', 'ಆಗಾಸಾಹೇಬ್', 'ಖಾಲಿಕಾಕ್', ಮುಂತಾದ ಪಾತ್ರಗಳು ಚಿರಸ್ಮರಣೀಯ ಪಾತ್ರಗಳಾಗಿವೆ. ಕಳೆದ ಹತ್ತಾರು ವರುಷಗಳಿಂದೀಚೆಗೆ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದ ಸಾಹಿತಿಗಳು ಇನ್ನೂ ಗೊಂದಲದಲ್ಲಿದ್ದಾರೆ. ಆದಾಗ್ಯೂ ಈ ಹೊಸಬರಲ್ಲಿ ರಫೀಕ್‌ರಾಜ್, ಫಾರೂಖ್‌ಮಸೂದಿ ಇವರಿಬ್ಬರ ಹೆಸರುಗಳು ಗಮನ ಸೆಳೆಯುತ್ತವೆ.

ಕಾಶ್ಮೀರಿ ಸಾಹಿತ್ಯದಲ್ಲಿ, ಇಂದು ಬರೆಯುತ್ತಿರುವ ಬಹಳ ಮಂದಿ ಲೇಖಕರು ನಗರದಿಂದ ಬಂದ ಮಧ್ಯಮ ವರ್ಗದವರೊ ಅಥವಾ ಹಳ್ಳಿಯ ಸಣ್ಣ ಭೂಹಿಡುವಳಿದಾರರ ಸಂಸಾರದಿಂದ ಬಂದವರೋ ಆಗಿದ್ದಾರೆ. ಆದರೆ ಇವರ ಸಾಹಿತ್ಯದಲ್ಲಿ ಸಮುದಾಯದ ಸುಖದುಃಖಗಳು ಜನತೆಯ ಅನುಕಂಪೆ ಮುಂತಾದ ವಿಷಯಗಳಿಂದ ಪ್ರಭಾವಿತವಾಗಿದೆ. ಅದರಿಂದಾಗಿ ಇವರು ಜನತಾ ಸಾಮೀಪ್ಯವನ್ನು ಬಯಸುವವರಾಗಿದ್ದಾರೆ.

---

**ಗಂಗಾಧರಮೂರ್ತಿ,**
**ಕೆ. ಪಿ. ವಾಸುದೇವನ್**

# ಮಾರ್ಕ್ಸ್‌ವಾದಿ ವಿಮರ್ಶೆ : ಕೆಲವು ಸಮಸ್ಯೆಗಳು

ಸಮಾಜಶಾಸ್ತ್ರದ ವಿಧಾನಗಳನ್ನು ಒಳಗೊಳ್ಳುವ ಕಾರಣಕ್ಕಾಗಿ ಮಾರ್ಕ್ಸ್‌ವಾದಿ ವಿಮರ್ಶೆಯು ಬೇರಾವುದೇ ಸಾಹಿತ್ಯ ವಿಮರ್ಶಾ ವಿಧಾನಗಳಿಗಿಂತ ಬೇರೆಯಾಗಿ ನಿಲ್ಲುತ್ತದೆ. ಸಾಹಿತ್ಯ ಚರಿತ್ರಕಾರ ಮತ್ತು ಸಾಹಿತ್ಯ ವಿಮರ್ಶಕ–ಇವರ ನಡುವಿನ ವ್ಯತ್ಯಾಸವನ್ನು ಈ ಕೆಳಕಂಡಂತೆ ನೋಡಲಾಗುತ್ತಿದೆ. ಸಾಹಿತ್ಯ ಚರಿತ್ರಕಾರ, ಕವಿಯ ಹುಟ್ಟು ಮತ್ತು ಸಮಾಜದ ರಚನೆಯಲ್ಲಿ ಅದಕ್ಕಿರುವ ಸ್ಥಾನ ಹಾಗೂ ಸಮಾಜ ಜೀವನದಲ್ಲಿ ಅದರ ಪ್ರಭಾವವನ್ನು ವಿಶ್ಲೇಷಿಸಿದರೆ, ಸಾಹಿತ್ಯ ವಿಮರ್ಶಕ ಪೂರ್ಣ ಔಪಚಾರಿಕ ಅಥವಾ ಸಾಮಾಜಿಕ ಒಳಿತು ಕೆಡಕುಗಳ ದೃಷ್ಟಿಕೋನದಿಂದ ಕೃತಿಯ ಮೌಲ್ಯ ನಿರ್ಣಯ ಮಾಡುತ್ತಾನೆ. ಅಂದರೆ ಹೀಗೆ ಗುರುತಿಸಲಾಗುವ ವ್ಯತ್ಯಾಸಗಳು ಭೂತ ಮತ್ತು ವರ್ತಮಾನದ ವಿಶ್ಲೇಷಣೆಯಾಗಲಿಲ್ಲ ಎಂದೇ ಹೇಳಬೇಕಾಗುತ್ತದೆ.

ಮಾರ್ಕ್ಸ್‌ವಾದಿ ವಿಮರ್ಶಾ ವಿಧಾನವು ವಿಮರ್ಶೆಯಲ್ಲಿ ಸಾಹಿತ್ಯಕ ಅಂಶವನ್ನು ಅತ್ಯವಶ್ಯ ಎಂದು ಪರಿಗಣಿಸಿದರೂ ಸಾಮಾಜಿಕ ವಿಶ್ಲೇಷಣೆಯು ಆದಕ್ಕಿಂತ ಹೆಚ್ಚು ಮೂಲಭೂತವಾದ ಆಸಕ್ತಿ. ಇದರಿಂದಾಗಿ ಮೇಲೆ ಹೇಳಿದ ವ್ಯತ್ಯಾಸಗಳು ಮಾರ್ಕ್ಸ್‌ವಾದಿ ವಿಮರ್ಶಕನಿಗೆ ಸಂಪೂರ್ಣ ಅರ್ಥಹೀನವಾಗುತ್ತವೆ.

ಒಂದನ್ನೊಂದು ಅವಲಂಬಿಸಿರುವ ಪ್ರತ್ಯೇಕ ಭಾಗಗಳ ವ್ಯವಸ್ಥಿತ ಸಮಗ್ರತೆಯೆ ಸಮಾಜ ಜೀವನವೆಂದು ಮಾರ್ಕ್ಸ್‌ವಾದ ಪರಿಗಣಿಸುತ್ತದೆ. ಮತ್ತು ವಾಸ್ತವ ಹಾಗೂ ಭೌತಿಕ, ಆರ್ಥಿಕ ಸಂಬಂಧಗಳು, ಅದಕ್ಕಿಂತ ಹೆಚ್ಚಾಗಿ ದುಡಿಮೆ ವಿಧಾನಗಳು ಸಮಾಜ ಜೀವನದಲ್ಲಿ ನಿರ್ಣಾಯಕ ಪಾತ್ರವಹಿಸುತ್ತವೆ. ಉದಾಹರಣೆಗೆ, ಒಂದು ಯುಗದ ಸಾಹಿತ್ಯವನ್ನು ವಿಶ್ಲೇಷಿಸುವಾಗ ಮಾರ್ಕ್ಸ್‌ವಾದಿ ವಿಮರ್ಶೆಯು ಆ ಸಾಹಿತ್ಯ ಸಂದರ್ಭದ ಒಟ್ಟು ಸಾಮಾಜಿಕ ಬೆಳವಣಿಗೆಯನ್ನು ವಿಶ್ಲೇಷಿಸಲು ಯತ್ನಿಸಬೇಕಾಗುತ್ತದೆ. ಆದರೆ ಕೇವಲ ಒಂದು ಕೃತಿ ಅಥವ ಒಬ್ಬ ಬರಹಗಾರನನ್ನು ಕುರಿತು ವಿಶ್ಲೇಷಿಸುವಾಗ ಸಮಾಜದ ಮೂಲಭೂತ ಆರ್ಥಿಕ ನಿಯಮಗಳ ವಿಶ್ಲೇಷಣೆ ಅಗತ್ಯವಿರುವುದಿಲ್ಲ. ಏಕೆಂದರೆ ಗೊತ್ತಾದ ಸಾಮಾಜಿಕ ಸಂದರ್ಭದಲ್ಲಿನ ಉತ್ಪಾದನಾ ವಿಧಾನಗಳ ನೇರಪ್ರಭಾವವು ಕಲಾಕೃತಿಗಳ ಮೇಲೆ ಸೀಮಿತವಾಗಿರುತ್ತದೆ. ಅಲ್ಲದೆ, ವರ್ಗಾಸಕ್ತಿಗಳಿಂದ ಹುಟ್ಟಿದ ಸಮಾಜದ ವರ್ಗ ರಚನೆ ಮತ್ತು ವರ್ಗಗಳ ಮಾನಸಿಕ ಧೋರಣೆಗಳಂತಹ ಮಧ್ಯವರ್ತಿ ಕೊಂಡಿಗಳ ಮೂಲಕ ಕಲಾಕೃತಿ ಮತ್ತು ಉತ್ಪಾದನಾ ವಿಧಾನಗಳು ಪರಸ್ಪರ ಅವಲಂಬಿತವಾಗುತ್ತವೆ. ಸಾಹಿತ್ಯ ಕೃತಿ, ತಿಳಿದೊ ತಿಳಿಯದೆಯೊ, ಬರಹಗಾರನ ವರ್ಗದ ಮಾನಸಿಕ ಧೋರಣೆಗಳನ್ನು ಪ್ರತಿ

ಬಿಂಬಿಸುತ್ತದೆ. ಅಥವ ಸಾಮಾನ್ಯವಾಗಿ ಆಗುವಂತೆ ಬರಹಗಾರ ಸೇರಲಾಗುವ, ವಿವಿಧ ವರ್ಗಗಳಿಂದ ಪ್ರಭಾವಿತವಾದ ಬೆರಕೆ ಅಂಶಗಳನ್ನು ಪ್ರಬಿಂಬಿಸುತ್ತದೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮಾರ್ಕ್ಸ್‌ವಾದಿ ವಿಮರ್ಶಕನು ಸಾಮಾಜಿಕ ವಿಶ್ಲೇಷಣೆಯಲ್ಲಿ ತೊಡಗಬೇಕಾಗುತ್ತದೆ.

ಪ್ರತಿಯೊಂದು ಕಲಾಕೃತಿ ಮತ್ತು ಯಾವುದೇ ವರ್ಗದ ಅಥವಾ ವರ್ಗೀಕರಿಸಲು ಸಾಧ್ಯವಾಗದಂತೆ ಹರಡಿಕೊಂಡಿರುವ ಸಮುದಾಯಗಳ ಮಾನಸಿಕ ಧೋರಣೆ-ಇವುಗಳ ನಡುವಿನ ಸಂಬಂಧ ಆ-ಕೃತಿಯ ವಸ್ತುವಿನಲ್ಲೇ ಇರುತ್ತದೆ. ಸಾಹಿತ್ಯ ಪದಗಳಲ್ಲಿ ಮೂಡುವ ಕಲೆ; ವಿಚಾರಕ್ಕೆ ತೀರ ಹತ್ತಿರವಾಗುವ ಕಲೆ. ಆದ್ದರಿಂದ ಮಿಕ್ಕೆಲ್ಲ ಕಲೆಗಳೊಂದಿಗೆ ಹೋಲಿಸಿದಾಗ ಸಾಹಿತ್ಯದಲ್ಲಿ ರೂಪಕ್ಕಿಂತ ವಸ್ತುವೇ ಮುಖ್ಯವಾಗುತ್ತದೆ* ಒಟ್ಟಾರೆ ನೋಡಿದಾಗ, ಸಾಹಿತ್ಯದಲ್ಲಿ ಕಲಾತ್ಮಕ ಅಂಶ (ಪ್ರತಿಮೆ ಅಥವಾ ಪ್ರತಿಮೆಗಳೊಂದಿಗೆ ಸಂಬಂಧವೇರ್ಪಡಿಸಿಕೊಳ್ಳುವ ಭಾವನೆ ಮತ್ತು ವಿಚಾರಧಾರೆ) ನಿರ್ಣಾಯಕವಾಗುತ್ತದೆ. ಮತ್ತು ವಸ್ತುವು ನಿರ್ದಿಷ್ಟ ರೂಪವನ್ನು ಪಡೆದುಕೊಳ್ಳಲು ಯತ್ನಿಸುತ್ತದೆ. ಅಂದರೆ ಒಂದು ವಸ್ತುವಿಗೆ ಒಂದೇ ರೂಪವಿರಲು ಮಾತ್ರ ಸಾಧ್ಯ. ಬರಹಗಾರ ತನ್ನ ವಿಚಾರಗಳಿಗೆ ಒಗ್ಗುವ ಘಟನೆಗಳನ್ನು ಮತ್ತು ಭಾವನೆಗಳನ್ನು ಕೃತಿಯು ತಲುಪಬೇಕೆನ್ನುವ, ತನ್ನ ಓದುವರ್ಗಕ್ಕೆ ಅತಿ ಸ್ಪಷ್ಟಗೊಳಿಸಲು ಹಾಗೂ ಅವರ ಮೇಲೆ ಶಕ್ತಿಯುತ ಪ್ರಭಾವ ಬೀರಲು ಬೇಕಾಗುವ ಅಭಿವ್ಯಕ್ತಿ ವಿಧಾನಗಳನ್ನು ತನ್ನ ಮಿತಿಯಲ್ಲಿ ಕಂಡುಕೊಳ್ಳುತ್ತಾನೆ.

ಇದರಿಂದಾಗಿ, ಮಾರ್ಕ್ಸ್‌ವಾದಿ ವಿಮರ್ಶಕ ಎಲ್ಲಕ್ಕಿಂತ ಮಿಗಿಲಾಗಿ ಕೃತಿಯ ವಸ್ತುವನ್ನು, ಅದರಲ್ಲೇ ಅಡಕವಾಗಿರುವ ಸಾಮಾಜಿಕತೆಯನ್ನು ವಿಶ್ಲೇಷಿಸುತ್ತಾನೆ. ಹೀಗೆ ಮಾಡುವಾಗ ವಸ್ತುವು ಸಮಾಜದ ಯಾವ ಗುಂಪಿಗೆ ಸಂಬಂಧಿಸಿದ್ದು ಎನ್ನುವ ಅಂಶದ ಜೊತೆಗೆ ಸಮಾಜ ಜೀವನದ ಮೇಲೆ ಕೃತಿಯು ಉಂಟುಮಾಡಬಹುದಾದ ಪ್ರಭಾವದ ಸ್ವರೂಪವನ್ನು ನಿರ್ಧರಿಸುತ್ತಾನೆ. ಅನಂತರವೇ ಕೃತಿಯ ರೂಪದತ್ತ ತನ್ನ ಗಮನವನ್ನು ಕೊಡುತ್ತಾನೆ. ಅದೂ ಎಷ್ಟರಮಟ್ಟಿಗೆಂದರೆ, ರೂಪವು ವಸ್ತುವನ್ನೂ, ಅವನ್ನೊಳಗೊಂಡಿರುವ ಕೃತಿಯನ್ನೂ ಅರ್ಥಪೂರ್ಣಮಾಡುವ ತನ್ನ ಗುರಿಯನ್ನು ಸಾಧಿಸಿದೆಯೇ ಎಂಬ ದೃಷ್ಟಿಕೋನದಿಂದ ಮಾತ್ರ ಶಿಲ್ಪದ ವಿಶ್ಲೇಷಣೆಯಲ್ಲಿ ತೊಡಗುತ್ತಾನೆ.

ಆದರೂ ಸಾಹಿತ್ಯದಲ್ಲಿ 'ರೂಪ'ದ ವಿಶೇಷ ಸಾಧನೆಯನ್ನು ಗೌಣವೆಂದು ತಿಳಿಯುವುದು ಸಾಧ್ಯವಿಲ್ಲ. ಯಾವುದೇ ಕೃತಿಯಲ್ಲಿನ ರೂಪ ವಸ್ತುವಿನಿಂದ ಮಾತ್ರವೇ ಅಲ್ಲದೆ ಕೆಲವು ಇತರ ಅಂಶಗಳಿಂದಲೂ ನಿರ್ಣಯಿಸಲ್ಪಡುತ್ತದೆ. ಒಂದು ವರ್ಗಕ್ಕೇ ವಿಶಿಷ್ಟವೆನಬಹುದಾದ ವೈಚಾರಿಕಕ್ರಿಯೆ ಹಾಗೂ ಮಾತುಕತೆಯ ಶೈಲಿ, ಜೀವನದ ವಿವಿಧ ಮುಖಗಳಲ್ಲಿ ಕಂಡುಬರುವ ಸಮಾಜದ ಭೌತಿಕ ಸಂಸ್ಕೃತಿಯ ಸಾಮಾನ್ಯಸ್ತರ, ಹೊರಗಿನ ಪ್ರಭಾವ, ಭೂತ

---

* ಈ ಲೇಖನದುದ್ದಕ್ಕೂ ರೂಪ ಮತ್ತು ವಸ್ತುವನ್ನು Form and content ಎನ್ನುವುದಕ್ಕೆ ಸಂವಾದಿಯಾಗಿ ಬಳಸಲಾಗಿದೆ.

ಕಾಲದ ಆಲಸ್ಯ ಮನೋವೃತ್ತಿ ಅಥವಾ ಪುನರುತ್ಥಾನದ ಅತೀವ ಪ್ರಯತ್ನ ಇವೆಲ್ಲವೂ ಕೃತಿಯ ಶೈಲಿಯ ಮೇಲೆ ಪ್ರಭಾವ ಬೀರುತ್ತವೆಯಷ್ಟೇ ಅಲ್ಲದೆ, ಕೃತಿಯಲ್ಲಿ ಶೈಲಿಯ ಸ್ವರೂಪವನ್ನು ನಿರ್ಣಯಿಸುವಲ್ಲಿ ಪೂರಕವಾಗುತ್ತವೆ. ಒಂದು ರೂಪ ಒಂದು ಕೃತಿಗೆ ಮಾತ್ರ ಸೀಮಿತವಾಗಿರಬೇಕೆಂದಿಲ್ಲ. ಅದು ಒಂದು ಸಾಹಿತ್ಯ ಚಳುವಳಿಗೆ ಅಥವಾ ಇಡೀ ಯುಗಕ್ಕೆ ಸಂಬಂಧಿಸಿದ್ದಾಗಬಹುದು. ರೂಪದ ಮೋಹ ಅತಿಯಾದಾಗ ಅದು ವಸ್ತುವನ್ನೇ ವಿರೋಧಿಸುವಂತದ್ದಾಗಬಹುದು ; ಇಲ್ಲ ವಸ್ತುವಿಗೆ ಧಕ್ಕೆಯನ್ನುಂಟುಮಾಡಬಹುದು. ಕೆಲವೊಮ್ಮೆ ವಸ್ತುವಿನಿಂದ ಪ್ರತ್ಯೇಕವಾಗಿಯೂ ನಿಲ್ಲಬಹುದು. "ಸರಕೇ ಇಲ್ಲದ-ವಾಸ್ತವ ಜೀವನವನ್ನು ಎದುರಿಸಲು ಭಯಗೊಂಡು "ಥಳಥಳಿಸುವ, ಆರ್ಭಟಿಸುವ" ಅಥವಾ ಚಿಲ್ಲರೆ ತುಂಟತನದ ಪದಗಳ ಡೊಂಬರಾಟದ ತೆರೆಯ ಹಿಂದೆ ಹುದುಗಿಕೊಳ್ಳುವ-ವರ್ಗಗಳ ಧೋರಣೆಯನ್ನು ಪ್ರತಿಪಾದಿಸುವ ಕೃತಿಗಳಲ್ಲಿ ಇಂಥವೆಲ್ಲ ಸಾಧ್ಯವಾಗಬಹುದು." ಮಾರ್ಕ್ಸ್‌ವಾದಿ ವಿಮರ್ಶಕನಿಗೆ ಇವೆಲ್ಲವುಗಳ ಬಗೆಗೆ ಎಚ್ಚರವಿರುವುದು ಅಗತ್ಯ.

ಪ್ರತಿಯೊಂದು ಶ್ರೇಷ್ಠ ಕೃತಿಯಲ್ಲೂ ವಸ್ತುವೇ ರೂಪವನ್ನು ನಿರ್ಣಯಿಸುತ್ತದೆ ಹಾಗೂ ಪ್ರತಿ ಸಾಹಿತ್ಯ ಕೃತಿಯೂ ಶ್ರೇಷ್ಠ ಕೃತಿಯಾಗಲು ಹವಣಿಸುತ್ತದೆ. ಆದರೆ ಮೇಲೆ ಹೇಳಿದ, ರೂಪವನ್ನು ನಿರ್ಣಯಿಸುವ, ಅಂಶಗಳು ಈ ಸೂತ್ರವನ್ನು ವಿರೋಧಿಸುತ್ತವೆ. ಆದರೂ ಅವು ಸಮಾಜ ಜೀವನದಿಂದ ಹೊರಗೆ ರೂಪಿತವಾದುವಲ್ಲ. ಆದರೂ ಅವು ಸಮಾಜ ಜೀವನದಿಂದ ಹೊರಗೆ ರೂಪಿತವಾದುವಲ್ಲ. ಅಂದರೆ ಇವುಗಳೆಲ್ಲದರ ವಿಶ್ಲೇಷಣೆ ಸಮಾಜಶಾಸ್ತ್ರದ ವಿಧಾನವನ್ನೇ ಅನುಸರಿಸಬೇಕಾಗುತ್ತದೆ.

ಇದುವರೆಗೆ ಮಾರ್ಕ್ಸ್‌ವಾದಿ ವಿಮರ್ಶೆಯನ್ನು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಪಟ್ಟ ಕ್ರಿಯೆಯಾಗಿ ಗಮನಿಸಲಾಯಿತು. ಅಂದರೆ ವೈಜ್ಞಾನಿಕ ಸಮಾಜ ಶಾಸ್ತ್ರಜ್ಞನಾದ ಮಾರ್ಕ್ಸ್‌ವಾದಿ ವಿಮರ್ಶಕ ಮಾರ್ಕ್ಸ್‌ವಾದದ ವಿಧಾನಗಳನ್ನು ವಿಶಿಷ್ಟ ಕ್ಷೇತ್ರವಾದ ಸಾಹಿತ್ಯಕ್ಕೆ ಹೊಂದಿಸುತ್ತಾನೆ. ಮಾರ್ಕ್ಸ್‌ವಾದಿ "ಜ್ಞಾನಬೋಧಕ"ನಲ್ಲ.* ಜ್ಞಾನ ಬೋಧಕರು ಸಾಹಿತ್ಯಕ್ಕೆ ವಿಶಿಷ್ಟವಾದ ಗುರಿಗಳನ್ನು ನಿರ್ದೇಶಿಸುತ್ತಾರೆ. ಇವರು ಸಾಹಿತ್ಯವನ್ನು ಆದರ್ಶೀಕೃತ ದೃಷ್ಟಿಕೋನದಿಂದ ನೋಡಿದರೆ ಮಾರ್ಕ್ಸ್‌ವಾದಿ ವಿಮರ್ಶಕ ಕಲಾ ಕೃತಿಯು ಹುಟ್ಟಲು ಪೂರಕವಾದ ನೈಸರ್ಗಿಕ ಕಾರಣಗಳನ್ನು ವಿಶ್ಲೇಷಿಸುತ್ತಾನೆ.

ಸೌಂದರ್ಯೋಪಾಸಕರು ಮತ್ತು ರಸವಿಮರ್ಶಕರುಗಳ ಹಳೆಯ, ವ್ಯಕ್ತಿನಿಷ್ಠ ಹಾಗೂ ವೈಚಾರಿಕ ಅಶಿಸ್ತಿನ ವಿಶ್ಲೇಷಣೆಗೆ ಬದಲಾಗಿ ಕೃತಿನಿಷ್ಠವಾದ ಮತ್ತು ವೈಜ್ಞಾನಿಕ ಶಿಸ್ತಿನ ಮಾರ್ಕ್ಸ್‌ವಾದಿ ವಿಧಾನಗಳನ್ನು ರೂಪಿಸಿಕೊಳ್ಳುವುದು ಇಂದು ಅಗತ್ಯವಾಗಿದೆ. ಕೃತಿಯ ಆಚೆಗಿನ ಅಂಶಗಳನ್ನು ವಿಶ್ಲೇಷಿಸಿ ನಿರ್ಣಯಿಸುವುದು ಮಾತ್ರ ವಿಮರ್ಶೆಯ ಕಾರ್ಯವೆಂದು

---

* ಪ್ಲೆಕನೊವ್ ಈ ಪದವನ್ನು ಅಕಾಡೆಮಿಕ್ ವಿಮರ್ಶಕರು ಮತ್ತು ನೈತಿಕ ವಿಮರ್ಶಕರನ್ನು ಕುರಿತು, ತನ್ನ ಕೃತಿ Art and society ಯಲ್ಲಿ ವ್ಯಂಗ್ಯವಾಗಿ ಬಳಸುವುದನ್ನು ಲೂನಾ ಕಾರ್‌ಸ್ಕಿ ಇಲ್ಲಿ ಅನುಮೋದಿಸುತ್ತಾನೆ:

ಇಲ್ಲಿ ಭಾವಿಸಬೇಕಿಲ್ಲ. ಏಕೆಂದರೆ ಮಾರ್ಕ್ಸ್‌ವಾದ ಸಮಾಜಶಾಸ್ತ್ರ ಮಾತ್ರವಲ್ಲ; ನಿರ್ಮಾಣದ ಕಾರ್ಯಕ್ರಮ ಕೂಡ. ಈ ನಿರ್ಮಾಣ, ವಾಸ್ತವತೆಯ ವಸ್ತುನಿಷ್ಠ ವಿಶ್ಲೇಷಣೆ ಯಿಲ್ಲದೆ ಸಾಧ್ಯವಿಲ್ಲವಾದ್ದರಿಂದ ಮಾರ್ಕ್ಸ್‌ವಾದಿ ತನ್ನನ್ನು ಸುತ್ತುವರೆದಿರುವ ವಿವಿಧ ಕ್ರಿಯೆಗಳ ನಡುವಿನ ಸಂಬಂಧಗಳನ್ನು ವಸ್ತುನಿಷ್ಟವಾಗಿ ಪರಿಗಣಿಸಲೇಬೇಕಾಗುತ್ತದೆ. ಅವನು ನಿಜವಾದ ಮಾರ್ಕ್ಸ್‌ವಾದಿಯಾಗಿದ್ದಲ್ಲಿ ಈ ರೀತಿಯ ವಸ್ತುನಿಷ್ಠ ವಿಶ್ಲೇಷಣೆ ಯಿಂದ ತನ್ನ ಪರಿಸರದ ಮೇಲೂ ಪ್ರಭಾವವನ್ನುಂಟುಮಾಡುವುದು ಸಾಧ್ಯ. ಮಾರ್ಕ್ಸ್‌ವಾದಿ ವಿಮರ್ಶಕ ಸಾಹಿತ್ಯ ಕ್ಷೇತ್ರದಲ್ಲಿನ ಗ್ರಹ-ಗತಿಗಳನ್ನು ಕುರಿತು, ತಪ್ಪಿಸ ಲಾಗದ, ನಿಯಮಗಳನ್ನು ಹೇಳುವ ಜ್ಯೋತಿಷಿ ಅಲ್ಲ. ಅವನು ಇದನ್ನು ಮೀರಿದವನು; ಆತ ಹೋರಾಟಗಾರ ಮತ್ತು ನಿರ್ಮಾಪಕ. ಆದ್ದರಿಂದ ಸಮಕಾಲೀನ ವಿಮರ್ಶೆ ಸಾಹಿತ್ಯವನ್ನು ಈ ಅರ್ಥದಲ್ಲಿ ಬೆಲೆಕಟ್ಟಬೇಕಾಗುತ್ತದೆ.

ಯಾವ ವರ್ಗವೇ ಆಗಲಿ ತನ್ನ ಏಳಿಗೆಗೆ ಪೂರಕವಾದ ವಿಚಾರಗಳು ಒಳಿತು, ಮತ್ತು ವಿರೋಧವಾಗಿ ನಿಲ್ಲುವ ವಿಚಾರಗಳು ಕೆಡಕು, ಎನ್ನುವ ನೀತಿ ಸೂತ್ರವನ್ನು ಅನುಸರಿಸು ತ್ತದೆ. ಶ್ರಮಿಕವರ್ಗ ಇದಕ್ಕೆ ಹೊರತಲ್ಲ. ಅಂದರೆ ಸಾಹಿತ್ಯವನ್ನು ಬೆಲೆ ಕಟ್ಟುವಾಗ ವಿಮರ್ಶಕ ಮೊದಲು ಈ ನೀತಿ ಸೂತ್ರವನ್ನು ಆಧರಿಸಿ ಕೃತಿಯ ವಸ್ತುವನ್ನು ವಿಮರ್ಶೆ ಗೊಳಪಡಿಸಬೇಕಾಗುತ್ತದೆ.

ಮಾರ್ಕ್ಸ್‌ವಾದಿ ವಿಮರ್ಶಕ ತಾನು ವಿಶ್ಲೇಷಿಸುವ ಕೃತಿಯಲ್ಲಿ ಮೂಲಭೂತವಾದ ಸಾಮಾಜಿಕ ಧೋರಣೆಯನ್ನು ಗುರುತಿಸುವುದು ಅವಶ್ಯ. ಹಾಗೆ ಮಾಡುವಾಗ ಅವನು ಮೂಲಭೂತ, ಚಲನಶೀಲ ಸಾಮಾಜಿಕ ವಿಚಾರಗಳ ಸಹಾಯದಿಂದ ಸಾಹಿತ್ಯವನ್ನು ಅಳೆಯಬೇಕಾಗುತ್ತದೆ. ಆದರೂ ಸಾಹಿತ್ಯ ಕೃತಿಯಲ್ಲಿನ ಸಾಮಾಜಿಕತೆಯನ್ನು ನಿರ್ಣ ಯಿಸುವುದು ಕಷ್ಟ ಸಾಧ್ಯ ಎನ್ನುವುದನ್ನು ಒಪ್ಪಿಕೊಳ್ಳಲೇಬೇಕು. ಅಂದರೆ ಮಾರ್ಕ್ಸ್ ವಾದದ ತರಬೇತು ಮಾತ್ರವಲ್ಲದೆ, ವಿಶೇಷವಾದ ಪ್ರತಿಭೆಯನ್ನು ಆತ ಹೊಂದಿರದಿದ್ದಲ್ಲಿ ವಿಮರ್ಶೆಯೇ ಸಾಧ್ಯವಿಲ್ಲ. ಸೂಕ್ಷ್ಮತರ ಸಂವೇದನೆ ಹಾಗೂ ಕುಶಲತೆಗಳು ಇಲ್ಲಿ ಅತ್ಯಂತ ಮುಖ್ಯವಾಗುತ್ತವೆ. ಶ್ರೇಷ್ಠ ಸಾಹಿತ್ಯ ಕೃತಿಗಳ ಸಂದರ್ಭಗಳು ಸಂಕೀರ್ಣವಾಗಿರುತ್ತವೆ ಯಾದ್ದರಿಂದ ಯಾವುದೇ ರೀತಿಯ ಉಷ್ಣಮಾಪಕದಂಥ ಅಳತೆಗೋಲುಗಳು ಅವುಗಳ ಶ್ರೇಷ್ಠತೆಯನ್ನು ನಿರ್ಣಯಿಸಲಾರವು. ಇಲ್ಲಿ ಅಗತ್ಯವಾಗುವುದು ಸೂಕ್ಷ್ಮ ಸಾಮಾಜಿಕ ಸಂವೇದನೆ. ಇಲ್ಲದಿದ್ದಲ್ಲಿ ತಪ್ಪುಗಳು ಅನಿವಾರ್ಯ.

ತಾತ್ಕಾಲಿಕ ಸಮಸ್ಯೆಗಳಿಗೆ ತಮ್ಮನ್ನು ಒಪ್ಪಿಸಿಕೊಳ್ಳುವ ಕೃತಿಗಳು ಮಾತ್ರ ಒಳ್ಳೆಯವು ಎಂಬ ಭಾವನೆಗಳಿಗೆ ಮಾರ್ಕ್ಸ್‌ವಾದಿ ವಿಮರ್ಶಕ ಈಡಾಗಬಾರದು. ಆದರೆ ಪ್ರಚಲಿತ ಸಮಸ್ಯೆಗಳ ಮಹತ್ವವನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ತೀರ ಸಾಮಾನ್ಯ ಹಾಗೂ ಅಸಮಕಾಲೀನವೆನ್ನಿಸುವ ಸಮಸ್ಯೆಗಳು ಆಳವಾಗಿ ಪರೀಕ್ಷಿಸಿದಾಗ ಸಮಾಜ ಜೀವನದ ಮೇಲೆ ತೀವ್ರವಾದ ಪ್ರಭಾವವನ್ನುಂಟುಮಾಡುತ್ತಿರುವುದು ಗೊತ್ತಾಗುತ್ತದೆ.

ಇಲ್ಲಿನ ಪ್ರಕ್ರಿಯೆ ವಿಜ್ಞಾನದ ಪ್ರಕ್ರಿಯೆಯನ್ನು ಹೋಲುವಂಥದ್ದು. ಅಮೂರ್ತವಾದ

ವಿಜ್ಞಾನದ ಸಮಸ್ಯೆಗಳು ಬಗೆಹರಿದಾಗ ಹಲವೊಮ್ಮೆ ಅತ್ಯಂತ ಉಪಯುಕ್ತವಾಗಿರುವುದುಂಟು. ಆದರೆ ವಿಜ್ಞಾನ ವಾಸ್ತವ ಜೀವನದ ಉಪಯುಕ್ತತೆಗೆ ಮಾತ್ರವೇ ಒದಗುತ್ತದೆ ಎಂದು ಭಾವಿಸುವುದು ತಪ್ಪು. ಹಾಗೆಯೇ ಒಬ್ಬ ಬರಹಗಾರ ಅಥವಾ ಕವಿ-ಶ್ರಮಿಕ ವರ್ಗಕ್ಕೆ ಸೇರಿದವನಾದಲ್ಲಿ-ಸಾಮಾನ್ಯ ಸಮಸ್ಯೆಗಳನ್ನು ತನ್ನ ಕೃತಿಯ ಸಂದರ್ಭದಲ್ಲಿ ಬಗೆಹರಿಸುವ ಯತ್ನದಲ್ಲಿ ಶ್ರಮಿಕ ವರ್ಗದ ಮೂಲಭೂತ ಸಂಸ್ಕೃತಿಯನ್ನು ಹೊಸದಾಗಿ ಬೆಲೆ ಕಟ್ಟಲು ತೊಡಗಿದಾಗ ವಿಮರ್ಶಕ ಗೊಂದಲಗೊಳ್ಳುವುದು ಸ್ವಾಭಾವಿಕ.

ಮೊದಲನೆಯದಾಗಿ, ಇಂಥ ಸಂದರ್ಭಗಳಲ್ಲಿ ಪರೀಕ್ಷೆಗೊಳಪಡಿಸಲು ಬೇಕಾದ ನಿಜವಾದ ಆಧಾರಗಳು ರೂಪಿತವಾಗಿರುವುದಿಲ್ಲ. ಎರಡನೆಯದಾಗಿ, ಹಸಿ ಸಿದ್ಧಾಂತಗಳೇ ಮೌಲ್ಯಗಳಾಗಿ ಒದಗಿಬಿಡಬಹುದು. ಏಕೆಂದರೆ ಇಲ್ಲಿನ ಆಸಕ್ತಿ ಸಮಸ್ಯೆಗಳನ್ನು ಎತ್ತಿ ತೋರಿಸಿ ಅವುಗಳನ್ನು ವಿಶ್ಲೇಷಿಸುವುದೇ ಹೊರತು, ಅವುಗಳನ್ನು ಸಂಪೂರ್ಣವಾಗಿ ಬಗೆಹರಿಸುವುದಿಲ್ಲ. ಈ ಮಾತು ಸ್ವಲ್ಪಮಟ್ಟಿಗೆ ಸಮಕಾಲೀನ ಆಸಕ್ತಿಯುಳ್ಳ ಸಾಹಿತ್ಯ ಕೃತಿಗಳಿಗೂ ಅನ್ವಯಿಸುತ್ತದೆ ಯಾರೂ ತುಳಿಯದ ಭೂಮಿಯನ್ನು ತುಳಿದಾಗ ತರ್ಕ ಮತ್ತು ನೀರವ ಅಂಕಿ ಅಂಶಗಳು ತಲುಪಲು ಅಸಾಧ್ಯವಾದ ಕ್ಷೇತ್ರವನ್ನು ಬರಹಗಾರ ತನ್ನ ಪ್ರತಿಭೆಯ ಮೂಲಕ ಮುಟ್ಟಿದಾಗ ಹೆಚ್ಚು ಅರ್ಥಪೂರ್ಣನಾಗುತ್ತಾನೆ. ಹಾಗಲ್ಲದೆ ಅಭಿವೃದ್ಧಿ ಕಾರ್ಯಕ್ರಮದ ಅಂಶಗಳನ್ನು ನಿರೂಪಿಸುವಲ್ಲಿ ತಲ್ಲೀನನಾಗುವ ಲೇಖಕ ತೀರ ಕೆಳದರ್ಜೆಯವನಾಗುಳಿಯುತ್ತಾನೆ.* ಸಮಾಜವಾದದ ಹಂಬಲ ಮತ್ತು ಸತ್ಯಗಳು ಕೃತಿಯಲ್ಲಿ ಸಮರ್ಥವಾಗಿ ಬೆರೆತುಕೊಂಡಿವೆಯೆ ಎನ್ನುವುದನ್ನು ನಿರ್ಧರಿಸುವುದು ಅಷ್ಟೇನು ಸುಲಭವಲ್ಲ. ಆದರೆ ವಿಮರ್ಶಕ ಮತ್ತು ಓದುಗರ ನಡುವಿನ ಅಭಿಪ್ರಾಯದಲ್ಲಿನ ವಿರೋಧಗಳ ಮೂಲಕ ನಾವು ಕೃತಿಯ ಗುಣವನ್ನು ನಿರ್ಧರಿಸುವುದು ಸಾಧ್ಯವಾಗಬಹುದು.

ಸಾಹಿತ್ಯ ಕೃತಿಯಲ್ಲಿನ ಸಾಮಾಜಿಕತೆಯನ್ನು ಬೆಲೆ ಕಟ್ಟುವಾಗ ಅದರ ಸೃಷ್ಟಿ ಸಂದರ್ಭ ಹಾಗೂ ಅದರ "ಉಪದೇಶ" (tendentiousness) ಗಳ ದೃಷ್ಟಿಯಿಂದಲ್ಲದಿದ್ದರೂ ಸಮಾಜದ ನಿರ್ಮಾಣ ಯತ್ನದಲ್ಲಿನ, ಅವುಗಳ ಉಪಯುಕ್ತತೆಯಿಂದಾಗಿ ಎರಡನೇ ಬಾರಿ ಬೆಲೆ ಕಟ್ಟುವುದು ಅಗತ್ಯ : ಒಂದು ಕಲಾಕೃತಿ ಎಷ್ಟೇ ವಿರುದ್ಧ ಧೋರಣೆಗಳನ್ನು ಪ್ರಕಟಿಸಿದರೂ, ನಮ್ಮಿಂದ ಭಿನ್ನವಾದ ಹಿನ್ನೆಲೆಯನ್ನು ಬರಹಗಾರ ಪ್ರತ್ಯಕ್ಷದರ್ಶಿಯಾಗಿ ಅಲ್ಲಿ ದಾಖಲೆಗೊಳಿಸುವುದರಿಂದ ಅದು ಇಡೀ ಒಂದು ಜೀವನಕ್ರಿಯೆಯ ಬಗ್ಗೆ ನಮ್ಮ ತಿಳುವಳಿಕೆಯನ್ನು ಹೆಚ್ಚಿಸಲು ಸಹಾಯಕಾರಿಯಾಗುತ್ತದೆ.‡

---

* ಸಾಹಿತ್ಯವನ್ನು ವಿಧಾಯಕಗೊಳಿಸಲು ಯತ್ನಿಸಿದ ಜೆಡನೊವ್ ಮತ್ತಿತರ ಪ್ಯಾರಾಮಾರ್ಕ್ಸಿಸ್ಟರಿಂದ ಲೂನಾಕಾರ್‌ಸ್ಕಿ ಭಿನ್ನವಾಗುವದು ಇಲ್ಲಿ.

‡ ಉದಾಹರಣೆಗೆ, ಬೂರ್ಜ್ವಾ ಧೋರಣೆಯನ್ನು ಹೊಂದಿರುವ ಕೃತಿಯನ್ನು ಅಥವಾ ಬರಹಗಾರನನ್ನು ನಿರಾಕರಿಸುವ ಮನೋಭಾವವನ್ನು ವಿಮರ್ಶಕ ತಾಳದೆ, ಅಲ್ಲಿನ ಆಸಕ್ತಿಯನ್ನು ಗ್ರಹಿಸಿ, ಸಮಾಜದ ನಿರ್ಮಾಣ ಯತ್ನದಲ್ಲಿ ಅದಕ್ಕೆ ಅವನಿಗಿರುವ ಸ್ಥಾನವನ್ನು ನಿರ್ಧರಿಸಬೇಕು ಎನ್ನುತ್ತಾನೆ ಲೂನಾಕಾರ್‌ಸ್ಕಿ.

ಆದರೆ ಈ ರೀತಿಯ ಉಪಯುಕ್ತತೆಯು ಹಿಂದೆಯೇ ಅವು ನಿರ್ಮಾಣ ಕಾರ್ಯವನ್ನು ವಿರೋಧಿಸುವಂಥ ಪ್ರತಿಗಾಮಿ ಧೋರಣೆಯ ಪ್ರಚಾರ ಸಾಮಗ್ರಿಗಳಾಗಿ ಪರಿಣಮಿಸುವ ಸಾಧ್ಯತೆಯೂ ಇದೆ. ಇಂಥ ಸೂಕ್ಷ್ಮ, ಆದರೆ ಅಪಾಯಕಾರಿ ಧೋರಣೆಗಳು ಮಾರ್ಕ್ಸ್‌ವಾದಿ ವಿಮರ್ಶೆಗಿಂತ ಹೆಚ್ಚಾಗಿ ಸೆನ್ಸಾರ್‌ಷಿಪ್‌ನ ಹುಟ್ಟಿಗೆ ಕಾರಣವಾಗುತ್ತವೆ.

ಸಾಹಿತ್ಯದಲ್ಲಿ ವಸ್ತುವನ್ನು ಬೆಲೆ ಕಟ್ಟುವುದಕ್ಕಿಂತ, ರೂಪವನ್ನು ಬೆಲೆ ಕಟ್ಟಲು ಹೊರಟಾಗ ಮಾರ್ಕ್ಸ್‌ವಾದಿ ವಿಮರ್ಶಕನ ಕೆಲಸ ಮತ್ತಷ್ಟು ತೊಡಕಿನದ್ದಾಗುತ್ತದೆ. ರೂಪವು ವಸ್ತುವಿನೊಂದಿಗೆ ತೀರ ಹತ್ತಿರದ ಸಂಬಂಧವನ್ನು ಏರ್ಪಡಿಸಿಕೊಂಡು, ಸಾಹಿತ್ಯ ಕೃತಿಯು ತನ್ನ ಓದುಗರ ಮೇಲೆ ತೀವ್ರ ಪರಿಣಾಮವನ್ನುಂಟುಮಾಡುವಂತೆ ವಸ್ತುವನ್ನು ಅಭಿವ್ಯಕ್ತಗೊಳಿಸುವ ಮಾಧ್ಯಮವಾಗಬೇಕು. ಇಲ್ಲಿ ಮತ್ತೊಂದು ವಿಷಯವನ್ನು ನೆನಪಿನಲ್ಲಿಡುವುದು ಅಗತ್ಯ ; ಸಾಹಿತ್ಯ ಪ್ರತಿಮೆಗಳ (images) ಮೂಲಕ ಮೂಡಿಬರುವ ಕಲೆ ಪ್ರಚಾರಾಕಾಂಕ್ಷೆ ಅಥವಾ ಹಸಿ ವಿಚಾರಗಳು ಸಾಹಿತ್ಯದ ದ್ರವ್ಯವಾದಾಗ ನಿಜವಾದ ಸಾಹಿತ್ಯಕ್ಕೆ ಧಕ್ಕೆ ಉಂಟಾಗುತ್ತದೆ. ಈ ಹೇಳಿಕೆಗೆ ಹೊರತಾಗಿ, ಕೆಲವೊಮ್ಮೆ ಕೃತಿಗಳು ಪ್ರಚಾರ ಸಾಮಗ್ರಿಯನ್ನು ಒಳಗೊಂಡಿದ್ದು ತಮ್ಮಷ್ಟಕ್ಕೆ ಉತ್ತಮ ಕೃತಿಗಳಾಗುವ ಸಾಧ್ಯತೆ ಇದ್ದೇ ಇರುತ್ತದೆ.* ಆದರೂ ಪ್ರಚಾರ ಸಾಮಗ್ರಿಯಾಗುಳಿಯುವ ಸಾಹಿತ್ಯವನ್ನು ಬರೆಯದೇ ಇರುವುದು ಒಳ್ಳೆಯದು. ಉತ್ತಮ ರೂಪವನ್ನು ಪಡೆದುಕೊಂಡ ಪ್ರಚಾರಾತ್ಮಕ ಕೃತಿ, ವಿಶಾಲಾರ್ಥದಲ್ಲಿ "ಒಳ್ಳೆಯ ಸಾಹಿತ್ಯ"ದ ಗುಂಪಿಗೆ ಸೇರಿದರೂ ಕೃತಿ, ಎಷ್ಟೇ ಪ್ರಖರವಾಗಿ ನಿರೂಪಿಸಲ್ಪಟ್ಟರೂ ಪ್ರಚಾರವನ್ನು ಹೇರುವ ಕಾರಣದಿಂದ ಅದು ಪರಿಣಾಮದಲ್ಲಿ ಓದುಗನನ್ನು ತಣ್ಣಗೆ ಮಾಡಿಬಿಡುತ್ತದೆ. ವಸ್ತು, ಪ್ರತಿಮೆಗಳ ಮೂಲಕ, ಕೃತಿಯಲ್ಲಿ ಸಾಹಿತ್ಯಿಕವಾಗಿ ಜೀರ್ಣವಾಗಿ, ಅಂಗಾಂಗಳನ್ನು ಪಡೆದುಕೊಂಡು ಜೀವಂತವಾಗಬೇಕು. ಹಾಗಾಗದಿದ್ದಲ್ಲಿ ಕೃತಿಯು ಸಾಹಿತ್ಯಿಕ ಬೆಳವಣಿಗೆಗೆ ಅಡ್ಡಿ ತರುವಂತೆ ವಸ್ತುವು ಕೃತಿಯಲ್ಲಿ ಅಜೀರ್ಣವಾಗಿ ರೋಗಕ್ಕೆ ಕಾರಣವಾಗುತ್ತದೆ. ಪ್ರಚಾರವನ್ನು ತೊಪ್ಪೆ ತೊಪ್ಪೆಯಾಗಿ ವಾಂತಿಮಾಡಿಕೊಳ್ಳುವ ರೋಗಗ್ರಸ್ತ ಕೃತಿಯಾಗುತ್ತದೆ.

ರೂಪದ ಅಸಲುತನ (Originality) ಎರಡನೆ ಪ್ರಮುಖ ಅಂಶ. ಒಂದು ಕೃತಿಯ ಅಸಲುತನವಿರುವುದು ಅದರ ರೂಪ, ಕಲಾಕೃತಿಯಲ್ಲಿನ ವಿಚಾರ ಹಾಗೂ ವಸ್ತುವಿನ ಇಡಿಯಲ್ಲಿ ಒಂದಾಗುವುದರಲ್ಲಿ. ವಸ್ತುವಿನ ಹೊಸತನವೂ ಇಲ್ಲಿ ಮುಖ್ಯ. ವಸ್ತು ಹೊಸದಾಗದಿದ್ದಲ್ಲಿ ಕೃತಿ ಮಹತ್ವದ್ದಾಗುವ ಸಾಧ್ಯತೆ ಬಹಳ ಕಮ್ಮಿ. ಏಕೆಂದರೆ ನಿಜವಾದ ಬರಹಗಾರ ಹಿಂದೆ ಯಾರೂ ಧ್ವನಿಕೊಡದ ವಸ್ತುವಿಗೆ ತನ್ನ ಕೃತಿಯಲ್ಲಿ ಧ್ವನಿಕೊಡಲು ಯತ್ನಿಸುತ್ತಾನೆ. ಕಲೆ ಪ್ರತಿಮಾಡುವ ಕೆಲಸವಲ್ಲ ; ಅದು ಕುಸುರಿಗಾರಿಕೆ. ಇದರಿಂದಾಗಿ

---

* 30ರ ಇಂಗ್ಲೆಂಡಿನಲ್ಲಿ ಬಂದ Love and Hunger ಕಾದಂಬರಿ ಇಂಥ ಉತ್ತಮ ಕೃತಿಗಳಲ್ಲೊಂದು ಎಂಬುದಾಗಿ Edmund wilson ತನ್ನ Triple thinkers ಪುಸ್ತಕದಲ್ಲಿ ಹೇಳುತ್ತಾನೆ.

ಹೊಸ ವಸ್ತುವನ್ನೊಳಗೊಳ್ಳುವ ಪ್ರತಿಯೊಂದು ಹೊಸ ಕಲಾಕೃತಿಯೂ ಹೊಸ ರೂಪವನ್ನು ಬೇಡುತ್ತದೆ.

ಹಳೆಯ–ಪುನರಾವರ್ತಿತ–ರೂಪ ಮಾಧ್ಯಮಗಳಿಗೆ ಬರಹಗಾರ ಮೋಹಗೊಂಡಾಗ ಜಡ್ಡುಬಿದ್ದ ಮಾಧ್ಯಮಗಳು ಹೊಸ ವಿಚಾರಗಳನ್ನು ಒಳಗೊಳ್ಳಲಾಗದಂಥ ಕೃತಿಗಳನ್ನು ಮಾತ್ರ ಕೊಡಲು ಸಾಧ್ಯ. ಅಲ್ಲದೆ ಹೊಸ ವಿಚಾರ ಮತ್ತು ಆಸಕ್ತಿಗಳಿಗೆ ಸೂಕ್ತವಾದ ಮಾಧ್ಯಮ (ಕೃತಿಯ ಭಾಷೆಗೆ ಸಂಬಂಧಿಸಿದಂತೆ–ಶಬ್ದಭಂಡಾರ, ನುಡಿಕಟ್ಟುಗಳು, ಕಾವ್ಯಕ್ಕೆ ಬೇಕಾಗುವ ವಲಯಪ್ರಜ್ಞೆ ಮತ್ತಿತರ ರೂಪದ ಮಾಧ್ಯಮಗಳು)ವನ್ನು ಸೃಷ್ಟಿಸಿಕೊಳ್ಳದೇ ಇದ್ದಾಗ ಕೃತಿ ದುರ್ಬಲವಾಗಿಬಿಡುತ್ತದೆ.

ಬರಹಗಾರ ತಾನು ಅಸಲುತನವೆಂದುಕೊಂಡದ್ದನ್ನೇ ಅತಿಗೆ ತೆಗೆದುಕೊಂಡು ಹೋಗುವ ವಿಧಾನವೂ ಉಂಟು. ವಸ್ತುವಿನ ಖಾಲಿತನವನ್ನು ಅಲಂಕಾರಿಕ ರೂಪ ಮಾಧ್ಯಮಗಳಿಂದ ಮುಚ್ಚಿಟ್ಟುಕೊಳ್ಳುವ ಹವ್ಯಾಸ ಇದು. ಫಾರ್ಮಲಿಸ್ಟ್[1]ರಿಂದ ಪ್ರಭಾವಿತರಾದ ಈ ಲೇಖಕರು ತಮ್ಮ ಪ್ರಾಮಾಣಿಕ ಅನ್ನಿಸಿಕೆಗಳನ್ನು ಈ ರೀತಿಯ ಮಾಧ್ಯಮದ ಡೊಂಬರಾಟದಲ್ಲಿ ಅಸ್ಪಷ್ಟಗೊಳಿಸಿ ತಮ್ಮ ಕೃತಿಯನ್ನು ತಾವೇ ಹಾಳು ಮಾಡಿಕೊಳ್ಳುವುದೂ ಉಂಟು.

ರೂಪದ ಬಲೆ ಕಟ್ಟುವಾಗಿನ ಮತ್ತೊಂದು ವಿಧಾನವೆಂದರೆ ಕೃತಿಯ ಸಾರ್ವತ್ರಿಕತೆ.[2] ಟಾಲ್‌ಸ್ಟಾಯ್ ಇದನ್ನು ಅತ್ಯಂತ ಪ್ರಬಲವಾಗಿ ಪ್ರತಿಪಾದಿಸಿದ. ಜನತೆಯನ್ನು ಮುಟ್ಟುವಂಥ ಸಾಹಿತ್ಯಸೃಷ್ಟಿಯಲ್ಲಿ ಆಸಕ್ತರಾದ ನಾವೆಲ್ಲರೂ ಇದನ್ನು ಒಪ್ಪಿಕೊಳ್ಳಲೇಬೇಕು.[3] ಅಂದರೆ ಜನತೆಯಿಂದ ತನ್ನನ್ನು ಬೇರ್ಪಡಿಸಿಕೊಂಡು ಕೇವಲ ಒಂದು ಗುಂಪಿಗೆ ಮೆಚ್ಚಿಗೆಯಾಗುವ ವಿಶಿಷ್ಟ ಸೌಂದರ್ಯೋಪಾಸನೆಯ ಮಾಧ್ಯಮಗಳನ್ನೂ, ಅಭಿವ್ಯಕ್ತಿಯಲ್ಲಿ ಮಾರ್ಮಿಕತೆಗಾಗಿ ಹೆಣಗುವ, ಬೆರಗುಗಾರಿಕೆಯ ಕಲಾಪರಂಪರೆಯನ್ನೂ ನಿರಾಕರಿಸುವುದು ಮಾರ್ಕ್ಸ್‌ವಾದಿ ವಿಮರ್ಶಕನಿಗೆ ಇಲ್ಲಿ ಅತ್ಯವಶ್ಯವಾಗುತ್ತದೆ. ಈ ರೀತಿಯ

---

1 ಲೂನಾಚಾರ್ಸ್ಕಿ ಫಾರ್ಮಲಿಸ್ಟರನ್ನು ಬೂರ್ಜ್ವಾ ಲಂಪಟತನದ ಪ್ರತಿನಿಧಿಗಳು ಎಂದು ಕರೆಯುತ್ತಾನೆ. ಏಕೆಂದರೆ ಅವರು ಕೃತಿಯಲ್ಲಿನ ವಸ್ತು ಎಂಥದೇ ಇರಲಿ ಅದನ್ನು ಹೇಗೆ ಇಡಬೇಕು ಎಂಬುದರ ಕಡೆಗೇ ತಮ್ಮ ಗಮನವನ್ನು ಕೇಂದ್ರೀಕರಿಸಿ, ರೂಪ ಮತ್ತು ಪದ ಜೋಡಣೆಯನ್ನೇ ಸರ್ವಸ್ವ ಎಂದು ತಿಳಿಯುತ್ತಾರೆ. ಉದಾ : “ರೂಪವೇ ಸಮಸ್ತ, ಅದೇ ಜೀವನ ರಹಸ್ಯ” ಎನ್ನುತ್ತಾನೆ ಆಸ್ಕರ್ ವೈಲ್ಡ್.

2 Literary Criticism : A short Historyಯಲ್ಲಿ ಬ್ರೂಕ್ಸ್ ಮತ್ತು ವಿಮ್‌ಸೆಟ್, “ಸಾರ್ವತ್ರಿಕತೆ” (Universality)ಗೆ ಆರು ರೀತಿಯ ಅರ್ಥ ವಿವರಣೆ ನೀಡುತ್ತಾರೆ. (ಪು. 331-2)

3 ಟಾಲ್‌ಸ್ಟಾಯ್‌ಗೆ “ರಷ್ಯನ್ ಪ್ರಜ್ಞೆ”ಯು “ವಿಶ್ವದ ಪ್ರಜ್ಞೆ”ಯಷ್ಟೇ ಆಗಿರದೆ ಇಡೀ “ಮಾನವಕುಲದ ಪ್ರಜ್ಞೆ”ಯೂ ಆಗಿತ್ತು. ಟಾಲ್‌ಸ್ಟಾಯ್‌ನ ಈ ಕಲ್ಪನೆ ಕೇವಲ ಒಂದೇ ಆಸಕ್ತಿಯ ಗುಂಪಿಗೆ ಅನ್ವಯಿಸದೆ ಹೆಚ್ಚು ಜನ ಸಮುದಾಯವನ್ನೂ, ಮಾನವಕುಲವನ್ನೂ ಕುರಿತದ್ದು ಎನ್ನುವ ಕಾರಣಕ್ಕಾಗಿ ಮಾತ್ರ ಲೂನಾಚಾರ್ಸ್ಕಿ ಈ ನಿರ್ಣಯಕ್ಕೆ ಬರುತ್ತಾನೆ ಎಂದು ವಾದಿಸಲು ಅವಕಾಶವಿದೆ.

ಕೃತಿಗಳ ಅಂತಃಸತ್ವ ಎಂಥದೆಂದು ಗುರುತಿಸುವುದರ ಮೂಲಕ, ತನ್ನನ್ನು ತಾನೇ ವಾಸ್ತವತೆಯಿಂದ ಪ್ರತ್ಯೇಕಗೊಳಿಸಿಕೊಳ್ಳುವ ಬರಹಗಾರನ ಕಾಯಿಲೆಯನ್ನು ಖಂಡಿಸುವುದು ಸಾಧ್ಯ. ಹಾಗೂ ಮಾರ್ಕ್ಸ್‌ವಾದಿ ವಿಮರ್ಶೆಯಲ್ಲಿ ಇದು ಅನಿವಾರ್ಯ ಕೂಡ.

ಆದರೆ ಮೇಲೆ ಹೇಳಿದ "ಸಾರ್ವತ್ರಿಕತೆ"ಯ ಬಗ್ಗೆ ಎಚ್ಚರವಹಿಸುವುದು ಅಗತ್ಯ. ಅಂದರೆ ಸಾಹಿತ್ಯವನ್ನು ಇನ್ನೂ ಸುಸಂಸ್ಕೃತವಾಗಿಲ್ಲದ ಶ್ರಮಿಕ ಅಥವಾ ರೈತಾಪಿ ವರ್ಗದ ಮಟ್ಟಕ್ಕೆ ಇಳಿಸುವುದೆಂದು ಅರ್ಥವಲ್ಲ. ಹಾಗೆ ತಿಳಿದರೆ ಅದು ತಪ್ಪಾಗುತ್ತದೆ.

ಅತ್ಯಂತ ಸಂಕೀರ್ಣವಾದ ಹಾಗೂ ಬೆಲೆಬಾಳುವ ಸಾಮಾಜಿಕ ವಿಚಾರಗಳನ್ನು ಸರಳ ರೀತಿಯಲ್ಲಿ ಸಮರ್ಥವಾಗಿ ಕಲೆಗೊಳಿಸಿ ಲಕ್ಷಾಂತರ ಜನರನ್ನು ಮುಟ್ಟಬಲ್ಲ ಬರಹಗಾರ ಯಾವತ್ತಿಗೂ ಶ್ರೇಷ್ಠನಾಗಿಯೇ ಉಳಿಯುತ್ತಾನೆ.[1] ಆದರೆ ಅಕ್ಷರಸ್ಥನಾದ ಪ್ರತಿಯೊಬ್ಬನಿಗೂ ಅರ್ಥವಾಗುವಂಥ ಕೃತಿ ಎಲ್ಲ ಕಾಲದಲ್ಲೂ ಇರಲು ಸಾಧ್ಯವಿಲ್ಲ. ಹೀಗಿದ್ದೂ ಶ್ರೇಷ್ಠವಾಗಿರಬಲ್ಲ ಸಾಹಿತ್ಯಕೃತಿ ಸಾಧ್ಯ ಎಂಬುದನ್ನು ಮರೆಯಬಾರದು. ಈ ಸಾಹಿತ್ಯ ಉನ್ನತ ಸಾಂಸ್ಕೃತಿಕ ಮಟ್ಟವನ್ನು ತಲುಪಿರುವಂಥ ಓದುಗನನ್ನು[2] ಮುಟ್ಟುತ್ತದೆ.

ಮಾರ್ಕ್ಸ್‌ವಾದಿ ವಿಮರ್ಶಕನ ಕೆಲಸ ಬಹಳಮಟ್ಟಿಗೆ ಶಿಕ್ಷಕನ ಕೆಲಸವನ್ನು ಹೋಲುತ್ತದೆ. ವಿಮರ್ಶೆ ಕೆಟ್ಟದ್ದನ್ನು ಒಳ್ಳೆಯದರಿಂದ ಬೇರೆ ಮಾಡದಿದ್ದಲ್ಲಿ, ಪ್ರಗತಿಗಾಮಿಯಾಗದಿದ್ದಲ್ಲಿ ಅದರಿಂದ ಯಾವುದೇ ಪ್ರಯೋಜನವಿಲ್ಲ. ವಿಮರ್ಶೆ ಪ್ರಗತಿಪರ ಧೋರಣೆಯನ್ನು ಹೊಂದಿದ್ದರೆ ಮಾತ್ರ ಒಂದು ರೀತಿಯಲ್ಲಿ ಬರಹಗಾರನಿಗೆ ಶಿಕ್ಷಣವನ್ನು ನೀಡಲು ಸಾಧ್ಯ. ಮೊದಲನೆಯದಾಗಿ, ವಿಮರ್ಶಕ ಬರಹಗಾರನ ಶಿಕ್ಷಕ ಎಂದಾಗ ಆತ ಅಸ್ಖಲಿತ ಅಭಿರುಚಿಯುಳ್ಳ, ಪಾಂಡಿತ್ಯ ಹೊಂದಿದ ಮಾರ್ಕ್ಸ್‌ವಾದಿಯಾಗಿರಬೇಕು. ತನ್ನ ಪಾಂಡಿತ್ಯದ ಜೊತೆಗೆ ಬಿಚ್ಚುಮನಸ್ಸಿನಿಂದ "ಕಲಿಯುವ" ಮನೋಭಾವವನ್ನುಳ್ಳವನಾಗಿರಬೇಕು. ಎರಡನೆಯದಾಗಿ, ಬರಹಗಾರನ ಮೇಲೆ ಪ್ರತಿಭೆ ಮತ್ತು ಶಿಸ್ತಿನ ಪ್ರಭಾವವನ್ನುಂಟುಮಾಡುವುದರ

---

1 ಹೀಗೆ ಹೇಳುವಾಗ ಲೂನಾಕಾರ್‌ಸ್ಕಿ ಗಾರ್ಕಿಯ Mother ಕಾದಂಬರಿಯನ್ನು ಮನಸ್ಸಿನಲ್ಲಿಟ್ಟುಕೊಂಡಿರುವುದು ಗಾರ್ಕಿಯ ಮೇಲಿನ ಅವರ ಲೇಖನವನ್ನು ನೋಡಿದರೆ ತಿಳಿಯುತ್ತದೆ.

2 ಇಲ್ಲಿ ಲೂನಾಕಾರ್‌ಸ್ಕಿ ಶ್ರಮಿಕವರ್ಗದಲ್ಲೇ ಸಾಮಾನ್ಯರು ಮತ್ತು ಸುಸಂಸ್ಕೃತರು ಎನ್ನುವ ವಿಭಾಗವನ್ನು ಮಾಡುತ್ತಾನೆ (ಈ ವಿಭಾಗಕ್ರಮ ಶ್ರಮಿಕ ವರ್ಗದ ಸಂಸ್ಕೃತಿಯನ್ನೇ ಆಧರಿಸಿದು ಸಾಮಾಜಿಕವಾದ ಆಸ್ಥೆಗಳು ವ್ಯಕ್ತಗೊಳ್ಳುವ ಪರಿಮಾಣವನ್ನು ನಿರ್ದೇಶಿಸುತ್ತದೆ). ಅದರಂತೆ ಶ್ರಮಿಕ ವರ್ಗದ ಮೇಲುಮಟ್ಟದ ಸಂಸ್ಕೃತಿಯನ್ನುಳ್ಳವರನ್ನು, ತರಬೇತು ಹೊಂದಿದ ಪಕ್ಷದ ಕಾರ್ಯಕರ್ತರನ್ನು ಈ ಸಾಹಿತ್ಯ ಮುಟ್ಟುವಲ್ಲಿ ಕಷ್ಟವಾಗುವುದಿಲ್ಲ. ಸಮಾಜವನ್ನು ಸಾಕ್ಷಾತ್ಕರಿಸುವ ಮಹತ್ವದ ಕೆಲಸದಲ್ಲಿ ಪ್ರಮುಖ ಪಾತ್ರವಹಿಸುವ ಶ್ರಮಿಕವರ್ಗ ಜೀವನದ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಈ ಸಮಸ್ಯೆಗಳು ಸಮಾಜದ ಸಮಸ್ತರ ಸೊತ್ತಾಗದೆ ಇರುವ ಕಾರಣಕ್ಕಾಗಿ ಕಲಾಕೃತಿ ಆ ಸಮಸ್ಯೆಗಳನ್ನು ಕುರಿತದಾಗಿರಬಾರದು ಎನ್ನುವ ಭಾವನೆ ತಪ್ಪು. ಇದನ್ನೇ ಅತಿಗೆ ಕೊಂಡುಹೋಗಿ ಸುಸಂಸ್ಕೃತ ಗುಂಪಿಗೆ ಮಾತ್ರ ಸಾಹಿತ್ಯ ರಚಿಸುತ್ತೇವೆ ಎನ್ನುವ ಬರಹಗಾರರನ್ನು ಲೂನಾಕಾರ್‌ಸ್ಕಿ ಖಂಡಿಸುತ್ತಾನೆ.

ಜೊತೆಗೆ, ಅವನಿಂದಲೂ ಬಹಳಷ್ಟು ಕಲಿಯಬೇಕಾಗುತ್ತದೆ. ಬರಹಗಾರನ ಬಗ್ಗೆ ಸಹಾನುಭೂತಿ, ಮೆಚ್ಚುಗೆ ಮತ್ತು ಕುತೂಹಲನನ್ನು ತೋರಿಸುವವನು ಮಾತ್ರ ಶ್ರೇಷ್ಠ ವಿಮರ್ಶಕನಾಗುವುದು ಸಾಧ್ಯ. ಇದರ ಅರ್ಥ, ನಾವು ಪರಸ್ಪರ ಕಲಿಯುವುದು ಬೇಕಾದಷ್ಟಿದೆ ಎಂದಾಯಿತು. ವಿಮರ್ಶೆ ಬರಹಗಾರನಿಗೆ ಎರಡು ರೀತಿಯಲ್ಲಿ ಶಿಕ್ಷಣ ನೀಡಬಲ್ಲದು. ಒಂದು, ಯುವ ಬರಹಗಾರರಿಗೆ ಹಾಗೂ ಮಾಧ್ಯಮದ ಬಳಕೆಯಲ್ಲಿ ನುರಿಯದೆ ತಪ್ಪು ಮಾಡುವ ಬರಹಗಾರರಿಗೆ ಅವರ ತಪ್ಪುಗಳನ್ನು ತಿದ್ದಿಕೊಳ್ಳಲು ಅವಕಾಶ ಮಾಡಿಕೊಡುವಂಥ ನಿಷ್ಠುರ, ಆದರೆ ಮಾರ್ಗದರ್ಶಿ ವಿಮರ್ಶೆ.* ಎರಡು, ಸಾಮಾಜಿಕವಾದ ಅರ್ಥದಲ್ಲಿ ವಿಮರ್ಶೆ ಬರಹಗಾರನಿಗೆ ಶಿಸ್ತನ್ನು ಕಲಿಸಬೇಕು. ಶ್ರಮಿಕ ವರ್ಗಕ್ಕೆ ಸೇರಿದ ಬರಹಗಾರ ಮಾತ್ರವಲ್ಲದೆ ಮಾರ್ಕ್ಸ್‌ವಾದಿ ಬರಹಗಾರ ಕೂಡ ತನ್ನ ಎಳಸು ಸಾಮಾಜಿಕ ಧೋರಣೆಯಿಂದಾಗಿ ಸಮಾಜ ಜೀವನದ ನಿಯಮಗಳ ಬಗ್ಗೆ ತನಗಿರುವ ಎಳಸು (Primitive) ವಿಚಾರಗಳಿಂದ ಅಥವಾ ಒಂದು ಯುಗದ ಮೂಲಭೂತ ವಿಚಾರಗಳ ಅಜ್ಞಾನದಿಂದ ತಪ್ಪುಗಳನ್ನು ಮಾಡುವ ಸಂಭವ ಇದ್ದೇ ಇರುತ್ತದೆ. ಇದು ಬರಹಗಾರನನ್ನು ಚುಚ್ಚುವ ಮಾತಲ್ಲ. ಆದರೆ ವಾಸ್ತವಾಂಶ. ಏಕೆಂದರೆ ಬರಹಗಾರ ಸೂಕ್ಷ್ಮ ಸಂವೇದನಾಶೀಲನಾದ್ದರಿಂದ ವಾಸ್ತವತೆಯ ಎಲ್ಲ ಪ್ರಭಾವಗಳಿಗೂ ತನ್ನನ್ನು ಒಡ್ಡಿಕೊಂಡುಬಿಡುತ್ತಾನೆ. ವೈಜ್ಞಾನಿಕ ರೀತಿಯಲ್ಲಿ ವಿಚಾರಗಳನ್ನು ಅರ್ಥಮಾಡಿಕೊಳ್ಳಲು ಬೇಕಾದ ಶಿಸ್ತು ಅವನಲಿಲ್ಲದಿರಬಹುದು ಅಥವಾ ತನಗೆ ಬೇಕಿಲ್ಲನೆನ್ನುವಷ್ಟರ ಮಟ್ಟಿಗೆ ಅವುಗಳನ್ನು ನಿರಾಕರಿಸಬಹುದು. ಹೀಗಾಗಿ ವಿಮರ್ಶಕ ಈ ದಿಕ್ಕಿನಲ್ಲಿ ನೀಡುವ ಸಹಾಯದ ಬಗೆಗೆ ಇವನು ತಾಳ್ಮೆ ಕಳೆದುಕೊಳ್ಳಬಹುದು.

ಆದರೆ ಮುಖ್ಯವೆನಿಸುವ ಬರಹಗಾರರು ಹಾಗೂ ಪ್ರತಿಭಾವಂತ ವಿಮರ್ಶಕರ ಪರಸ್ಪರ ಸಹಕಾರದಿಂದ ಶ್ರೇಷ್ಠ ಸಾಹಿತ್ಯ ಸೃಷ್ಟಿಯಾಗುತ್ತದೆ. ಇಂಥ ಸಾಹಿತ್ಯ ಹಿಂದೆ ಸೃಷ್ಟಿಯಾದಂತೆ ಮುಂದೆಯೂ ಸೃಷ್ಟಿಯಾಗುತ್ತಲೇ ಹೋಗುತ್ತದೆ ಎನ್ನುವುದು ಸತ್ಯ.

ವಿಮರ್ಶೆ ಬರಹಗಾರನಿಗೆ ಮಾತ್ರವಲ್ಲದೆ ಓದುಗನಿಗೂ ಶಿಕ್ಷಣ ನೀಡುತ್ತದೆ. ಓದುಗ ಕೃತಿಯನ್ನು ಹೇಗೆ ಓದಬೇಕು ಎನ್ನುವುದನ್ನು ಹೇಳಿಕೊಡುವುದು ವಿಮರ್ಶಕನ ಜವಾಬ್ದಾರಿ ವಿಮರ್ಶಕ ವ್ಯಾಖ್ಯಾನಕಾರನಾಗಿ, ಚಿಪ್ಪಿನೊಳಗೆ ಹುದುಗಿರುವ ಮುತ್ತನ್ನು ಗುರುತಿಸಿ

---

* ಇಲ್ಲಿ ಲೂನಾಕಾರ್‌ಸ್ಕಿ ಬೆಲಿನ್‌ಸ್ಕಿಯ ಉದಾಹರಣೆ ಕೊಡುತ್ತ ಇಂಥ ವಿಮರ್ಶಕರ ಮಾರ್ಗದರ್ಶನ ಯಾವುದೇ ಕಾಲಕ್ಕೆ (ಕ್ರಾಂತಿಪೂರ್ವ ರಷ್ಯಕ್ಕಷ್ಟೇ ಅಲ್ಲದೆ ಕ್ರಾಂತಿಯ ನಂತರ) ಅಗತ್ಯ ಎನ್ನುತ್ತಾನೆ.

ಕ್ರಾಂತಿಪೂರ್ವ ರಷ್ಯಾದ ಪ್ರಮುಖ ವಿಮರ್ಶಕ ಬೆಲಿನ್‌ಸ್ಕಿ, ಸಾಹಿತ್ಯವು ರಾಷ್ಟ್ರೀಯ ಚೈತನ್ಯದ ಅಭಿವ್ಯಕ್ತಿಯಾಗಬೇಕು ಎನ್ನುವ ಜರ್ಮನ್ ರೊಮ್ಯಾಂಟಿಕ್ ರಾಷ್ಟ್ರೀಯತೆಯ ವಿಚಾರಗಳನ್ನು ರಷ್ಯನ್ ಸಾಹಿತ್ಯ ಸಂದರ್ಭದಲ್ಲಿ ನೆಲೆಗೊಳಿಸಿದ್ದಲ್ಲದೆ, ಕೃತಿಯಲ್ಲಿ ಹುದುಗಿರುವ ಸಾಮಾಜಿಕ ಅರ್ಥಗಳನ್ನು ವಿಶ್ಲೇಷಿಸುವುದೇ ವಿಮರ್ಶೆಯ ಕಾರ್ಯ ಎಂದು ಹೇಳಿದ.

* ಬರಹಗಾರ ತನ್ನ ವಿಚಾರಗಳಲ್ಲಿ ತೀರ ಸ್ವಕೀಯವಾದಾಗ (self-centredness) ಇದು ಅನಿವಾರ್ಯ.

ಹೊರತೆಗೆಯುವವಂತೆ ಕೃತಿಯ ಅಂತಃ ಸತ್ವವನ್ನು ಗುರುತಿಸಬೇಕು. ಕಲಾತ್ಮಕ ಅಂಶಗಳನ್ನಾಧರಿಸಿ ಸಾಹಿತ್ಯದ ಸಾಮಾನ್ಯ ನಿಯಮಗಳನ್ನು ರೂಪಿಸುವವನಾಗಿ ಓದ್ಯಗನ ಸಾಹಿತ್ಯಸ್ವಾದನೆಯನ್ನು (taste) ಉತ್ತಮಗೊಳಿಸುವ ಕೆಲಸಮಾಡಬೇಕು. ಇದು ಸಾಹಿತ್ಯ ಪರಂಪರೆಗೂ ಸಮಕಾಲೀನ ಸಾಹಿತ್ಯಕ್ಕೂ ಅವನಿಗೂ ಇರುವ ಸಂಬಂಧ. ಹೀಗೆ ಸಾಹಿತ್ಯಕ್ಕೂ ಓದುಗನಿಗೂ ಇರುವ ಸಂಬಂಧವನ್ನೂ ಅವನು ತಿಳಿಸಬೇಕು.

ಇವೆಲ್ಲಕ್ಕೂ ಪೂರಕವಾಗಿ ಎರಡು ವಿಷಯಗಳು : ಮೊದಲನೆಯದಾಗಿ, ಮಾರ್ಕ್ಸ್‌ವಾದಿ ವಿಮರ್ಶಕ ಬರಹಗಾರನ ಮೇಲೆ ಗುಮಾನಿ ಇಡುತ್ತಾನೆ ಎನ್ನುವ ಆಪಾದನೆಗೆ ಗುರಿಯಾಗುತ್ತಾನೆ. ಬರಹಗಾರ ತಿಳಿದೋ ತಿಳಿಯದೆಯೋ ರಾಜಕೀಯವಾಗಿ ದಾರಿ ತಪ್ಪುವುದನ್ನು (ಅವನ ಕೃತಿ ಅನುದ್ದಿಶ್ಯಪೂರ್ವಕವಾಗಿ ಪ್ರತಿಗಾಮಿ ವಿಚಾರಗಳನ್ನು ಹೊಂದಿರುವುದನ್ನು) ವಿಮರ್ಶಕ ಗುರ್ತಿಸಬೇಕೆ ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದು ಅಗತ್ಯ. ಆದರೆ ವೈಯಕ್ತಿಕ ವಿಷಯಗಳಿಗಾಗಿ ಒಬ್ಬ ಬರಹಗಾರನ ಮೇಲೆ ರಾಜಕೀಯ ಗುಮಾನಿಯಿಂದ ತಪ್ಪನ್ನು ಹೊರಿಸುವುದು, ಎಂದಿದ್ದರೂ ಹೊರಬೀಳುವ ಅಯೋಗ್ಯ ಕೆಲಸ. ಹಾಗೆಯೆ, ಆ ವಸ್ತುನಿಷ್ಠ ಸಾಮಾಜಿಕ ವಿಶ್ಲೇಷಣೆಯ ಫಲಿತಾಂಶಗಳನ್ನು ಮುಚ್ಚಿಟ್ಟುಕೊಳ್ಳುವ ವಿಮರ್ಶಕ ಕೂಡ ಬೇಜವಾಬ್ದಾರಿತನ ಹಾಗೂ ರಾಜಕೀಯ ನಿಷ್ಕ್ರಿಯತೆಗೆ ಒಳಗಾಗುತ್ತಾನೆ. ಅಂದರೆ ಇಂಥ ವಿಮರ್ಶಕ ಮಾರ್ಕ್ಸ್‌ವಾದಿ ವಿಮರ್ಶೆಯ ತಿರುಳನ್ನೇ ಎಕ್ಕುಟ್ಟಿಸುತ್ತಾನೆ.

ಎರಡನೆಯದಾಗಿ, ಮಾರ್ಕ್ಸ್‌ವಾದಿ ವಿಮರ್ಶಕ ಸನ್ನು ನಿರ್ಮಾಣದ ಕೆಲಸದಲ್ಲಿ ಸಾಹಿತ್ಯದ ಉಪಯುಕ್ತತೆಯನ್ನು ಎತ್ತಿ ತೋರಿಸಬೇಕು. ಬರಹಗಾರ ಈ ವಿಮರ್ಶೆಯ ಉದ್ದೇಶ್ಯಗಳನ್ನು ಅರ್ಥಮಾಡಿಕೊಂಡು ತನ್ನನ್ನು ಸರಿಪಡಿಸಿಕೊಳ್ಳಬೇಕು. ವಿಚಾರಗಳ ಗೊಂದಲದಲ್ಲಿ ಹೋರಾಟದಲ್ಲಿ ಸಿಕ್ಕಿಕೊಂಡ ಕಾಲದಲ್ಲಿ ಯಾರೇ ಆಗಲಿ ನಿಜವಾದ ಸಮಾಜವಾದಿಯಾದಲ್ಲಿ ಇಂದಿನ ಸಾಹಿತ್ಯವನ್ನು ಬೆಲೆಕಟ್ಟುವಲ್ಲಿ ಈ ಗೊಂದಲದ, ಹೋರಾಟದ ಮಹತ್ವವನ್ನು ಅಲ್ಲಗಳೆಯುವಂತಿಲ್ಲ.*

ಕೊನೆಯದಾಗಿ, ವಿಮರ್ಶೆಯಲ್ಲಿ ಮೊನಚಾದ ಹಾಗೂ ಕವಿ ವಾತಾವರಣವನ್ನುಂಟು ಮಾಡುವ ಚರ್ಚೆಗಳ ಅಗತ್ಯವಿದೆಯೆ ಎಂಬುದು. ಚರ್ಚೆ ಮೊನಚಾದಲ್ಲಿ ಅದೂ ಎರಡೂ ಪಕ್ಷಗಳಲ್ಲಿ ತಪ್ಪಾದಾಗ–ಓದುಗರ ಆಸಕ್ತಿ ಕೆರಳುತ್ತದೆ, ನಿಜ. ಆದರೆ ತನ್ನ ವಾದದ ದುರ್ಬಲ ಲಕ್ಷಣಗಳನ್ನು ಮೊನಚು ಮಾತುಗಳ ಮೋಹಕತೆಯಲ್ಲಿ ಅಡಗಿಸುವುದು ಬಹು ದೊಡ್ಡ ತಪ್ಪು. ವ್ಯಂಗ್ಯ, ವಿಡಂಬನೆ, ಪರನಿಂದೆಯಲ್ಲಿನ ಕೆತ್ತರಿಸುವಂಥ ಮಾತುಗಳು ಸಾಮಾನ್ಯವಾಗಿ ವಿಷಯಕ್ಕಿಂತಲೂ ಮುಂದಾಗಿ ಚರ್ಚೆಯನ್ನು ಜಾಳುಮಾಡಿ ಗಂಭೀರತೆಯನ್ನು ತಿಂದುಬಿಡುತ್ತವೆ. ಮಾರ್ಕ್ಸ್‌ವಾದಿ ವಿಮರ್ಶೆ ವೈಜ್ಞಾನಿಕವಾಗಿರುವುದರ ಜೊತೆಗೆ

* ಇಂಥ ಸಂದರ್ಭದಲ್ಲಿ ಬರಹಗಾರ ಮತ್ತು ವಿಮರ್ಶಕನ ಜವಾಬ್ದಾರಿ ಎಂಥದು ಎನ್ನುವುದನ್ನು ಆರ್ವೆಲ್ "My country Right or left" ಮತ್ತು "In front of your Nose" ಪುಸ್ತಕಗಳ ಹಲವಾರು ಲೇಖನಗಳಲ್ಲಿ ವಿವರವಾಗಿ ಚರ್ಚಿಸುತ್ತಾನೆ.

ಕಲೆಯಾಗಿಯೂ ಇರುವುದರಿಂದ, ವಿಮರ್ಶೆ, ವಿಮರ್ಶೆಯ ಚೌಕಟ್ಟನ್ನು ಮೀರಿಹೋಗ ಬಾರದು. ಸಿಟ್ಟು ವಿಮರ್ಶೆಗೆ ಉತ್ತಮ ವಾತಾವರಣ ಕಲ್ಪಿಸಲು ಸಾಧ್ಯವೇ ಇಲ್ಲ. ಅಲ್ಲದೆ ರೊಚ್ಚಿನಿಂದ ವಾದಕ್ಕಿಳಿಯುವವನು ಒಳ್ಳೆಯ ವಿಮರ್ಶಕನೂ ಆಗಲಾರ. ವ್ಯಂಗ್ಯ, ವಿಡಂಬನೆ, ಕೆಲವೊಮ್ಮೆ ಬೇಕಾಗಬಹುದು. ಆದರೆ ನಮ್ಮ ರಚನಾತ್ಮಕ ಕಾರ್ಯದಲ್ಲಿ ದುರುದ್ದೇಶಪೂರಿತ ದ್ವೇಷಕ್ಕೆ ಅವಕಾಶವಿಲ್ಲ. ವರ್ಗದ್ವೇಷದೊಡನೆ ಇದನ್ನು ಕಲಸಿ ಕೊಳ್ಳಬಾರದು.

ಒಟ್ಟಿನಲ್ಲಿ, ಮಾರ್ಕ್ಸ್‌ವಾದಿ ವಿಮರ್ಶಕ ಬಿಚ್ಚುಮನಸ್ಸಿನಿಂದ ಸಾಹಿತ್ಯದಲ್ಲಿ ಗಟ್ಟಿಯಾದ ದ್ದನ್ನು ಅರಿವು ಮಾಡಿಕೊಡಬೇಕಾಗುತ್ತದೆ. ಮತ್ತು ಸರುಕಿಲ್ಲದೆ ಬಲೂನಿನಂತೆ ಉಬ್ಬಿ ಕೊಂಡಿರುವ ಕೃತಿಗಳನ್ನು ನಿರ್ದಾಕ್ಷಿಣ್ಯವಾಗಿ ಕಿತ್ತೊಗೆಯಬೇಕಾಗುತ್ತದೆ.

---

* ಲೂನಾಚಾರ್‌ಸ್ಕಿಯ "ಮಾರ್ಕ್ಸ್‌ವಾದಿ ವಿಮರ್ಶೆಯುಲ್ಲಿನ ಸಮಸ್ಯೆಗಳನ್ನು ಕುರಿತ ಪ್ರಬಂಧ"ವನ್ನು ಹೆಚ್ಚಾಗಿ ಆಧರಿಸಿ ಬರೆಯಲಾಗಿದೆ—ಲೇಖಕರು.

# ಪುಸ್ತಕ ವಿಮರ್ಶೆ
## ನೆರೂದರ ಕಾವ್ಯ

ಮುರಳಿ ಬರುವೆ : **ಪಾಬ್ಲೊ ನೆರೂದ**

ಅನುವಾದ : **ತೇಜಸ್ವಿನೀ ನಿರಂಜನ**

"ಶುದ್ಧ ಕಾವ್ಯ"ದ ಸಾಂಪ್ರದಾಯಿಕ ಪರತ್ತುಗಳನ್ನು ಧಿಕ್ಕರಿಸಿ "ಅಶುದ್ಧ ಕಾವ್ಯ" ವನ್ನು ಪ್ರತಿಪಾದಿಸಿದ ನೆರೂದಾ "ಅಶುದ್ಧ ಕಾವ್ಯ" ಉತ್ತಮ ಕಾವ್ಯವೂ ಆಗುವುದು ಸಾಧ್ಯ ಎನ್ನುವುದನ್ನು ತಾನು ಬರೆದ ಕಾವ್ಯದಲ್ಲೇ ನಿಭಾಯಿಸಿದವನು. "ಶುದ್ಧ ಕಾವ್ಯ"ವನ್ನು ಬರೆಯಲು ಅವನಿಗಿದ್ದ ಬೇಜಾರೆಂದರೆ: ಕಾವ್ಯದ ವಸ್ತುಗಳೇ ಬೇರೆ, ಅವನ್ನುಳಿದು ಸಾಮಾನ್ಯ ವಸ್ತುಗಳನ್ನೂ, ತೀರ ಸಾಮಾನ್ಯ ಜೀವನದ ಭೌತಿಕ ಸಂಗತಿ ಗಳನ್ನೂ ಬರೆಯತೊಡಗಿದರೆ ಕಾವ್ಯ "ಅಕಾವ್ಯ"ವಾಗುತ್ತದೆ ಅಥವಾ ಕಾವ್ಯಗುಣವನ್ನು ಕಳೆದುಕೊಳ್ಳುತ್ತದೆ ಎನ್ನುವ ಸಾಂಪ್ರದಾಯಿಕತೆ. ಫ್ರೆಂಚ್ ಸಿಂಬಾಲಿಸ್ಟರ ಮತ್ತು ಸ್ಪೇನಿನಲ್ಲಿ ಅದುವರೆಗೆ ಪ್ರಚಲಿತವಿದ್ದ ಕಾವ್ಯ ಇಂಥ "ಶುದ್ಧ ಕಾವ್ಯ"ದ ಪರಂಪರೆಯಲ್ಲೆ ಬೆಳೆದಿತ್ತು. ನೆರೂದಾನ ಕಾವ್ಯದ ಆಶಯ ಬೇರೆಯೇ ಆದ್ದರಿಂದ ಅವನು "ಅಶುದ್ಧ ಕಾವ್ಯ" ಹೊಗೆಯ, ಬೆವರಿನ, ಹೂವಿನ ಪರಿಮಳದ, ಉಚ್ಚೆಯವಾಸನೆಯ–ವಿವಿಧ ಅನುಭವಗಳನ್ನು ನಿರೂಪಿಸಬೇಕು" ಎಂದ. ಏಕೆಂದರೆ ಜೀವನದ ಅತಿ ಸೂಕ್ಷ್ಮ ಮತ್ತು ಉತ್ಕೃಷ್ಟವಾದ ಅನುಭವಗಳೇ ಅದುವರೆಗಿನ ಕಾವ್ಯದಲ್ಲಿ "ಆಯ್ದ" ವಸ್ತುಗಳಾಗುತ್ತಿ ದ್ದವು. "ನಮ್ಮ ಕನಸುಗಳನ್ನು. ಪ್ರೇಮ-ಪ್ರೀತಿಯನ್ನು, ಪ್ರಕೃತಿಯ ಸೌಂದರ್ಯವನ್ನು, ಬದುಕಿನ ಘರ್ಷಣೆಗಳನ್ನು ನಿರೂಪಿಸುವಂತೆಯೇ ನಮ್ಮ ರಾಜಕೀಯ ಒಲವುಗಳನ್ನೂ, ತಿರಸ್ಕಾರಗಳನ್ನೂ, ಸಂಶಯಗಳನ್ನೂ, ನಮ್ಮ ನಿಶ್ಚಯ ಧೋರಣೆಗಳನ್ನೂ "ಅಶುದ್ಧ ಕಾವ್ಯ" "ನಿರೂಪಿಸಬೇಕು" ಎಂದ ನೆರೂದಾ. ಅಂದರೆ ಕವಿಯಾದವನು ತಾನು ಬದುಕುವ ಸಮಾಜದಲ್ಲಿ ರೂಪಿತವಾಗುವ ಸಾಂಸ್ಕೃತಿಕ ಸಂದರ್ಭದಲ್ಲಿನ "ಮೇಲ್ಮೆ" ಅನುಭವಗಳಿಗಷ್ಟೆ ತನ್ನನ್ನು ಒಡ್ಡಿಕೊಳ್ಳದೆ, ಸಾಂಸ್ಕೃತಿಕ ಸಂದರ್ಭವನ್ನು ರೂಪಿಸುವ ಸಮಾಜವಲ್ಲಿನ ಒಟ್ಟು ಅನುಭವಗಳಿಗೆ ತನ್ನನ್ನು ಒಡ್ಡಿಕೊಂಡು ಕಾವ್ಯವನ್ನು ಬರೆಯಬೇಕು ಎನ್ನುವ ಅರ್ಥವನ್ನು ಈ ಹೇಳಿಕೆ ಸ್ಪಷ್ಟೀಕರಿಸುತ್ತದೆ.

ನೆರೂದಾ "ಅಶುದ್ಧ ಕಾವ್ಯ"ವನ್ನು ಕುರಿತು ಹೀಗೆ ಬರೆಯುವ ಹೊತ್ತಿಗೆ ತನ್ನ ಕಾವ್ಯ

---

* ಪ್ರಕಟನೆ : ಕಥಾ ಸಾಹಿತ್ಯ, ಬೆಂಗಳೂರು-41, ಪುಟಗಳು : xii+೮೦, ಬೆಲೆ : ಐದು ರೂಪಾಯಿ.

ಜೀವನದ ಮಧ್ಯ ವಯಸ್ಸನ್ನು ದಾಟಿದ್ದ. ಅದುವರೆಗೆ ಅವನು ಬರೆದದ್ದು ಪ್ರಕೃತಿ, ಪ್ರೇಮ ಮುಂತಾದ ವಸ್ತುವನ್ನುಳ್ಳ, ವರ್ಡ್ಸ್‌ವರ್ತ್ ಪರಂಪರೆಯ ರೊಮ್ಯಾಂಟಿಕ್ ಕವಿತೆಗಳನ್ನು. ಹೀಗೆ ಬರೆಯುವಾಗಲೂ ನೆರೂದ ಚಿಲಿಯನ್ನರ ಸಾಮಾನ್ಯ ಬದುಕಿನ ಅನುಭವಗಳನ್ನು ಗಮನದಲ್ಲಿಟ್ಟುಕೊಂಡು ಬರೆಯುತ್ತಿದ್ದ ಎನ್ನುವುದನ್ನು ನಾವು ಮರೆಯ ಕೂಡದು. ಜನಜೀವನದ ಕಷ್ಟ ಸುಖಗಳಿಗೆ ಕಾವ್ಯಾಭಿವ್ಯಕ್ತಿಯನ್ನು ಕೊಡುವ ಆಶಯ ನೆರೂದಾನ ಕಾವ್ಯದಲ್ಲಿ ಮೊದಲಿನಿಂದಲೂ ಕಾಣುವುದನ್ನು ಗಮನಿಸಬೇಕು. ಜೀವನ ವನ್ನು ಆಧ್ಯಾತ್ಮಿಕ ಅಥವಾ ದಾರ್ಶನಿಕ ಮೌಲ್ಯಗಳ ಮೂಲಕ ವ್ಯಾಖ್ಯಾನಿಸುವ ಆಸಕ್ತಿ ಯಿಂದ ಯೂರೋಪಿಯನ್ ಸಂಪ್ರದಾಯದಲ್ಲಿ ಬರೆಯುತ್ತಿದ್ದಾಗಲೂ ನೆರೂದಾನಿಗೆ, ತನ್ನ ಬಾಲ್ಯದ ನೆನಪಿನಿಂದೆದ್ದು ಬಂದ ಕಷ್ಟದ, ನೋವಿನ, ಶೋಷಣೆಯ ಜಗತ್ತೊಂದಿದೆ ಎನ್ನುವ ಅರಿವಿತ್ತು. ಈ ಜಗತ್ತು ನೆರೂದಾನಿಗೆ ಅಪರಿಚಿತವಾಗುಳಿಯುವುದು ಸಾಧ್ಯ ವಿರಲಿಲ್ಲ.

ನೆರೂದಾನ ಕಾವ್ಯಪ್ರತಿಭೆಯನ್ನು ಕುರಿತು ಯೋಚಿಸುವಾಗ ನೆರೂದಾನ ವ್ಯಕ್ತಿತ್ವ ವನ್ನೂ ಅವನ ಕಾವ್ಯವನ್ನು ಸಾಧ್ಯವಾಗಿಸಿದ ಚಿಲಿಯನ್ ಸಾಂಸ್ಕೃತಿಕ ಸಂದರ್ಭವನ್ನು ತಿಳಿಯುವುದು ಅವಶ್ಯ ಎಂದುಕೊಂಡಿದ್ದೇನೆ. ಸ್ಪೇನ್ ದೊರೆಗಳ ಬಂದೂಕಿನಡಿಯಲ್ಲಿ ಇಡೀ ಲ್ಯಾಟಿನ್ ಅಮೆರಿಕಾ ದುಡಿಯುತ್ತಿದ್ದಾಗಲೂ ಚಿಲಿಗೆ ವಸಾಹತು ನೀತಿಯ ಅನಿವಾರ್ಯ ಅಂಗವಾದ ಶೋಷಣೆಯ ಕಾವು ನೇರವಾಗಿ ತಟ್ಟಲಿಲ್ಲ. ಈ ಕಾರಣಕ್ಕಾಗಿಯೇ ಪೆರುವಿನ ಲಿಮಾ ನಗರದ ವೈಭವೋಪೇತ ಪ್ಲಾಜಾ ಪ್ರದೇಶವೂ, ಅಲ್ಲಿನ ದೊರೆಗಳ ಸೇವೆಗಾಗಿಯೇ ಹುಟ್ಟಿಕೊಂಡ “ನರಕದಂಥ” ಸ್ಲಂಗಳು ಚಿಲಿಯಲ್ಲಿ ಸಾಧ್ಯವಾಗಲಿಲ್ಲ.

ಆದರೆ ಚಿಲಿಯ ರಾಜಕೀಯವನ್ನೂ ಸಂಸ್ಕೃತಿಯನ್ನು ರೂಪಿಸಿದ್ದು ಅಲ್ಲಿನ ನೈಟ್ರೇಟ್ ಮತ್ತು ತಾಮ್ರದ ಗಣಿಗಳು. ನೈಟ್ರೇಟ್, ಯೂರೋಪಿಯನ್ ದೇಶಗಳ ಮತ್ತು ಸ್ಪೇನಿನ ರಾಜಕೀಯ ಮತ್ತು ಸಾಂಸ್ಕೃತಿಕ ಆದರ್ಶಗಳನ್ನು ಚಿಲಿಗೆ ಒದಗಿಸಿತು. ಹೀಗಾಗಿ ಅಲ್ಲಿನ ಸ್ವದೇಶಿಯರಾದ ಇಂಡಿಯನ್ನರಿದ್ದರೂ ಅವರು ತಮ್ಮತನವನ್ನು ಗುರುತಿಸಲು ಸಾಧ್ಯವಾಗುವಂಥ ಸಂಸ್ಕೃತಿ ಸಂಭವಿಸಲಿಲ್ಲ. ಬದಲಾಗಿ ವಸಾಹತು ಕಾಲಕ್ಕೂ ಮುಂಚೆ ಬಂದ ಸ್ಪೇನಿನ ಮತ್ತು ನಂತರದ ಯೂರೋಪಿಯನ್ನರ ನಡವಳಿಕೆಗಳಿಂದ ರೂಪಿತವಾದ ಸಂಸ್ಕೃತಿಯೇ “ಚಿಲಿಯನ್” ಸಂಸ್ಕೃತಿಯೂ ಆಯಿತು. ಈ ಕಾರಣಕ್ಕಾಗಿ ಚಿಲಿಯನ್ನರಿಗೆ ನಮಗಾಗಲೀ, ಗ್ರೀಕರಿಗಾಲೀ ಇರುವಂಥ ಬೇರುಬಿಟ್ಟ ಸನಾತನ ಸಂಸ್ಕೃತಿ ಒದಗಿಬರಲಿಲ್ಲ. ಅಲ್ಲದೆ “ಚಿಲಿಯನ್” ಸಂಸ್ಕೃತಿ ರಾಜಕೀಯ ಕಾರಣಗಳಿಂದಾಗಿ ಸ್ಪಾನಿಷ್ ಸಂಸ್ಕೃತಿಯ ಅಂಗವೇ ಆಯಿತು.

ನಂತರ ಚಿಲಿಯನ್ನರಿಗೆ ಒದಗಿದ ಸಮಸ್ಯೆಗಳು ಆಂತರಿಕ ಸ್ವರೂಪದ–ಸಮಾಜದಲ್ಲಿನ ಆಳುವ ಮತ್ತು ದುಡಿಮೆಯವರ್ಗದವಾಗಿರುವುದರ ಜೊತೆಗೆ, ಅಮೇರಿಕನ್ನರ ಹೊಸ ವಸಾಹತು ನೀತಿಯಿಂದ ಉತ್ತೇಜನ ಪಡೆಯುತ್ತಿರುವ ಸರ್ಕಾರದ ಕಾರ್ಮಿಕನೀತಿ, ತಾಮ್ರದ ಗಣಿಗಳ ಮತ್ತು ಕೋಕಾಕೋಲಾ ಕಂಪೆನಿಗಳ ವ್ಯವಹಾರಕ್ಕೆ ಸಂಬಂಧಿಸಿದ್ದು.

ನಾನು ಇದೆಲ್ಲವನ್ನೂ ಇಲ್ಲಿ ಹೇಳುವ ಕಾರಣವೆಂದರೆ ಚಿಲಿಯ ಈ ರಾಜಕೀಯದಲ್ಲಿ ಅಲ್ಲಿನ ಎಲ್ಲ ಬರಹಗಾರರೂ ತಮ್ಮನ್ನು "ತೊಡಗಿಸಿ"ಕೊಂಡವರೂ, ತಮ್ಮ ಬರವಣಿಗೆಯ ಸಮಸ್ಯೆಗಳಿಗಷ್ಟೇ ಅಲ್ಲದೆ ದೇಶದ ಆರ್ಥಿಕ ರಾಜಕೀಯ ಸಮಸ್ಯೆಗಳಿಗೂ ಪರಿಹಾರ ಹುಡುಕಲು ಯತ್ನಿಸಿದವರು. ಇವರಾರೂ ನೀರೋಗಗಳಾಗಿರಲು ಸಾಧ್ಯವಿರಲಿಲ್ಲವಾದ ಕಾರಣ ರಾಜಕೀಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಪಾಲುಗೊಂಡು ಒಂದು ಬಗೆಯ "ರಾಜಕೀಯ ಸಂಸ್ಕೃತಿ"ಯನ್ನು ರೂಪಿಸಿಕೊಂಡವರು.

ನೆರೂದಾ ರಾಜಕೀಯದಲ್ಲಿ ತೇಲಿ ಮುಳುಗಿದ ಕವಿ. ಅವನು ರಾಜಕೀಯವನ್ನು ಕುರಿತು ಬರೆದ. ದಲಿತರ ನೋವನ್ನು ಕುರಿತು ಬರೆದ. ಎಲ್ಲೂ ಸಿನಿಕನಾಗಲಿಲ್ಲ. ಇದಕ್ಕೆ ಕಾರಣ ಅವನಿಗೆ ಮಾನವ ಬದುಕಿನ ಬಗ್ಗೆ ಇದ್ದ ಅಪಾರಪ್ರೀತಿ, ನಂಬಿಕೆ. ನೆರೂದಾನಿಗೆ ಮನುಷ್ಯಜೀವನದ ಮೇಲಿದ್ದ ಪ್ರೀತಿಯೇ ಭೌತಿಕ ವಸ್ತುಗಳ ಮೇಲಿತ್ತು. ಉಳುವ ನೇಗಿಲಿನ ಬಗ್ಗೆ, ಗಣಿಯಲ್ಲಿ ಅಗೆಯುವ ಪಿಕಾಸಿಗಳ ಬಗ್ಗೆ, ತೊಡುವ ಬಟ್ಟೆಗಳ ಬಗ್ಗೆ ಅವನಿಗೆ ಆದರವಿತ್ತು. ಇವು ಅವನಿಗೆ ಕೇವಲ ಉಪಕರಣಗಳಾಗಿ, ವಸ್ತುಗಳಾಗಿ ಕಂಡು ಬರಲಿಲ್ಲ. ಮಾನವನನ್ನು ಈ ಭೂಮಿಯ ಬದುಕಿನೊಂದಿಗೆ ಬೆಸೆಯುವ, ಸಮಾಜದೊಂದಿಗೆ ತೊಡಗಿಸುವ ಮಾನವಜೀವನದ ಅವಿಭಾಜ್ಯ ಅಂಗಗಳಾಗಿದ್ದವು. ಅವು ಮನುಷ್ಯನಿಗೆ ಅನ್ನ ಕೊಡುತ್ತಿದ್ದವು; ಅವನ ಇಹದ ಬದುಕಿಗೆ ಗೌರವ ದೊರಕಿಸುತ್ತಿದ್ದವು. ಇದರಿಂದಾಗಿ ನೆರೂದಾ ಹೂವು, ಪ್ರಕೃತಿ, ಪ್ರೇಮದ ಮೇಲೆ ಕವನಗಳನ್ನು ಬರದಂತೆ ನೇಗಿಲಿನ ಮೇಲೆ ಬರೆದ; ತೊಡುವ ಬಟ್ಟೆಗಳ ಮೇಲೆ ಬರೆದ:

> ನಿಮ್ಮ ಬದುಕು
> ನನ್ನ ಬದುಕಿನ ಪ್ರತಿಮೆಯನ್ನು ಉಬ್ಬಿಸುತ್ತದೆ.
> ನೀವು ಅಲೆಗಳಂತೆ ಏಳುತ್ತೀರಿ
> ಗಾಳಿಯಲ್ಲಿ ಮಾರ್ದನಿಗೊಡುತ್ತೀರಿ
> ನೀವು ನನ್ನ ಆತ್ಮವೇನೋ ಎಂಬಂತೆ
>
> "ನಾನು ಕೇಳುತ್ತೇನೆ
> ಯಾವತ್ತಾದರೊಮ್ಮೆ
> ಶತ್ರುವಿನ ಗುಂಡು
> ನನ್ನ ರಕ್ತದಿಂದ ನಿಮ್ಮನ್ನು ತೋಯಿಸೀತೆ
> ಆಗ
> ನೀವು ನನ್ನೊಡನೆ ಸಾಯುತ್ತೀರಿ.

(ಬಟ್ಟೆಗಳಿಗಾಗಿ ಒಂದು ಹಾಡು)

ಈ ಶತಮಾನದ ಬದುಕು ಹಿಂದಿನ ಯಾವ ಶತಮಾನಗಳ ಬದುಕಿಗಿಂತಲೂ ಬೇರೆಯಾದದ್ದು; ಸೂಕ್ಷ್ಮವಾದದ್ದು. ನೆರೂದಾ ಹೇಳಿದ: "ಜಗತ್ತು ಬದಲಾಗಿದೆ. ನನ್ನ ಕಾವ್ಯವೂ ಬದಲಾಗಬೇಕು". ಫ್ರೆಂಚ್ ಸಿಂಬಾಲಿಸ್ಟರು ಬರೆಯುತ್ತಿದ್ದ ಕಾವ್ಯ

ವಾಕರಿಕೆ ತರಿಸುವಂತಿತ್ತು. ತನ್ನ ಅನುಭವ ಜಗತ್ತಿನ ಎಲ್ಲ ಸೂಕ್ಷ್ಮತೆಗಳಿಗೂ ನೆರೂದಾನ ಕವಿಹೃದಯ ಮಿಡಿಯುತ್ತಿತ್ತು. ಸಾಮಾನ್ಯರು ಬದುಕುವ ಜಗತ್ತಿನೊಳಗಿನ ಕಾವ್ಯವಸ್ತುಗಳನ್ನು ಎತ್ತಿಕೊಂಡು ನೆರೂದಾ ಬರೆಯತೊಡಗಿದ. ಗಣಿಗಳು, ಹಜಾಮನ ಅಂಗಡಿಗಳು, ಟೈಲರ್ ಷಾಪುಗಳು, ಫ್ಯಾಸಿಸ್ಟರು ನಿರ್ಮಿಸಿದ ಸ್ಮಶಾನಗಳು, ಎಲ್ಲದರಲ್ಲೂ ನೆರೂದ 'ಮಾನವ ಹೃದಯದ ಅನಾದಿಕಾಲದ' ನೋವನ್ನು ಕಂಡ:

"ಹಜಾಮರ ಅಂಗಡಿಗಳ ವಾಸನೆ ನಾನು ಬಿಕ್ಕಳಿಸಿ ಗಟ್ಟಿಯಾಗಿ
ಅತ್ತುಬಿಡುವಂತೆ ಮಾಡುತ್ತಿದೆ.

..........................................

..................................

ಹೀಗಾಗುತ್ತದೆ. ನನ್ನ ಕಾಲುಗಳು ಉಗುರುಗಳು
ಕೂದಲು, ನೆರಳು
ನನ್ನಲ್ಲಿ ಬೇಸರ ಹುಟ್ಟಿಸುತ್ತವೆ
ಹೀಗಾಗುತ್ತದೆ–ನನಗೆ ಮನುಷ್ಯನಾಗಿರಲು ಬೇಸರವೀಗ
(ಅಲೆತ)

ನೆರೂದಾನನ್ನು ಕಲಕಿದ್ದು ಸ್ಪೇನಿನ ಫ್ಯಾಸಿಸ್ಟ್ ದಬ್ಬಾಳಿಕೆ. ಫ್ಯಾಸಿಸ್ಟ್ ಆಡಳಿತ ಮಾತಾಡುವ ಬಾಯಿಗಳನ್ನು ಹೊಲೆಯಿತು, ಯೋಚಿಸುವ ತಲೆಗಳನ್ನು ಉರುಳಿಸುತ್ತ ನಡೆಯಿತು. ಇಟಲಿಯಲ್ಲಿ ಆದಂತೆ, ಸ್ಪೇನ್‌ನಲ್ಲೂ ಫ್ಯಾಸಿಸಂ ವಿರುದ್ಧ ಹೋರಾಡಲು ಕಮ್ಯುನಿಸ್ಟ್ ಪಕ್ಷ ಸಿದ್ಧವಾಗುತ್ತಿತ್ತು. ನೆರೂದಾನ ತಲೆಮಾರಿನ ಎಲ್ಲ ಬುದ್ಧಿಜೀವಿಗಳೂ ಲೇಖಕರೂ ಕಮ್ಯುನಿಸ್ಟರಿಗೆ ತಾತ್ತ್ವಿಕ ಬೆಂಬಲಿಗರಾದರು. ನೆರೂದಾ ಪಕ್ಷದ ಸದಸ್ಯನೂ ಆದ. ಸ್ಪೇನ್ ಜನತೆಯ ಬಗ್ಗೆ ಅವನಿಗಿದ್ದ ವಾತ್ಸಲ್ಯ ಅಪಾರ. ಆದರೆ ಫ್ಯಾಸಿಸ್ಟರ ಸ್ಪೇನಿನಲ್ಲಿ ನೆರೂದಾ ಕಂಡದ್ದು:

"ಕಬ್ಬಿನ ಹೊಲದಲ್ಲಿ ಒಂದು ವಾಸನೆ ಉಳಿದಿದೆ:
ರಕ್ತದೇಹಗಳ ಮಿಶ್ರಣ, ವಾಕರಿಕೆ ತರುವ
ಘಾಟು ಪಕಳೆ.
ತೆಂಗಿನ ಮರಗಳ ನಡುವೆ, ಗೋರಿಗಳ ತುಂಬ
ಪಾಳು ಬಿದ್ದ ಮೂಳೆಗಳಿವೆ, ಮಾತನಾಡದ ಸಾವು—ಗಿಲಕಿಗಳಿವೆ"
[ಸರ್ವಾಧಿಕಾರಿಗಳು]

ಒಂದು ಕಡೆ ಫ್ಯಾಸಿಸ್ಟರು ಮಾನವ ಬದುಕು ಅರಳುವ ಎಲ್ಲ ಸಾಧ್ಯತೆಗಳನ್ನು ಮುಟ್ಟ ಹಾಕುತ್ತಿದ್ದರೆ ಲ್ಯಾಟಿನ್ ಅಮೆರಿಕಾ ದೇಶಗಳಲ್ಲಿ ವರ್ಗ ಶೋಷಣೆಯ ಕರಾಳಮುಖಗಳು ಪ್ರತ್ಯಕ್ಷವಾಗಿದ್ದವು. ಕವಿ ನೆರೂದಾ ಲ್ಯಾಟಿನ್ ಅಮೆರಿಕಾ ಜನತೆಯ ದಾಸ್ಯದ, ದುರ್ಭರತೆಯ ಜೀವನವನ್ನು ಕುರಿತು ಬರೆದ. ಹಾಗೆ ಬರೆಯುವಾಗ ಅವನಿಗೆ ಈ ದಲಿತರ ನೋವಿನ, ದುಃಖದ ಪ್ರತ್ಯಕ್ಷ ಅನುಭವವಿತ್ತು; ಈ ನೋವಿನ ಕಾರಣಗಳ ಪರಿಚಯವೂ

ಇತ್ತು. ಪೂರ್ಣತರದ ಮಾನವ ಸ್ವಾತಂತ್ರ್ಯವೆಂದರೆ ಮುಕ್ತಸಮಾಜಕ್ಕೆ ದಾರಿಮಾಡಿ ಕೊಡುವ ವರ್ಗರಹಿತ ಸಮಾಜವೂ ಹೌದು ಎನ್ನುವುದನ್ನು ಗಟ್ಟಿಯಾಗಿ, ತಮ್ಮಲ್ಲೇ, ಮಾತಾಡಿಕೊಳ್ಳಲೂ ಈಪತ್ರಿನ ನಮ್ಮ ಬುದ್ಧಿಜೀವಿಗಳು, ಬರಹಗಾರರು ಯಾಕೆ ಹಿಂದೇಟು ಹಾಕುತ್ತಾರೋ ಹೆದರುತ್ತಾರೋ ಅಂಥ ಭಯ ನೆರೂದನಿಗಿರಲಿಲ್ಲ. ಹೋರಾಟಗಳು ಅವಿಚ್ಛಿನ್ನವಾಗಿ ಸಾಗುತ್ತಿರುವ ಲ್ಯಾಟಿನ್‌ಅಮೆರಿಕಾ ದೇಶಗಳಲ್ಲಿನ ದಲಿತರ ಸಂಕಷ್ಟಗಳಿಗೆ, ನೋವಿಗೆ, ಧ್ವನಿಯಾದ ಇವನ ಕಾವ್ಯ ಜಗತ್ತಿನ "ದಲಿತರ ವಾಣಿ"ಯೂ ಆಯಿತು."

"ಈ ಹಡಗಿಗೆ ನಾವು ಬಂದಾಗ
ಕತ್ತಲಾಗಿತ್ತು. ನಾವು ಬೆತ್ತಲೆ ಇದ್ದೆವು.
ನಾವೆಲ್ಲಾ ಒಂದೇ ಜಾಗದಿಂದ ಬಂದದ್ದು
ನಾವೆಲ್ಲಾ ಗಂಡು-ಹೆಣ್ಣಿನಿಂದ ಬಂದದ್ದು
ಹಸಿವೆಯನ್ನು ಅರಿತು ನಾವೆಲ್ಲರೂ
ಹಲ್ಲುಗಳನ್ನು ಬೆಳೆಸಿದೆವು.
ಕೈಗಳನ್ನು ಬೆಳೆಸಿದೆವು ಕೆಲಸ ಮಾಡುವುದಕ್ಕೆ
ಇದ್ದದ್ದನ್ನು ಆಶಿಸಲು ಕಣ್ಣುಗಳನ್ನು ಬೆಳೆಸಿದೆವು
ನೀವೀಗ ಹೇಗೆ ಹೇಳುವಿರಿ
ಹಡಗಿನ ಮೇಲೆ ಜಾಗವಿಲ್ಲ ಎಂದು ?
...................................................
...................................................
ಚಪ್ಪಲಿಯಿಲ್ಲದೆ ಜಗತ್ತಿನ ಕಲ್ಲುದಾರಿಗಳಲ್ಲಿ
ಹೇಗೆ ಓಡಾಡಬೇಕು ನಾವು ?
ಮೇಜಿಲ್ಲದೆ ನಾವೆಲ್ಲಿ ಉಣ್ಣಬೇಕು ?

(ಹಡಗು)

ಎನ್ನುವ ಅಳಲಿನ, ದೈನ್ಯತೆಯ ನೋವನ್ನು ನೆರೂದಾ ಅರ್ಥಮಾಡಿಕೊಂಡವನಾಗಿದ್ದ. ಆದ್ದರಿಂದಲೇ ಹೀಗೆ ಹೇಳದೆ ಇರಲು ಅವನಿಗೆ ಸಾಧ್ಯವಿರಲಿಲ್ಲ :

"ನನಗನಿಸುತ್ತದೆ : ಹೀಗಿರಲಾರೆವು
ಹೀಗೆ ನಾವೆಲ್ಲೂ ಹೋಗುತ್ತಿಲ್ಲ
ಹೀಗೆ ಬದುಕುವುದರಲ್ಲಿ ಯಾವ ಕೀರ್ತಿಯೂ ಇಲ್ಲ.
...................................................

ನನಗನಿಸುತ್ತದೆ : ಅಷ್ಟೊಂದು ವಸ್ತುಗಳನ್ನು ನಿರ್ಮಿಸಿದವರು
ಎಲ್ಲದರ ಒಡೆಯರಾಗಿರಬೇಕು.
ರೊಟ್ಟಿ ಮಾಡುವವರು ಉಣ್ಣಬೇಕು !
ಗಣಿಯಲ್ಲಿರುವವರಿಗೆ ಬೆಳಕು ಬೇಕು !"

(ಜನತೆ)

ಹಲವು ಕವನಗಳಲ್ಲಿ ಕವಿ ನೆರೂದ ತಲುಪುವ ತಾತ್ತ್ವಿಕ ನಿಲುವು ಅವನ ರಾಜಕೀಯ ನಿಲುವನ್ನೂ ದೃಢೀಕರಿಸುತ್ತದೆ. ನೆರೂದಾನ ಕಾವ್ಯದಲ್ಲಿ ಅಮೇರಿಕಾ ಶೋಷಣೆಯ, ಹಿಂಸೆಯ ಸಂಕೇತವಾಗುತ್ತದೆ. ಲ್ಯಾಟಿನ್ ಅಮೇರಿಕಾದ, ಚಿಲಿಯ, ಜನತೆಯ ರಕ್ತಹೀರುವ ಜಿಗಣೆಯಾಗುತ್ತದೆ. ಮನುಷ್ಯ ಮನಸ್ಸೇ ಇಲ್ಲಿ ಲವಲವಿಕೆಯಿಲ್ಲದ ವಸ್ತುವಾಗುತ್ತಾನೆ. ಅಮೇರಿಕಾಕ್ಕಾಗಿ ದುಡಿಯುವ ಲ್ಯಾಟಿನ್ ಅಮೇರಿಕನ್ ದರಿದ್ರರು :

"ಹೆಸರಿಲ್ಲದ ಒಂದು ವಸ್ತುವಿನಂತೆ
ಉರುಳಿಬಿದ್ದ ಸೊನ್ನೆಯಂತೆ
ರಾಶಿಯ ಮೇಲೊಗೆದ
ಸತ್ತ ಹಣ್ಣಿನ ಗೊಂಚಲಿನಂತೆ"

ಉರುಳುವ ದೇಹಗಳಾಗುತ್ತಾರೆ. "ಅವನನ್ನು ದಂಡಿಸಿ" "ಮರೆಯುವಂತಿಲ್ಲ" ಕ್ರಿಸ್ತೊಬಲ್ ಮಿರಾಂಡ" ದಂಥ ಕವನಗಳು ನೆರೂದಾನ ರಾಜಕೀಯ ನಿಲುವನ್ನು ನಿಖರವಾಗಿ ಹೇಳುತ್ತವೆ. ಆದರೆ ತಾನು ಏನೇ ಬರೆಯಲಿ, ಬರೆದದ್ದನ್ನು ಕಾವ್ಯವಾಗಿಸಬಲ್ಲ ತಾಕತ್ತು ಅವನ ಕಾವ್ಯಕ್ಕಿವೆ. ಇದರಿಂದಾಗಿ ಆಫ್ರಿಕಾದ ಸೋಯಿಂಕಾ, ರಾಂಡಾಲ್, ಡಿಲೋಪ್, ಡೆನ್ನಿಸ್ ಬ್ರೂಟಸ್ ಇವರಾರಲ್ಲೂ ಕಂಡುಬರದ ಅನನ್ಯ ಕಾವ್ಯಾಭಿವ್ಯಕ್ತಿ ನೆರೂದಾನಲ್ಲಿ ಕಂಡುಬರುತ್ತದೆ.

"ಮಾಚು ಪಿಚ್ಚುವಿನ ಶಿಖರಗಳು" ನೆರೂದಾನ ಉತ್ತಮ ಕವನ. "ಬೈಜಾಂಟಿಯಮ್" ಅವಶೇಷಗಳು ಯೇಟ್ಸ್ ಕವಿಗೆ ಆಧ್ಯಾತ್ಮಿಕ ಬದುಕಿನ ಹೊಸ ಲಯಗಳನ್ನು ಪ್ರತಿಪಾದಿಸಿದಂತೆ, ನೆರೂದಾನಿಗೆ ಮಾಚುಪಿಚ್ಚುವಿನ ಶಿಖರಗಳ "ಸಾಂಸ್ಕೃತಿಕ ಉತ್ಕರ್ಷದ ಅಡಿಯಲ್ಲಿಯೂ ಹುದುಗಿದ ನೋವಿನ ನರಳಿಕೆ ಕೇಳುತ್ತದೆ. ಎಲ್ಲ ನಾಗರಿಕತೆಗಳೂ, ಸಂಸ್ಕೃತಿಗಳೂ ತಮ್ಮೊಳಗೆ ಮುಚ್ಚಿಟ್ಟುಕೊಂಡ ಹಿಂಸೆಯ ನೋವೇ ಬದುಕಾದ ದಲಿತ ಜನಾಂಗದ ಪಳೆಯುಳಿಕೆಗಳಾಗುತ್ತವೆ. ಸ್ಪೇನ್ ದೊರೆಗಳು ಪೆರುವಿನ ಮಾಚುಪಿಚ್ಚುವಿನ ಪ್ರದೇಶದಲ್ಲಿ ನಿರ್ಮಿಸಿದ ಅದ್ಭುತ ನಗರವ್ಯವಸ್ಥೆ ನೆರೂದಾನಿಗೆ ಶೋಷಣೆಯ ಸಂಕೇತವಾಗುತ್ತದೆ :

"ಸ್ತೋತ್ರ ಕೃತ್ಯಗಳ ಅಲ್ಪಕ್ರಿಯೆಗಳ ಅನಂತ ಕಣಜದಲ್ಲಿ
ಸಹನೆಯ ತುತ್ತ ತುದಿಗೂ ಅದರಾಚೆಗೂ
ಮಾನವ ಆತ್ಮವನ್ನು ಜೋಳದಂತೆ ಕುಟ್ಟಲಾಯಿತು"

ಮನುಕುಲದ ಈ ನೋವಿನೊಂದಿಗೆ ಕವಿ ಒಂದಾಗಿಬಿಡುತ್ತಾನೆ :

ಈ ಹೊಸ ಬದುಕಿನ ಬಟ್ಟಲಿಗೆ
ಹೊತಿಟ್ಟ ನಿಮ್ಮ ಪುರಾತನ ದುಃಖಗಳ ತನ್ನಿ.
ನಿಮ್ಮ ರಕ್ತವನ್ನು
ನಿಮ್ಮ ನೇಗಿಲು ಗೆರೆಯನ್ನು ತೋರಿಸಿ ನನಗೆ"

.......................................

ನಿಮ್ಮ ಸತ್ತ ಬಾಯಿಗಳಿಗಾಗಿ
ಮಾತಾಡಲು ನಾನು ಬಂದಿದ್ದೇನೆ.

.......................................

ಮೌನವನ್ನು ಕೊಡಿ ನನಗೆ,
ನೀರು ಕೊಡಿ
ನಿರೀಕ್ಷೆ ಕೊಡಿ
ಪ್ರಯತ್ನ ಕೊಡಿ, ಕಬ್ಬಿಣ ಕೊಡಿ, ಜ್ವಾಲಾಮುಖಿ ಕೊಡಿ ನನಗೆ.
ನಿಮ್ಮ ದೇಹಗಳು
ಸೂಜಿಗಲ್ಲಿನ ಹಾಗೆ ನನ್ನ ದೇಹಕ್ಕೆ ಅಂಟಲಿ.
ಬೇಗ ಬನ್ನಿ
ನನ್ನ ನರಗಳಿಗೆ, ನನ್ನ ಬಾಯಿಗೆ,
ನನ್ನ ಸ್ವರದಲ್ಲಿ ಮಾತಾಡಿ
ನನ್ನ ರಕ್ತದಲ್ಲಿ ಮಾತಾಡಿ.

ಆದರ್ಶಕ್ಕೂ ವಾಸ್ತವತೆಗೂ ಬಿರುಕನ್ನು ಕಲ್ಪಿಸುತ್ತಿರುವ ಈ ದಿನಗಳಲ್ಲಿ ನೆರೂದಾನಂಥ ಕವಿಯನ್ನು ಕಾಣುವುದು ಸುಲಭವಲ್ಲ. ವಾಸ್ತವ ಜಗತ್ತಿನ ಪ್ರಶ್ನೆ ಮಾನವಕುಲದ ಸಾವು-ಬದುಕಿನ ಪ್ರಶ್ನೆಯೂ ಆಗಿರುವ ಕಾರಣ ನೆರೂದಾ ಹೀಗೆ ಹೇಳುತ್ತಾನೆ :

"ನಾನೇಕೆ ಮಾತಾಡುವುದಿಲ್ಲ
ಬಯಕೆಗಳ ಬಗ್ಗೆ
ಎಲೆಗಳ ಬಗ್ಗೆ
ನನ್ನ ನಾಡಿನ ಮಹಾ ಅಗ್ನಿಪರ್ವತಗಳ ಬಗ್ಗೆ
—ಎಂದು ನೀವು ಕೇಳುತ್ತೀರಿ ;
ನೋಡಿ : ಬೀದಿಯ ಮೇಲೆ ರಕ್ತವಿದೆ !
ನೋಡಿ : ರಕ್ತವಿದೆ ಬೀದಿಯ ಮೇಲೆ !"

(ಒಂದಿಷ್ಟು ವಿವರಣೆ)

"ಜನತೆ", "ನೀರು ಹಾಡಿನ ಮುಕ್ತಾಯ","ಒಂದಿಷ್ಟು ವಿವರಣೆ", "ಮರಳಿ ಬರುವೆ", "ಮಾಚು ಪಿಚ್ಚುವಿನ ಶಿಖರಗಳು", "ಅನ್ವಾಫಗಾಸ್ಟಾ ಪರ್ವತದ ಸಮುದ್ರ ಪಕ್ಷಿ" (ಈ

ಸಂಕಲನದಲ್ಲಿಲ್ಲ) ಯಂಥ ಕವನಗಳು ಮಾನವ ಕುಲದ ಬಗೆಗೆ ನೆರೂದನಿಗಿರುವ ಆತಂಕ ವನ್ನು, ಪ್ರೀತಿಯನ್ನು, ನಂಬಿಕೆಯನ್ನು ನಿರೂಪಿಸುತ್ತವೆ. ಈ ಯುಗದ ಯಾವ ಕವಿಯಲ್ಲೂ ಕಾಣಲು ಕಷ್ಟವಾಗಬಹುದಾದ ಮಾನವ ಪ್ರೇಮವನ್ನು ನೆರೂದಾನ ಕವಿತೆಗಳು "ಕಾವ್ಯ ವಾಗಿ" ಬಿಚ್ಚಿಕೊಳ್ಳುತ್ತವೆ. ಮಾಯಕೊವ್‌ಸ್ಕಿ, ಮಾವೊತ್ಸೆತುಂಗ್ ಅವರ ಕಾವ್ಯದಿಂದ ನೆರೂದಾನ ಕಾವ್ಯ ಭಿನ್ನವಾಗುವುದೂ ಈ ಕಾರಣಕ್ಕಾಗಿಯೇ. ("The creative Experiment": C.M. Bowra ಈ ಪುಸ್ತಕದಲ್ಲಿದ ಮಾಯಕೊವ್‌ಸ್ಕಿ ಮೇಲಿನ ವಿಮರ್ಶೆ ನೋಡಿ.) ವಸಾಹತು ದೇಶಗಳಲ್ಲಾಗಲೀ, ಎರಡನೆ ಮಹಾಯುದ್ಧದ ನಂತರ ವರ್ಧಮಾನಕ್ಕೆ ಬಂದ ಕಮ್ಯುನಿಸ್ಟ್ ರಾಷ್ಟ್ರಗಳಲ್ಲಾಗಲಿ, ನೆರೂದಾನಂತ ಶ್ರೇಷ್ಠ ಕವಿ ಯಾಕೆ ಹುಟ್ಟಲು ಸಾಧ್ಯವಾಗಲಿಲ್ಲ ಎನ್ನುವುದಕ್ಕೆ ಈ ಕಾರಣವೇ ಉತ್ತರವೂ ಆಗುತ್ತದೆ.

ತೇಜಸ್ವಿನಿ ನಿರಂಜನ ಅವರು ನೆರೂದಾನ ಪದ್ಯಗಳನ್ನು ಉತ್ತಮವಾಗಿ ಅನುವಾದಿಸುವು ದರ ಜೊತೆಗೆ, ಅವನ ಕಾವ್ಯಧೋರಣೆಯನ್ನು ನಿರೂಪಿಸುವಂಥ ಪ್ರಾತಿನಿಧಿಕ ಸಂಕಲನ ವನ್ನು ನಮಗೆ ಕೊಟ್ಟಿದ್ದಾರೆ. ನೆರೂದಾನ ಈ ಸಂಕಲನ ನಮ್ಮ ಕನ್ನಡ ಕಾವ್ಯದಲ್ಲಿ ಹೊಸ ವಿಚಾರಗಳನ್ನೂ, ಹೊಸ ಲಯವನ್ನೂ, ಮುಖ್ಯವಾಗಿ ಬದಲಾಗಬೇಕಾದ ಕಾವ್ಯ ಧೋರಣೆಯನ್ನೂ ನಿರ್ವಹಿಸಬಲ್ಲ ಹೊಸ ಕಾವ್ಯದ ಸಾಧ್ಯತೆಯನ್ನು ಆಗುಮಾಡಬಹುದು.

**ಗಂಗಾಧರಮೂರ್ತಿ**

Registered with Registrar
of News Paper for India.

Reg. No. R.N. 27453/75

● ಶೋಷಣೆಯಿಂದ ಮುಕ್ತವಾದ ಸಮಾಜದ ಸೃಷ್ಟಿಯಲ್ಲಿ ನಂಬಿಕೆಯನ್ನಿಟ್ಟು **ಒಡನಾಡಿ** ಹೊರಟಿದೆ.

*   *   *   *

● ವಿದ್ಯಾಸಂಸ್ಥೆಗಳಲ್ಲಿರುವ ಜನರಿಗೂ ಅವುಗಳ ಹೊರಗಿರುವ ಜನರಿಗೂ ನಡುವೆ ಸಂವಾದವನ್ನು ಸಾಧ್ಯವಾಗಿಸುವುದು **ಒಡನಾಡಿ** ಮಾಡಬಹುದಾದ ಸದ್ಯದ ಕೆಲಸಗಳಲ್ಲಿ ಒಂದಾಗಿದೆ.

*   *   *   *

● ಭಾರತೀಯ ಪರಿಸರದಲ್ಲಿ, ವೈಜ್ಞಾನಿಕ ದೃಷ್ಟಿಯುಳ್ಳ ಸಮಾಜವಾದವನ್ನು ವಿವೇಚಿಸುವ ಉದ್ದೇಶವನ್ನು **ಒಡನಾಡಿ** ಇಟ್ಟುಕೊಂಡಿದೆ.

*   *   *   *

● ಭಾರತದ ಅರ್ಥವ್ಯವಸ್ಥೆ, ರಾಜಕೀಯ ಧೋರಣೆಗಳು, ಸಾಹಿತ್ಯಪರಂಪರೆ, ಸಂಸ್ಕೃತಿ ಹಾಗೂ ಭಾಷೆ, ಧರ್ಮ, ಜಾತಿ ಇಂಥ ಸಾಮಾಜಿಕ ನೆಲೆಗಳು, ಮತ್ತು ಭಾರತೀಯ ಮನಸ್ಸಿನ ಮೇಲೆ ಗಾಢ ಪರಿಣಾಮ ಮಾಡಿರುವ ಒಟ್ಟು ಅನುಭವ ಇವುಗಳ ವಿಶ್ಲೇಷಣೆಯನ್ನು **ಒಡನಾಡಿ** ಮಾಡಬೇಕೆಂದಿದೆ.

*   *   *   *

● ಮೂಲಭೂತ ಗುರಿಗಳ ಬಗ್ಗೆ ಓದುಗರ ಅರಿವನ್ನು ಹೆಚ್ಚಿಸುವುದು ಮತ್ತು ಸಾಮಾಜಿಕ ಬದಲಾವಣೆಯ ಕ್ರಿಯೆಯಲ್ಲಿ ಅವರು ಪಾಲುಗೊಳ್ಳುವುದನ್ನು ಸಾಧ್ಯವಾಗಿಸುವುದು, ಇವು **ಒಡನಾಡಿಯ** ಮುಖ್ಯ ಉದ್ದೇಶಗಳು.

Printed and Published by G. H. Rama Rao at Mysore Printing and Publishing House, Mysore-1 for Vikasa Prakashana, Mysore-2.
Editor : G. H. Rama Rao